ಬಿಸಿಲ

ಫೆಬ್ರವರಿ 1999 ರೂ. 10

# ವಿವಾಸ

■ ವಾಣಿಜ್ಯ ■ ವಿಕಾಸ ■ ಮಾಹಿತಿ ■ ಸಂಪರ್ಕ

ಮಾಸಪತ್ರಿಕೆ

ಬೆಂಗಳೂರಿನಲ್ಲಿ ನೀರಿಗೆ ವಿಷ!

ರಾಷ್ಟ್ರೀಯ ಕಾನೂನು ಶಾಲೆ

ಗಣಕಲೋಕದಲ್ಲಿ ಕನ್ನಡ

'ಹೃದಯ'ದ ಮಾತು



## ಎಲ್ಲೆಡೆ ವ್ಯಾಪಾರ ಡಲ್! ಕಾರಣವೇನು?

ಬಿಸಿಲ ಬದುಕು

ಫೆಬ್ರವರಿ 1999 ಸಂಪುಟ 2 ಸಂಚಿಕೆ 8

ಸಂಪಾದಕ
**ಚಂದ್ರಕಾಂತ ವಡ್ಡು**

ಉಪ ಸಂಪಾದಕರು
**ಎ.ಎಂ.ಸುರೇಶ್, ರವಿಶಂಕರ್**

ನಿರ್ವಹಣೆ
**ಸಿ.ಪಿ. ಸುರೇಶ್**

ಪ್ರಸಾರ
**ರಮೇಶ್ ವಿಟ್ಲಾಪುರ**

ಅಕ್ಷರ ಜೋಡಣೆ
**ನರೇಂದ್ರ ಪಾಟೀಲ, ಕೋಕಿಲ**

ಮುಖಪುಟ ವಿನ್ಯಾಸ
**ಅಂಕುರ**

**ವಿಳಾಸ**
**ಬಿಸಿಲ ಬದುಕು** ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079
**ದೂರವಾಣಿ : 3307810**

Printed, Published and Owned by Chandrakanta Vaddu, 473, I Cross, I Block, III Stage, Near Water Tank Bus Stop, Basaveshwaranagar, Bangalore - 560 079. Tel : 080 3307810 Pager : 9622 738638 Printed at M.N.S.Enterprises, Bhattar ahalli, Old Madras Road, Bangalore -560 049 Editor : Chandrakanta Vaddu

# ದಳ ಸರ್ಕಾರದ ಅದಕ್ಷ ಆಡಳಿತ

ಪ್ರಸ್ತುತ ರಾಜ್ಯದಲ್ಲಿ ಜನತಾದಳ ಸರ್ಕಾರ ಅಸ್ತಿತ್ವದಲ್ಲಿದೆ, ಈ ಪಕ್ಷದವರು ಆಡಳಿತ ನಡೆಸುತ್ತಿದ್ದಾರೆ ಎಂಬುದು ಜನರ ಗಮನಕ್ಕೆ ಬರುವುದು ಆಗಾಗ ಇವರಲ್ಲಿ ಸ್ಫೋಟಗೊಳ್ಳುವ ಭಿನ್ನಮತ ಪ್ರದರ್ಶನದಿಂದ ಮಾತ್ರ. ಅದರ ಹೊರತಾಗಿ ಈ ದಳಪತಿಗಳ ಆಡಳಿತ ಜನರ ನಾಡಿಮಿಡಿತಕ್ಕೆ ಸ್ಪಂದಿಸಿದ ನಿದರ್ಶನ ಇಲ್ಲವೇ ಇಲ್ಲ. ಸರ್ಕಸ್ ಪ್ರದರ್ಶನದ ಮಧ್ಯೆ ಆಗಾಗ ಕಾಣಿಸಿಕೊಂಡು ಪ್ರೇಕ್ಷಕರಿಗೆ ತಕ್ಷಣದ ಮನರಂಜನೆ ನೀಡಿ ಮರೆಯಾಗುವ ಜೋಕರ್‌ನಂತಹ ಮುಖ್ಯಮಂತ್ರಿಯನ್ನು ನಾವು ಹೊಂದಿದ್ದೇವೆ. ಗಂಭೀರ ಸಮಸ್ಯೆಗಳ ವಿಚಾರದಲ್ಲಿ ಅವರು ತೋರುವ ಹಗುರ ಧೋರಣೆ ಹಾಗೂ ಹಾಸ್ಯ ಚಟಾಕಿ ಹಾರಿಸಿ ಜಾರಿಕೊಳ್ಳುವ ಗುಣಕ್ಕೆ ಕೊನೆಗೆ ಬೆಲೆ ತೆರಬೇಕಾದವರು ಪ್ರಜೆಗಳೇ. ಇವರ ಹೆಗಲಲ್ಲಿ ಇರಬಹುದಾದ ವಯಸ್ಸಿನ ಗಂಟಾಗಲಿ, ಬೆನ್ನಿಗಂಟಿಸಿಕೊಂಡಿರುವ ಸಮಾಜವಾದಿ ಹಿನ್ನೆಲೆಯಾಗಲೀ ಅರ್ಥ ಕಂಡುಕೊಳ್ಳುವುದು ಅವರು ಆಡಳಿತಾತ್ಮಕ ದಕ್ಷತೆ ಮೆರೆದಾಗ. ನಮ್ಮ ಮುಖ್ಯಮಂತ್ರಿ ಇಂಥ ಲಕ್ಷಣದ ಗುಲಗಂಜಿ ಕಾಳಿನಷ್ಟು ಅಂಶವನ್ನೂ ಹೊಂದಿಲ್ಲ. ದಕ್ಷ ಆಡಳಿತದ ವಿಷಯದಲ್ಲಿ ನಾವು ಪಕ್ಕದ ರಾಜ್ಯದ ಮುಖ್ಯಮಂತ್ರಿ ಚಂದ್ರಬಾಬುನಾಯ್ಡು ಅವರ ಸಾಧನೆಯನ್ನು ತುಲನೆ ಮಾಡಬೇಕು. ಅವರು ಕೂಡಾ ಆದರ್ಶ, ನೈತಿಕತೆ, ಪ್ರಾಮಾಣಿಕತೆ ನಾಶವಾದ ರಾಜಕೀಯ ವಾತಾವರಣದಲ್ಲೇ ಅಧಿಕಾರ ಸೂತ್ರ ಹಿಡಿದಿದ್ದಾರೆ. ಅವರ ಪರಿಶುದ್ಧತೆ ಬಗ್ಗೆಯೂ ಅನುಮಾನಗಳಿರಬಹುದು. ಆದರೆ ದಕ್ಷತೆ ವಿಷಯದಲ್ಲಿ ಅವರ ವಿರೋಧಿಗಳೂ ಅವರೆಡೆ ಬೆರಳು ತೋರಿಸುವಂತಿಲ್ಲ. ಒಂದು ಸರ್ಕಾರ ಅಥವಾ ಒಬ್ಬ ವ್ಯಕ್ತಿಯನ್ನು ಅಳೆಯುವಾಗ ಪ್ರಾಮಾಣಿಕತೆ ಎಂಬುದು ಪರಿಗಣನಾರ್ಹ ಮಾನದಂಡ ಅಲ್ಲ ಎಂಬ ವಿಷಮ ವಾತಾವರಣ ಸೃಷ್ಟಿಯಾಗಿರುವಾಗ ಕನಿಷ್ಠ ದೈನಂದಿನ ಬದುಕು ಹಸನುಗೊಳಿಸುವಷ್ಟು ದಕ್ಷ ಆಡಳಿತವನ್ನು ಜನ ಅಪೇಕ್ಷಿಸುವುದು ಸಹಜ.

ನಮ್ಮ ಮುಖ್ಯಮಂತ್ರಿ ಎನ್ನಿಸಿಕೊಂಡ ವ್ಯಕ್ತಿಯ ದೌರ್ಬಲ್ಯ ಹೀಗಿದ್ದರೆ ಅತ್ತ ಅವರಿಗೆ ನಕ್ಷತ್ರಿಕನಂತೆ ಕಾಡುತ್ತಿರುವ ಹೊಳೆನರಸೀಪುರದ ಮಾಜಿ ಪ್ರಧಾನಿಯ ಬಣ್ಣಗಳು, ವರಸೆಗಳು ಪಕ್ಷದಲ್ಲಿ, ಜನರಲ್ಲಿ ಅಸಹ್ಯ ಹುಟ್ಟಿಸಿವೆ. ಈ ಮಧ್ಯೆ ಈ ಲಿಂಗಾಯತ ಮುಖ್ಯಮಂತ್ರಿ, ಒಕ್ಕಲಿಗ ಮಾಜಿ ಪ್ರಧಾನಿ ಸೇರಿ ಸಿದ್ಧರಾಮಯ್ಯನವರ ಮೂಲಕ ಹಿಂದುಳಿದ ಜನಾಂಗದವರ ಉದ್ಧಾರ ಮಾಡಲು ಹೊರಟಿದ್ದಾರೆ. ಈ ಎಲ್ಲಾ ಬೆಳವಣಿಗೆಗಳ ಅತಿ ದೊಡ್ಡ ದುರಂತ ಅಥವಾ ತಮಾಷೆಯೆಂದರೆ ಈ ಅಧಿಕಾರದಾಹಿಗಳು ತಮ್ಮ ದೊಂಬರಾಟದ ಮರ್ಮವನ್ನು ಜನರು ಅರಿತಿಲ್ಲವೆಂದು ಭಾವಿಸಿರುವುದು. ಈ ನಾಯಕಮಣಿಗಳು ತಾವು ಪ್ರತಿನಿಧಿಸುತ್ತೇವೆಂದು ಭಾವಿಸಿರುವ ಸ್ವಜಾತಿಯ ಸಾಮಾನ್ಯರಿಗೆ ನೆರವಾಗುವ, ನೆರವಾದ ಸುಳಿವು ಯಾರಿಗೂ ಸಿಕ್ಕಿಲ್ಲ. ಕಾಲಕಾಲಕ್ಕೆ ತಮ್ಮ ರಾಜಕೀಯ ಹಿತಾಸಕ್ತಿಗಾಗಿ ಒದಗಿ ಬರುವ ಏಣಿಯೇ ಈ ಜಾತಿ. ಅದಾದ ನಂತರ ಇವರಿಗೆ ಜಾತಿಯೂ ಬೇಕಿಲ್ಲ, ಜನರೂ ಬೇಕಿಲ್ಲ.

ದೆಹಲಿಯ ಚಳಿಯಲ್ಲಿ ಕೂತು ಸಿದ್ಧರಾಮಯ್ಯನವರೇ ಮುಂದಿನ ಮುಖ್ಯಮಂತ್ರಿ ಎಂದು ಘೋಷಿಸಿಯಾಗಿದೆ. ಈ ಘೋಷಣೆಗೆ ಪಟೇಲರು 'ಮುಂದಿನ ಚುನಾವಣೆಯಲ್ಲಿ ದಳ ಗೆದ್ದರೆ....' ಎಂಬ ವಾಕ್ಯವನ್ನು ಸೇರಿಸಿ ವಾಸ್ತವದೆಡೆ ಗಮನ ಸೆಳೆದಿದ್ದಾರೆ. ಸಿದ್ಧರಾಮಯ್ಯನವರ ಉತ್ಸಾಹವನ್ನು ನೋಡಿ ಸ್ವತಃ ದೇವೇಗೌಡರು ಮತ್ತು ಅವರ ಮಕ್ಕಳು ಕೂಡಾ ನೇಪಥ್ಯದಲ್ಲಿ ಮುಸಿ ಮುಸಿ ನಗುತ್ತಿರಬಹುದು.

ಅಂತಿಮವಾಗಿ ಈ ಎಲ್ಲಾ ಬೆಳವಣಿಗೆಗಳು ಗೌಡರ, ಪಟೇಲರ, ಸಿದ್ಧರಾಮಯ್ಯನವರ ಅವನತಿಯನ್ನಷ್ಟೇ ಸಾರುವುದಿಲ್ಲ; ಜನರ ಜೀವನವನ್ನೂ ಪ್ರಭಾವಿಸುತ್ತಿವೆ ಎಂಬುದೇ ಆತಂಕಕಾರಿ ಸಂಗತಿ.

-ಸಂಪಾದಕ

# ಸರಸ ವಾರ್ತೆ

ಈ ಫೋಟೋದಲ್ಲಿನ ಸೌಂದರ್ಯವತಿಯರ ನೋಟಕ್ಕೆ ಮರುಳಾಗಬೇಡಿ. ಇವರು ನೀವು ತಿಳಿದಂತೆ ಕೋಮಲಾಂಗಿಯರಲ್ಲ. ಮಾರ್ಕ್ವೆಸಸ್ ಕಾಡಿನ ಈ ರಾಣಿಯರು ಪಕ್ಕಾ ನರಭಕ್ಷಕರು. ಲಲನೆಯರ ನಡುವೆ ಠೀವಿಯಿಂದ ಕೂತಿರುವ ವ್ಯಕ್ತಿ ಆ ಜನಾಂಗದ ಮುಖಂಡ. ಮನುಷ್ಯರ ಮಾಂಸಕ್ಕಾಗಿ ತಹತಹಿಸುವ ಈ ಜನಾಂಗದ ಸ್ತ್ರೀಯರು ತಮ್ಮ ಸೌಂದರ್ಯ ಹಾಗೂ ಶೌರ್ಯಕ್ಕೆ ಪ್ರಸಿದ್ಧರು. ಹಿಂದೆ 1903ರಲ್ಲಿ ಗಿಲ್ಬರ್ಟ್ ಎಂಬ ಸಂಪಾದಕ ಫಿಲಿಪೈನ್ಸ್ ನಗ್ನ ಮಹಿಳೆಯರ ಫೋಟೋಗಳನ್ನು ಪ್ರಕಟಿಸಿದಾಗ, 'ಇಂಥ ಚಿತ್ರಗಳು ಆ ಸಮಯದ ಆ ಜನಾಂಗದ ನೈಜ ಸಂಪ್ರದಾಯ ಬಿಂಬಿಸುತ್ತವೆ' ಎಂದು ಸಮರ್ಥಿಸಿಕೊಂಡಿದ್ದ. ಈಗ ಈ ಚಿತ್ರ ಪ್ರಕಟಿಸಿದ ಅಂತಾರಾಷ್ಟ್ರೀಯ ಖ್ಯಾತಿಯ 'ನ್ಯಾಷನಲ್ ಜಿಯಾಗ್ರಫಿಕ್' ಪತ್ರಿಕೆ ಇದೇ ಮಾತನ್ನು ಪುನರುಚ್ಚರಿಸಿರುವುದು ಸಹಜವೇ. ಆದರೆ ಶೀಲ ಮತ್ತು ಅಶ್ಲೀಲದ ನಡುವಿನ ತೆಳುಗೆರೆಯನ್ನು ಗುರುತಿಸುವವರು ಎಷ್ಟು ಜನ ಸಿಕ್ಕಾರು?



❍

ಸೋನಿಯಾ ಗಾಂಧಿಯನ್ನು ಈವರೆಗೆ ಕಡಿಮೆ ಅಂದಾಜು ಮಾಡಿದವರೇ ಹೆಚ್ಚು. ಇತ್ತೀಚೆಗೆ ಉತ್ತರದ ರಾಜ್ಯಗಳಲ್ಲಿ ಬಿಜೆಪಿಗೆ ನೀರು ಕುಡಿಸಿದ ನಂತರ ಈಯಮ್ಮ ಇದ್ದಕ್ಕಿದ್ದಂತೆ ಪ್ರಾಮುಖ್ಯ ಗಳಿಸಿಬಿಟ್ಟಿದ್ದಾರೆ. ಅಧಿಕಾರವಿಲ್ಲದೆ ವೇದನೆ ಅನುಭವಿಸುತ್ತಿದ್ದ ಕಾಂಗೈಗಳು ಗರಿ ಗರಿ ಖಾದಿ ಅರಿವೆಗಳನ್ನು



ಧರಿಸಿ ಖಡಕ್ಕಾಗಿ ಓಡಾಡುತ್ತಿದ್ದಾರೆ. 70ರ ದಶಕದಲ್ಲಿ ಇಂದಿರಮ್ಮನಿಗಿದ್ದ ವರ್ಚಸ್ಸು ಸೋನಿಯಾಗೂ ಬರತೊಡಗಿರುವುದು ಕಾಂಗೈಗಳಲ್ಲಿ ಪುಳಕ ಹುಟ್ಟಿಸಿದ್ದು ದಿಟ. ಆದರೆ ಅಧಿಕಾರದ ಚುಕ್ಕಾಣಿ ಹಿಡಿಯಲು ತುದಿಗಾಲ ಮೇಲೆ ನಿಂತಿರುವ ಪಕ್ಷದ ರಾಜ್ಯ-ರಾಷ್ಟ್ರ ನಾಯಕರಿಗೆ ಮಾತ್ರ ಒಳಗೊಳಗೇ ನಡುಕ. ಏಕೆಂದರೆ ಸೋನಿಯಾ ಗಾಂಧಿ ಯಾವಾಗ ಯಾರಿಗೆ ನೀರು ಕುಡಿಸುತ್ತಾರೆ ಎಂಬುದರ ಅರಿವು- ಅಂದಾಜು ಯಾರಿಗೂ ಇರುವುದಿಲ್ಲ.

ಕೆಲವೇ ದಿನಗಳ ಹಿಂದೆ ಕೃತಕ ಪೆಟ್ರೋಲ್ ಸೃಷ್ಟಿಸಿರುವುದಾಗಿ ಪ್ರಚಂಡ ಸುದ್ದಿ ಮಾಡಿ ಮರೆಯಾಗಿದ್ದ ತಮಿಳುನಾಡಿನ ರಾಮರ್ ಪಿಳ್ಳೆ ಇದೀಗ ಪಕ್ಕಾ ಉದ್ಯಮಿಯಾಗಿ ಹೊರಬಂದಿದ್ದಾರೆ. ಆತನ ''ತಮಿಳು ದೇವಿ ಗಿಡಮೂಲಿಕೆ ತೈಲ ಕಂಪನಿ''ಯು ದಿನಂಪ್ರತಿ ಒಂದು ಲಕ್ಷ ಲೀಟರ್ ಗಿಡಮೂಲಿಕೆ ಇಂಧನ ತಯಾರಿಸಿ ಲೀಟರಿಗೆ ರೂ. 15 ರಂತೆ ಮಾರಾಟ ಮಾಡುವುದಾಗಿ ಘೋಷಿಸಿದೆ. ಈ ಕಂಪನಿಯ ಆರಂಭಿಕ ಬಂಡವಾಳ 2 ಕೋಟಿ ರೂಪಾಯಿ.

ಹೌದು ಈ ಪಿಳ್ಳೆಯ ಇಂಧನದಲ್ಲಿ ಇರುವ ರಾಸಾಯನಿಕವಾದರೂ ಏನು? ಪೆಟ್ರೋಲಿಗೂ ಅದಕ್ಕೂ ಏನು ಸಂಬಂಧ? ಇಂಥ ಪ್ರಶ್ನೆಗಳಿಗೆಲ್ಲಾ ಪಿಳ್ಳೆ ಉತ್ತರಿಸುವುದಿಲ್ಲ. ''ನಮಗಿನ್ನೂ ಅಂತಾರಾಷ್ಟ್ರೀಯ ಪೇಟೆಂಟ್ ಸಿಕ್ಕಿಲ್ಲ. ನಂತರ ಅದರ ರಹಸ್ಯ ಬಹಿರಂಗಪಡಿಸುವೆ'' ಎನ್ನುತ್ತಾರೆ. ■

# ಒಳನೋಟ



### ವಿದ್ಯೆ - ಉದ್ಯೋಗ
























### ಸ್ಥಿರ ಶೀರ್ಷಿಕೆಗಳು

# ಟಪಾಲು



## ಸಾವಿನಿಂದ ಬದುಕಿಗೆ

- ಎನ್. ಸಿ. ಪಾಟೀಲ, ಬಿಜಾಪುರ

ನಿಮ್ಮ ಪತ್ರಿಕೆಯಲ್ಲಿನ 'ವಯಸ್ಕರ ಸಂದೇಹ - ಸಲಹೆ' ಅಂಕಣದಿಂದ ಮನಸ್ಸಿಗೆ ನೆಮ್ಮದಿ ಸಿಗುತ್ತಿದೆ. ಸಾಯುವ ಜೀವಗಳು ಬದುಕಿ ನೆಡೆ ತಿರುಗುವಂತೆ ಮಾಡುತ್ತಿದ್ದೀರಿ. ಏಡ್ಸ್ ಬಗೆಗಿನ ವಿವರಗಳಂತೂ ಅತ್ಯಂತ ಉಪಯುಕ್ತ.

### ಪ್ರಥಮ ಸಂಚಿಕೆ

- ಬಿ.ಸಿ. ಸತೀಶ್, ಗುಬ್ಬಿ

ಹೊಸ ವರ್ಷದ ಪ್ರಥಮ ಸಂಚಿಕೆ ಚೆನ್ನಾಗಿ ಮೂಡಿ ಬಂದಿದೆ. ಇನ್ನು ಮುಂದೆ ಕ್ವಿಜ್ ರೀತಿಯಲ್ಲೇ ಪ್ರಬಂಧ ಸ್ಪರ್ಧೆ, ಪದಬಂಧ ಸ್ಪರ್ಧೆ ಏರ್ಪಡಿಸಿದರೆ ಓದುಗರು ಹೆಚ್ಚುತ್ತಾರೆ. ಕ್ವಿಜ್‌ನ ಪ್ರಶ್ನೆಗಳ ಸಂಖ್ಯೆ ಹೆಚ್ಚಿಸಿರಿ.

### ವಿಳಾಸ ತಿಳಿಸಿ

- ಎ. ಎನ್. ಮಹಾಲೆ, ಹೊನ್ನಾವರ.

'ಆಪ್ತ ಸಮಾಲೋಚನೆ' ಮೂಲಕ ಜನಮನ ಗೆದ್ದಿರುವ ಡಾ. ವಸುಂಧರಾ ಭೂಪತಿ ಅವರ ವಿಳಾಸ ತಿಳಿಸುವಿರಾ?

**[ಕ್ಷಮಿಸಿ. ಈ ಅಂಕಣಕ್ಕೆ ಸಂಬಂಧಿಸಿದಂತೆ ಪತ್ರಿಕೆ ವಿಳಾಸಕ್ಕೇ ವ್ಯವಹರಿಸಬೇಕು. - ಸಂ]**

### ಲೇಖನದಿಂದ ಬೇಸರ

-ಚಂದ್ರಶೇಖರಗೌಡ ಪಾಟೀಲ್, ಮೋರಟಗಿ

'ಫೈರ್ ಚಲನಚಿತ್ರಕ್ಕೆ ಪೆಟ್ರೋಲ್ ಸುರಿದ ಶಿವಸೇನೆ' ಲೇಖನ ಓದಿ ನನಗೆ ಬೇಸರ ಎನಿಸಿತು. ಹಿಂದೂ ಧರ್ಮದ ಪತೀವ್ರತ ದೇವತೆಗಳ ಹೆಸರನ್ನು ಇಟ್ಟು 'ಸ್ತ್ರೀ ಸಲಿಂಗ ಕಾಮ' ತೋರಿಸುವುದು ಸರಿಯಲ್ಲ. 'ರೋಜಾ', 'ಬಾಂಬೆ', ಚಲನ ಚಿತ್ರಗಳಲ್ಲಿ ಏನು ಕೆಟ್ಟದಿತ್ತು ಎಂದು ಸೆನ್ಸಾರ್ ಮಂಡಳಿಯವರು 4 ರೀಲ್ ಕಟ್ ಮಾಡಿದರು? ಇದೆಲ್ಲಾ ರಾಜಕೀಯ ಎಂದು ಚಿಕ್ಕ ಹುಡುಗರಿಗೂ ತಿಳಿಯುತ್ತದೆ.

### ಉಚಿತ ಕ್ಯಾಲೆಂಡರ್

-ಬಸವರಾಜ ಪಾಟೀಲ, ಗದಗ

ಜನೆವರಿ ಸಂಚಿಕೆ ಜೊತೆಗೆ ಉಚಿತ ಕ್ಯಾಲೆಂಡರ್ ಬಂದಿದ್ದರಿಂದ ನಮಗೆ ಬಹಳ ಸಂತೋಷವಾಯಿತು.

### ತಪ್ಪು ಸಲಹೆ

- ಮಧು ಬಿ., ಹರಪನಹಳ್ಳಿ

ಜನೆವರಿ 'ಆಪ್ತ ಸಮಾಲೋಚನೆ'ಯಲ್ಲಿ ನೀವು ನೀಡಿದ ಸಲಹೆ (ಹುಡುಗಿಗೆ ಕಣ್ಣು ಹೊಡೆದರೆ) ತಪ್ಪು ಎಂದು ನನ್ನ ಭಾವನೆ. ಇವತ್ತಿನ ಪರಿಸ್ಥಿತಿಯಲ್ಲಿ ಒಬ್ಬ ಹುಡುಗಿ ಸುಮ್ಮನೆ ತಲೆ ತಗ್ಗಿಸಿಕೊಂಡು ಹೋಗುವುದೆಂದರೆ ಆಕೆ ಆ ಹುಡುಗನನ್ನು ಪ್ರೀತಿಸುತ್ತಾಳೆ ಅಂತ ಅರ್ಥ. ಆಕೆಗೆ ಇಷ್ಟವಿಲ್ಲದಿದ್ದರೆ 'ಅಣ್ಣ' ಎಂದು ಮಾತನಾಡಿಸುವ ಬದಲು ನೇರವಾಗಿ ತನ್ನ ಅಭಿಪ್ರಾಯ ಹೇಳುತ್ತಿದ್ದಳು. ಇದು ನನಗೆ ಹಾಗೂ ನನ್ನ ಸ್ನೇಹಿತನಿಗೆ ಆದ ಅನುಭವ!

### ಗುಣಮಟ್ಟ

-ಲಿಂಬಣ್ಣ ವಡ್ಡಿಕೊಪ್ಪ, ಕರ್ಜಗಿ

ನನ್ನ ಸಲಹೆಯಂತೆ 'ಸಂಪಾದಕೀಯ' ಪ್ರಾರಂಭವಾಗಿದೆ. ಸಂತೋಷ. ಪತ್ರಿಕೆಯ ಗುಣ-ಮಟ್ಟ ಕಳೆದ ವರ್ಷದಂತೆ ಇಲ್ಲ ಎಂಬುದು ಒಬ್ಬಿಬ್ಬರ ಅಭಿಪ್ರಾಯ.

### ಲೈಂಗಿಕ ಶಿಕ್ಷಣ

- ಕೃಷ್ಣಾ ನಾ. ರಾಯಬಾಗಿ, ಬೆಟಗೇರಿ

'ವಯಸ್ಕರಿಗಾಗಿ' ಮತ್ತು 'ಆಪ್ತ ಸಮಾಲೋಚನೆ'ಯಲ್ಲಿ ಎಷ್ಟೋಂದು ಹೆಂಗಸರು, ಗಂಡಸರು ತಮ್ಮ ಸಮಸ್ಯೆ ತೋಡಿಕೊಂಡು ಸಮರ್ಪಕ ಸಲಹೆ ಪಡೆಯುತ್ತಿದ್ದಾರೆ. ನಿಮ್ಮ ಪತ್ರಿಕೆಯಲ್ಲಿ ಓದುಗರಿಗೆ- ವಿಶೇಷವಾಗಿ ಯುವಕ ಯುವತಿಯರಿಗೆ - ಲೈಂಗಿಕ ಶಿಕ್ಷಣ ನೀಡಿದರೆ ಒಳಿತು. ಇಲ್ಲದಿದ್ದರೆ ಅನೇಕ ಬಾಲಕ ಬಾಲಕಿಯರು ಈ ವಿಷಯದ ಬಗ್ಗೆ ಕತ್ತಲಲ್ಲೇ ಉಳಿಯುತ್ತಾರೆ.

### ವಿಷಾದ

ಜನೆವರಿ ಸಂಚಿಕೆಯ 29ನೇ ಪುಟದಲ್ಲಿ ಪ್ರಕಟವಾದ ಚಿತ್ರವನ್ನು ರಚಿಸಿದ ಕಲಾವಿದರು ವಿಜಯಾನಂದ ಕಾಲವಾಡ. ಕಣ್ತಪ್ಪಿನಿಂದ ಅವರ ಹೆಸರು ಬಿಟ್ಟುಹೋದದ್ದಕ್ಕೆ ವಿಷಾದಿಸುತ್ತೇವೆ.

- ಸಂ

### ಪತ್ರಮಿತ್ರರು

-ಮಂಜುನಾಥ, ಕೆ.ಟಿ.ಹಳ್ಳಿ

ನೀವು ಕಳಿಸಿದ ಡಿ.ಡಿ. ತಲುಪಿದೆ. ಸಂತೋಷವಾಯಿತು. ನಿಮ್ಮ ಪತ್ರಿಕೆಯನ್ನು ತಪ್ಪದೇ ಓದುವ ಕನ್ನಡಿಗರಲ್ಲಿ ನಾನೂ ಒಬ್ಬ. ಎಲ್ಲಾ ಲೇಖನಗಳು ಚೆನ್ನಾಗಿ ಮೂಡಿ ಬರುತ್ತಿವೆ. ಇನ್ನೊಂದು ಸಂತಸದ ವಿಚಾರವೆಂದರೆ ನಿಮ್ಮ ಪತ್ರಿಕೆ ನನಗೆ 'ಪೆನ್ ಫ್ರೆಂಡ್‌ಶಿಪ್' ಕರುಣಿಸಿದೆ. ನನ್ನ ವಿಳಾಸ ಪ್ರಕಟಿಸಿದ ಬದುಕು - ಆತ್ಮೀಯ ಗೆಳೆಯರನ್ನು ನನ್ನ ಮಡಿಲಿಗರಿದೆ. ಇಷ್ಟೇ ಸಾಕಲ್ವೇ ಬದುಕಿಗೆ.

### 4 ರೂ. ಇಡಿ

- ಎಂ.ವಿ. ಬಾಪಟ್, ಸೊರಬ

ನೀವು ಮಾರ್ಚ್‌ನಿಂದ 'ಮನೆ' ವಾರಪತ್ರಿಕೆ ಪ್ರಾರಂಭಿಸುತ್ತಿರುವುದು ತಿಳಿದು ಸಂತೋಷವಾಯಿತು. ನೀವು ಪತ್ರಿಕೆಯ ಬೆಲೆ 2/- ರೂ ಇಡುವುದರ ಬದಲು 4/- ರೂ. ಇಟ್ಟು ಹೆಚ್ಚಿನ ಪುಟಗಳನ್ನು ಕೊಡಿರಿ. 4/-ರೂ. ಇಟ್ಟರೂ ಬೆಲೆ ಕಡಿಮೆ ಎಂದೆ ಹೇಳಬಹುದು. ಏಕೆಂದರೆ ತರಂಗ, ಸುಧಾ 7/-ರೂ. ಮಾಡಿದ್ದಾರೆ. ಮನೆ ಮತ್ತು ಇತರೆ 3 ಪತ್ರಿಕೆಗಳನ್ನು ಬೇಗನೆ ಪ್ರಾರಂಭಿಸಿರಿ.

# ಟಪಾಲು

ಪತ್ರಿಕೆಗಳಲ್ಲಿ 1 ಪತ್ರಿಕೆಯನ್ನು Sports weekly ಮಾಡಿರಿ.

## ತಲೆ ಕೆಟ್ಟಿದೆಯೇ?

**-ಹಾ.ಶಿ. ಗೌಡ**, ಹ.ಬೊ.ಹಳ್ಳಿ

ರೀ ಸ್ವಾಮಿ ಸಂಪಾದಕರೆ, ಇಂತಹ ದುಬಾರಿ ಕಾಲದಲ್ಲಿ ಜಾಹೀರಾತು ಇಲ್ಲದೇ ಪತ್ರಿಕೆ ನಡೆಸುವುದೇ ಕಷ್ಟವಿರುವಾಗ, ನೀವು ಉಚಿತ ಜಾಹೀರಾತು ಅಂತ ಪ್ರಕಟಿಸಿರುವಿರಲ್ಲಾ, ನಿಮಗೇನಾದರೂ ತಲೆ ಕೆಟ್ಟಿದೆಯೇ?! ನಿಮ್ಮ ಕಛೇರಿಯನ್ನು ತಲುಪುವ ಮೊದಲ 50 ಕೂಪನ್‌ಗಳಿಗೆ ಮಾತ್ರ ಈ ಅವಕಾಶ ಎಂದರೆ ಹೇಗೆ ಸಾರ್. ಬೆಂಗಳೂರಿನವರು ಅವತ್ತೇ ಪೋಸ್ಟ್ ಮಾಡಿದರೆ ನಿಮಗೆ ಸಾಯಂಕಾಲವೋ ಮರುದಿನವೋ ತಲುಪಿ ಬಿಡುತ್ತದೆ. ನಮ್ಮಂತಹ ದೂರದ ಪ್ರದೇಶದವರ ಗತಿ ಏನು? 3-4 ದಿವಸಕ್ಕೆ ನಾವು ಹಾಕಿದ ಪತ್ರ ನಿಮಗೆ ತಲುಪಿದರೆ?

## ಪ್ರಬುದ್ಧತೆ ಕಡೆಗೆ

**ಟಿ.ವಿ. ವೆಂಕಟರಮಣಯ್ಯ**, ಬೆಂಗಳೂರು

ಜನೆವರಿ ಸಂಚಿಕೆಯಲ್ಲಿ ಪ್ರಕಟವಾಗಿರುವ ಹೆಣ್ಣು ಸಂತತಿ ನಾಶವಾಗುತ್ತಿದೆಯೇ?, ಇಂಟರ್‌ನೆಟ್, ತುಂಗಭದ್ರೆ ವರವೋ ಶಾಪವೋ? ಎಂಬ ಮೂರು ಲೇಖನಗಳು ಸಮೃದ್ಧ ಮಾಹಿತಿಯಿಂದ ಕೂಡಿದ್ದು, ಬಹಳ ಉಪಯುಕ್ತವಾಗಿವೆ. ಮೊದಲ ಲೇಖನವಂತೂ ವಿಚಾರಣೀಯ. ಲೋಕವು ಈ ದಿಶೆಯಲ್ಲಿ ಚಿಂತಿಸಬೇಕಾಗಿದೆ. ಮಾಹಿತಿಯ ಮಂತ್ರದಂಡ ಸೊಗಸಾದ, ಸರಳವಾದ ನಿರೂಪಣೆ. ಆಧುನಿಕ ಮಾಹಿತಿ ತಂತ್ರಜ್ಞಾನವನ್ನು ಕನ್ನಡದಲ್ಲಿ ಹೇಗೆ ಅರ್ಥವಾಗುವಂತೆ ನಿರೂಪಿಸಬಹುದು ಎಂಬುದನ್ನು ನಿರ್ದೇಶಿಸುವ ಬರಹ.

ಮೂರನೆಯ ಲೇಖನ ಡಾ. ಶ್ರೀನಿವಾಸ ಹಾವನೂರರ ವಿಶಿಷ್ಟ ಶೈಲಿಯ ದ್ಯೋತಕವಾಗಿದ್ದು, ಚಾರಿತ್ರಿಕ ಸಂಗತಿಗಳಿಂದ ಸಮೃದ್ಧವಾಗಿದೆ.

'ಬದುಕು' ತಿಂಗಳಿಂದ ತಿಂಗಳಿಗೆ ಪ್ರಬುದ್ಧತೆ ಕಡೆಗೆ ಸಾಗುತ್ತಿರುವುದು ಹೆಮ್ಮೆಯ ವಿಷಯ. ಕರ್ನಾಟಕದಲ್ಲಿ ಇದೊಂದು ಅನನ್ಯ ಮಾಸಿಕವಾಗಲಿ ಎಂದು ಹಾರೈಸುತ್ತೇನೆ.

## ಬದುಕು ಹೆಗ್ಗಳಿಕೆ

**-ರಘುನಾಥ್ ಚ.ಹ.**, ಶಿರಾ

'ಬಿಸಿಲ ಬದುಕು' ಪತ್ರಿಕೆಯ ಖಾಯಂ ಓದುಗ ಅಭಿಮಾನಿಯಾದ ನನಗೆ ಬದುಕು ಕುರಿತು ಇನ್ನಿಲ್ಲದ ಅಭಿಮಾನ. ಚಂದಾದಾರನಾಗಲಿಕ್ಕೆ ಸಾಧ್ಯವಾಗದೆ, ಪ್ರಸ್ತುತ ಶಿರಾದಲ್ಲಿ ಬದುಕು ಸಿಗದೆ, ಸನಿಹದ ಮಧುಗಿರಿ, ತುಮಕೂರಿನಿಂದ ಗೆಳೆಯರ ಹತ್ತಿರ ಬದುಕು ತರಿಸಿ ಓದುತ್ತೇನೆ. ಬದುಕಿನ ಮತ್ತೊಂದು ಹೆಗ್ಗಳಿಕೆ ನನಗೆ ಖುಷಿ ತಂದಿದೆ. ಕಳೆದ ಯುಗಾದಿಯಲ್ಲಿನ ಕಥಾ ಸ್ಪರ್ಧೆಯಲ್ಲಿ ಆವರೆಗೆ ಯಾರೂ ನೀಡದ 5000 ರೂ. ಮೊತ್ತದ ಬಹುಮಾನ ಪ್ರಕಟಿಸಿದಿರಿ. ಇದರಿಂದ ಅದುವರೆಗೂ ದೀಪಾವಳಿ ಕಥಾ ಸ್ಪರ್ಧೆಯಲ್ಲಿ 4000 ರೂ. ಬಹುಮಾನ ನೀಡುತ್ತಿದ್ದ ಪ್ರಜಾವಾಣಿ ಮೊತ್ತವನ್ನು 5000ಕ್ಕೆ ಏರಿಸಿ ಬದುಕಿನ ಜೊತೆಯಲ್ಲಿ ತನ್ನನ್ನು ಗುರುತಿಸಿಕೊಂಡಿತು. ಅಂತೆಯೇ ಈ ಬಾರಿ ಸಂಕ್ರಾಂತಿ ಕಥಾ ಸ್ಪರ್ಧೆಯಲ್ಲಿ ಕನ್ನಡ ಪ್ರಭ 10000 ರೂ. ಬಹುಮಾನ ನೀಡಿದೆ. ಇವೆಲ್ಲಾ ಕಥೆಗಾರರಿಗೆ ಆ ಮೂಲಕ ಕಥಾ ಸಾಹಿತ್ಯ ಬೆಳೆವಣಿಗೆಗೆ ಉತ್ತೇಜಕ ಅಂಶಗಳು. ಈ ನಿಟ್ಟಿನಲ್ಲಿ ಚಾಲನೆ ಒದಗಿಸಿದ್ದು, ನಮ್ಮ 'ಬದುಕು' ಎಂಬ ಹೆಗ್ಗಳಿಕೆ ನಮ್ಮದು.

## ಸಮೀಪ ಪ್ರಭಾವ

**-ಕಲಗಿ**, ಐನಾಪುರ

ಜನೆವರಿ ಸಂಚಿಕೆಯಲ್ಲಿ ಮೂಡಿಬಂದ ಅರವಿಂದ ಸಿಗದಾಳ ಅವರ ದೂರದರ್ಶನದ ಸಮೀಪ ಪ್ರಭಾವ ಎಂಬ ಲೇಖನವು ನಮಗೆ ಮಾರ್ಗದರ್ಶಿಯಾಗಿತ್ತು. ಪ್ರತಿದಿನ ದೂರದರ್ಶನ ವೀಕ್ಷಿಸುವ ನಮಗೆ ಅದು ನಮ್ಮ ಮೇಲೆ ಮಾಡುವ ಪ್ರಭಾವದ ಬಗ್ಗೆ ತಿಳಿದಿರಲಿಲ್ಲ. ಈ ಲೇಖನವು ನಮಗೆ ದೂರದರ್ಶನದ ಪ್ರಭಾವದ ಬಗ್ಗೆ ಸಂಪೂರ್ಣ ಮಾಹಿತಿ ನೀಡಿದೆ.

## ಅನುಮಾನದ ಪಿಶಾಚಿಗಳು

**ಕೆ.ಎಂ. ಮಲ್ಲಿಕಾರ್ಜುನಯ್ಯ**, ಆಲಬನೂರು

ಅನುಮಾನದ ಪಿಶಾಚಿಗಳನ್ನು ಲೆಕ್ಕಿಸದೆ ಬಿಸಿಲ ಬದುಕು ಪತ್ರಿಕೆ ಕನ್ನಡ ಪತ್ರಿಕಾ ರಂಗದಲ್ಲಿ ವಿನೂತನ ದಾಖಲೆಯನ್ನು ಸ್ಥಾಪಿಸುವತ್ತ ಮುನ್ನುಗ್ಗುತ್ತಿರುವುದು ಪ್ರತಿಯೊಬ್ಬ ಓದುಗನು ಹೆಮ್ಮೆಪಡಬೇಕಾದಂತಹ ವಿಷಯವಾಗಿದೆ. ಇನ್ನೊಬ್ಬರ ಉತ್ತಮ ಕಾರ್ಯಗಳಲ್ಲಿ ಮುಳ್ಳಾಗಿ ಬರುವವರು ನಿಜಕ್ಕೂ ಹೇಡಿಗಳೇ ಸರಿ. ತಮ್ಮಿಂದ ಆಗದದ್ದನ್ನು ಇನ್ನೊಬ್ಬರಿಂದಲೂ ಆಗಬಾರದೆಂಬುದನ್ನು ಬಯಸುವುದು ನಿಜಕ್ಕೂ ನಾಚಿಕೆಗೇಡಿನ ಸಂಗತಿ.

## ಅರ್ಥ - ಅಪಾರ್ಥ

ಎಸ್.ಟಿ.ಎಫ್.ನವರಿಗೂ ವೀರಪ್ಪನ್‌ಗೂ ನಡುವೆ **ಎಂದು** ಕಿ.ಮೀ. ಅಂತರವಿದ್ದುದರಿಂದ ಅವನ ಮೇಲೆ ಗುಂಡು ಹಾರಿಸಲಾಗಲಿಲ್ಲ.
[*ಸಂಯುಕ್ತ ಕರ್ನಾಟಕ*, 8.12.98] **-ಬಾವಾಸಾಬ ರಾ. ವಂಟಿ**, ಹುನಗುಂದ.

ಈ ಬಾರಿ ವಿಮರ್ಶೆಗೆ ಸೂಚಿಸುವ ಕಥೆ ಜಯಶ್ರೀ ದಿವಾಕರ್ ಅವರ 'ಮುಸ್ಸಂಜೆಯಲ್ಲಿ.... '' ನಿಮ್ಮ ವಿಮರ್ಶೆ **ನಿಮ್ಮ** ಕೈ ಸೇರಲು ಕೊನೆಯ ದಿನ ಜನೆವರಿ 20, 1999.
[**ಮಯೂರ**, ವಿಮರ್ಶೆ ವಿಭಾಗ, ಜನೆವರಿ 1999] **- ಆಂತೋನಿ (ಪ್ರಸನ್ನ) ಜೆ.**, ತಿಪಟೂರು.

ಹುನಗುಂದದಲ್ಲಿ ಇತ್ತೀಚೆಗೆ **ಭಾರತ ರತ್ನಿ** ಮೌಲಾನಾ ಅಬ್ದುಲ್ ಕಲಾಂ ಆಜಾದ್ ಅವರ 110 ನೇ ಜನ್ಮ ದಿನಾಚರಣೆ.
[*ಸಂಜೆವಾಣಿ (ಹುಬ್ಬಳ್ಳಿ)*, 21.11.98] **-ಬಸವರಾಜ ಗೊಂಧಳೆ**, ನಾಲತವಾಡ

ದೆಹಲಿಯಲ್ಲಿ ವಿಧಾನಸಭೆ ಚುನಾವಣೆ ಹತ್ತಿರ ಬಂದಿರುವುದರಿಂದ ಭಾರತೀಯ ಜನತಾ ಪಕ್ಷದ ವರ್ಚಸ್ಸಿಗೆ ಮಸಿ ಬಳಿಯಲು ಪಟ್ಟಭದ್ರ ಹಿತಾಸಕ್ತಿಗಳು ಹೂಡಿದ ತಂತ್ರವಿದು ಎಂದು **ಹೆದಲಿ** ಮುಖ್ಯಮಂತ್ರಿ ಸುಷ್ಮ ಸ್ವರಾಜ್ ಅವರು ಆರೋಪಿಸಿದ್ದಾರೆ.
[**ಕನ್ನಡ ಪ್ರಭ**, 3.11.98] **-ಕೆ.ಎ. ಧುಳೇಹೊಳಿ**, ದೇವಗೊಂಡನ ಕಟ್ಟಿ

ರಕ್ಷಣೆ ನೀಡುವ ಪೊಲೀಸ್ ವ್ಯವಸ್ಥೆಯೇ **ಗೋಂಡಾ** ಪ್ರವೃತ್ತಿ ಅನುಸರಿಸಿದರೆ ಸಾಮಾನ್ಯ ಜನರು ಯಾರ ಬಳಿಗೆ ಹೋಗಬೇಕು.
[**ಪ್ರಜಾವಾಣಿ**, *25.7.98*] **-ಲೀಲಾಧರ ಭಂಡಾರಿ**, ರುಕ್ಮಾಪುರ



ಎಲ್ಲೆಡೆ ವ್ಯಾಪಾರ ಡಲ್! ಏಕೆ?

# ಮಾರುಕಟ್ಟೆ ಮುಗ್ಗಟ್ಟು ಬದುಕಿನ ಬಿಕ್ಕಟ್ಟು

■ ಟಿ. ಆರ್. ಚಂದ್ರಶೇಖರ
ಪ್ರವಾಚಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ, ಕಮಲಾಪುರ- 583 221

'ಹಣ ಬಹಳ ಟೈಟ್ ಆಗಿ ಬಿಟ್ಟಿದೆ' ಎಂಬುದು ವ್ಯಾಪಾರ ವ್ಯವಹಾರ ಉದ್ದಿಮೆಗಳಲ್ಲಿರುವ ಜನರ ಬಾಯಲ್ಲಿ ಇತ್ತೀಚೆಗೆ ಸಾಮಾನ್ಯವಾಗಿರುವ ಒಂದು ಮಾತು. 'ಮಾರುಕಟ್ಟೆ ಖಾಲಿ ಹೊಡೆಯುತ್ತಿದೆ ಬಿಕೊ ಎನ್ನುತ್ತಿದೆ' ಎಂದು ಹೇಳಲಾಗುತ್ತಿದೆ. 'ರಫ್ತು ಮಾರುಕಟ್ಟೆ ನಿಸ್ತೇಜಗೊಂಡು ನೆಲ ಕಚ್ಚಿದೆ' ಎಂದು ಸರ್ಕಾರ ಹಲುಬುತ್ತಿದೆ. ಉದ್ದಿಮೆಗಳು ಆಮ್ಲಜನಕದ ಗೂಡಿನಲ್ಲಿ ಉಸಿರಾಡುತ್ತಿವೆ ಎಂದು, 'ಅವು ಯಾವಾಗಬೇಕಾದರೂ ಉಸಿರು ಬಿಡಬಹುದು' ಎಂದು ಹೇಳಲಾಗುತ್ತಿದೆ. 'ಉದ್ಯೋಗಾವಕಾಶಗಳು ವಿಸ್ತರಣೆಯಾಗುವುದಿರಲಿ, ಇರುವ ಉದ್ಯೋಗಗಳು ಕಡಿಮೆಯಾಗದಿದ್ದರೆ ಸಾಕು - ಅದೇ ಒಂದು ದೊಡ್ಡ ಸಾಧನೆಯಾದೀತು' ಎಂದು ಕೆಲವರು ಟಿಪ್ಪಣಿಸುತ್ತಿದ್ದಾರೆ.

ಹಾಗಾದರೆ ನಮ್ಮ ಮಾರುಕಟ್ಟೆಗೆ ಆರ್ಥಿಕತೆಗೆ ಏನಾಗಿದೆ? ಯಾವ ರೋಗ ಬಡಿದಿದೆ? ಯಾಕೆ ವ್ಯಾಪಾರ ವ್ಯವಹಾರ ಕುಂಠಿತಗೊಂಡಿದೆ? ಎಲ್ಲೆಲ್ಲೂ ಹತಾಶೆ ನಿರಾಶೆ ಎದ್ದು ಕಾಣುತ್ತಿದೆ! ಉದಾರೀಕರಣ-ಜಾಗತೀಕರಣಗಳು ಸೃಷ್ಟಿಸಿಬಿಡುತ್ತವೆ ಎಂದು ಹೇಳುತ್ತಿದ್ದ ಮಹಾನಿರೀಕ್ಷೆಗಳ ಕ್ರಾಂತಿ ಪುಸ್ಸೆಂದು ಬಿಟ್ಟಂತೆ ಕಾಣುತ್ತಿದೆ. ಆರ್ಥಿಕತೆಯ ಮುಂದಿರುವ ಇಕ್ಕಟ್ಟುಗಳು, ಮಾರುಕಟ್ಟೆ ಎದುರಿಸುತ್ತಿರುವ ಮುಗ್ಗಟ್ಟು ಮತ್ತು ಬದುಕಿನ ಬಿಕ್ಕಟ್ಟುಗಳು ಬವಣೆ ಕೇವಲ ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರಗಳಿಗೆ ಮೀಸಲಾದ ಸಂಗತಿಯಲ್ಲ! ಏಕೆಂದರೆ ಅವುಗಳಿಗೆ ಸಾಂಸ್ಕೃತಿಕ ಮಾನಸಿಕ ಸಾಮಾಜಿಕ ನೆಲೆಗಳಿವೆ - ಮುಖಗಳಿವೆ.

## ಜಾಗತೀಕರಣ ಗೊಂಡ ಬೆಲೆಗಳು

ಉದಾರೀಕರಣ - ಮಾರ್ಕೆಟ್ಟೀಕರಣ ಪ್ರಕ್ರಿಯೆಗಳ ಪರಿಣಾಮವಾಗಿ ಬೆಲೆಗಳು ಜಾಗತೀಕರಣ ಗೊಂಡಿವೆ. ವರಮಾನ ಮಾತ್ರ ಭಾರತೀಯವಾಗಿ ಉಳಿದಿದೆ. ಬೆಲೆಗಳ ಜಾಗತೀಕರಣ ಮತ್ತು ವರಮಾನದ ಭಾರತೀಕರಣದಿಂದಾಗಿ, ಇವೆರಡರ ನಡುವಿನ ಅಂತರದಿಂದಾಗಿ ಮುಗ್ಗಟ್ಟು - ಬಿಕ್ಕಟ್ಟು - ಇಕ್ಕಟ್ಟು ಉಂಟಾಗಿದೆ.

ಹಣದುಬ್ಬರ ಬೆಲೆ ಏರಿಕೆ ಬಗ್ಗೆ ಸರ್ಕಾರ ಮತ್ತು ಸುದ್ದಿ ಮಾಧ್ಯಮಗಳು ನಮ್ಮನ್ನು ದಾರಿ ತಪ್ಪಿಸುತ್ತಿವೆ. ಅದಕ್ಕೆ ಸಂಬಂಧಿಸಿದ ಒಗಟನ್ನು ಮೊದಲು ನಾವು ಒಡೆಯಬೇಕಾಗಿದೆ. ಸರ್ಕಾರ, ಸುದ್ದಿ ಮಾಧ್ಯಮ ಮುಖ್ಯವಾಗಿ ದೂರದರ್ಶನ, ಹಣದುಬ್ಬರಕ್ಕೆ ಸಂಬಂಧಿಸಿದಂತೆ ಕೇವಲ ಸಗಟು ಬೆಲೆ ಸೂಚ್ಯಂಕ (WPI)ದ ಬಗ್ಗೆ ಮಾತನಾಡುತ್ತಿದೆ. ಇಂತಹ ಹಣದುಬ್ಬರ ಎರಡಂಕಿ ತಲುಪಿಲ್ಲವೆಂದು ಹೇಳಿಕೊಂಡು ಸರ್ಕಾರವು ತನ್ನ ಕಿರೀಟಕ್ಕೆ ತಾನೆ ಪುಕ್ಕ ಸಿಕ್ಕಿಸಿಕೊಂಡು ಮೆರೆಯುತ್ತಿದೆ. ಇದೊಂದು ದೊಡ್ಡ ಸಾಧನೆಯೆಂದು ಸರ್ಕಾರ ಬೀಗುತ್ತಿದೆ. ಆದರೆ ಅರೆ ಹೊಟ್ಟೆ - ಬರಿ ಹೊಟ್ಟೆಯಲ್ಲಿ ಬದುಕು ದೂಕುತ್ತಿರುವ, ಕೂಲಿ ನಾಲಿ ಮಾಡಿಕೊಂಡು ಬದುಕು ಮಾಡುತ್ತಿರುವ, ದುಡಿಯುವ ಮಹಿಳೆಯರ ದೃಷ್ಟಿಯಿಂದ ಅಂಗಡಿ ಮುಂಗಟ್ಟುಗಳಲ್ಲಿರುವ ಬೆಲೆಗಳು ಮುಖ್ಯವೆ ವಿನಾ ಎ.ಪಿ ಎಮ್.ಸಿ ಬೆಲೆಗಳು ಮುಖ್ಯವಾಗುವುದಿಲ್ಲ. ಇವರ ದೃಷ್ಟಿಯಲ್ಲಿ ಅನುಭೋಗಿ ಬೆಲೆ ಸೂಚ್ಯಂಕ (CPI) ಹೆಚ್ಚು ಪ್ರಸ್ತುತ. ಇದರ ಬಗ್ಗೆ ಸರ್ಕಾರ ಸುದ್ದಿ ಮಾಧ್ಯಮಗಳು ಸೊಲ್ಲೆತ್ತುವುದಿಲ್ಲ. ಬಡಬಗ್ಗರ ಮಸಾಲೆ ಐಟಂ ಆಗಿದ್ದ ಉಳ್ಳಾಗಡ್ಡಿ ಇಂದು ಕೈಗೆಟುಕದ ಕುಸುಮವಾಗಿ ಬಿಟ್ಟಿದೆ. 1998ರ ನವೆಂಬರ್ ವರೆಗಿನ ಲೆಕ್ಕಾಚಾರದ ಪ್ರಕಾರ ಅನುಭೋಗಿ ಬೆಲೆ ಸೂಚ್ಯಂಕದಲ್ಲಿ ಶೇ 30ರಷ್ಟು ಏರಿಕೆಯಾಗಿದೆ. ಇದರ ಒಳಾರ್ಥ ಇಷ್ಟು! 1998ರ ಪ್ರಾರಂಭದಲ್ಲಿ 100 ರೂಪಾಯಿಗೆ ನಾವು ಏನನ್ನು ಕೊಳ್ಳುತ್ತಿದೆವೊ ಅಷ್ಟನ್ನು ಕೊಳ್ಳಲು ಇಂದು 120 ರೂಪಾಯಿ ತೀಕಬೇಕಾಗಿದೆ. ಇದನ್ನೇ ಜಾಗತೀಕರಣ ಗೊಂಡ ಬೆಲೆಗಳು' ಎನ್ನಲಾಗಿದೆ.

## ಕೊಳ್ಳುವ ಗಿರಾಕಿಗಳು ಎಲ್ಲಿ?

ಬೆಲೆಗಳು ಜಾಗತೀಕರಣಗೊಂಡು ಬಿಟ್ಟಿವೆ. ಜನರ ವರಮಾನ ಮಾತ್ರ ಭಾರತೀಯವಾಗಿ ಉಳಿದಿದೆ. ಬೆಲೆಗಳ ಏರಿಕೆಗೆ ಸಮನಾಗಿ ಜನರ ವರಮಾನ, ಕ್ರಯಶಕ್ತಿ ಹೆಚ್ಚುತ್ತಿಲ್ಲ. ಗ್ರಾಹಕರಿಗೆ ದುಂಬಾಲು ಬಿದ್ದು ವ್ಯಾಪಾರಗಾರರು ಸರಕುಗಳನ್ನು ಮಾರಾಟ ಮಾಡುವ ಪ್ರಮೇಯ ಬಂದಿದೆ. ನಮ್ಮ ಮಾರುಕಟ್ಟೆಯ ಸರಕು ಹೀರಿಕೊಳ್ಳುವ ಶಕ್ತಿ ಮುಗಿದು ಹೋದಂತೆ, ಬರಿದಾದಂತೆ ಕಾಣುತ್ತಿದೆ.

ಈ ಮಾರುಕಟ್ಟೆ ಒಳಗೊಂಡ ಜನರ ಪ್ರಮಾಣವಾದರು ಎಷ್ಟು? ರಾಜ್ಯದ ಒಟ್ಟು ಜನಸಂಖ್ಯೆಯ ಶೇ. 25ರಿಂದ 30 ರಷ್ಟು ಜನರನ್ನು ಮಾತ್ರ ಮಾರುಕಟ್ಟೆ ಒಳಗೊಂಡಿದೆ. ಇವರೆಲ್ಲ ತಮಗೆ ಬೇಕಾದ ಶ್ವೇತ ಸರಕುಗಳನ್ನು ಶೋಕಿ ಸರಕುಗಳನ್ನು ಕೊಂಡದ್ದಾಗಿದೆ. ಈಗ ಈ ಮಾರುಕಟ್ಟೆ ವಿಸ್ತರಣೆಯಾಗಬೇಕು ಎಂದಾದರೆ ಅದು ಸಮಾಜದ ಕೆಳಸ್ತರದಲ್ಲಿರುವ ಉಳಿದ ಶೇ. 70ರಷ್ಟು ಜನರಲ್ಲಿ ಒಂದು ಭಾಗವನ್ನಾದರೂ ತನ್ನ ಕಕ್ಷೆಗೆ ಎಳೆದುಕೊಳ್ಳಬೇಕು. ಆದರೆ ಇಂದು ನಡೆದಿರುವ ಉದಾರೀಕರಣ, ಜಾಗತೀಕರಣ ಪ್ರಕ್ರಿಯೆಯಲ್ಲಿ ಸಮಾಜದ ಮೇಲುಸ್ತರದ ಶೇ. 25 ರಿಂದ 30 ರಷ್ಟು ಜನರ ವರಮಾನವನ್ನು, ಕ್ರಯ ಶಕ್ತಿಯನ್ನು ಹೆಚ್ಚಿಸುತ್ತಿದೆ ವಿನಾ ಕೆಳಸ್ತರದ ಶೇ. 70 ರಷ್ಟು ಜನರ ವರಮಾನ, ಕ್ರಯ ಶಕ್ತಿಯನ್ನಲ್ಲ! ಅವರ ವರಮಾನವು ಭಾರತೀಯವಾಗೆ ಉಳಿದಿದೆ. ನಾವು ಹೇಳುತ್ತಿರುವ ಮುಗ್ಗಟ್ಟು - ಬಿಕ್ಕಟ್ಟು - ಇಕ್ಕಟ್ಟುಗಳ ಮೂಲ ಮತ್ತು ಅವುಗಳ ಹಿಂದೆ ಕೆಲಸ ಮಾಡುತ್ತಿರುವ ಸಂಗತಿ ಇದಾಗಿದೆ.

## ಉದ್ಯೋಗ ರಹಿತ ಬೆಳವಣಿಗೆ

60, 70 ಮತ್ತು 80ರ ದಶಕಗಳಲ್ಲಿ ಸಾರ್ವ

ಜನಿಕ ವಲಯದ ಮೆರೆದಾಟದಿಂದಾಗಿ ಪಟ್ಟ ಭದ್ರ ಶಕ್ತಿಗಳ ಪುಂಡಾಟಿಕೆಯಿಂದಾಗಿ 10 ಹುದ್ದೆಗಳಿಗೆ ಅವಕಾಶವಿದ್ದ ಕಡೆಗೆ 20 ಜನರನ್ನು ನೇಮಕ ಮಾಡಿಕೊಳ್ಳಲಾಯಿತು. ಒಟ್ಟಾರೆ ಉದ್ಯೋಗ ಗಳೇನೊ ಸೃಷ್ಟಿಯಾದವು! ಆದರೆ ಉತ್ಪನ್ನ ವರಮಾನದ ಪ್ರಮಾಣದಲ್ಲಿ ಏರಿಕೆಯಾಗಲಿಲ್ಲ. ಬೆಳೆವಣಿಗೆ ಕುಂಠಿತಗೊಂಡಿತು. ಈ ಹಂತವನ್ನು ಬೆಳೆವಣಿಗೆ ರಹಿತ ಉದ್ಯೋಗದ ವಿಸ್ತರಣೆ ಎಂದು ಕರೆಯಲಾಗಿದೆ. ಆದರೆ ಈ ಬಗೆಯ ಬೆಳೆವಣಿಗೆಯ ಸುಸ್ಥಿರಗತಿ (sustainability) ಯನ್ನು ಸಾಧಿಸಿಕೊಳ್ಳಲು ಸಾಧ್ಯವಿರಲಿಲ್ಲ.

ಇಂದು 90ರ ದಶಕದಲ್ಲಿ ಪರಿಸ್ಥಿತಿ ತಿರುವು ಮುರುವು ಆಗಿದೆ. ಇಂದು ಬೆಳೆವಣಿಗೆ ಇದೆ. ಉತ್ಪನ್ನ ಏರಿಕೆಯಾಗುತ್ತಿದೆ. ಔದ್ಯಮಿಕರಂಗವು ಚೇತರಿಸಿಕೊಳ್ಳುತ್ತಿರುವಂತೆ ಕಾಣುತ್ತಿದೆ. ಆದರೆ ಉದ್ಯೋಗಗಳ ಬೆಳೆವಣಿಗೆ ಸ್ಥಿರವಾಗಿದೆ. ಉದ್ಯೋಗಾವಕಾಶಗಳು ವಿಸ್ತರಣೆಯಾಗುತ್ತಿಲ್ಲ. ಈ ಪ್ರಕ್ರಿಯೆಯನ್ನು ಉದ್ಯೋಗ ರಹಿತ ಬೆಳೆವಣಿಗೆ ಎಂದು ಕರೆಯಲಾಗಿದೆ. ಈ ಬಗೆಯ ಬೆಳೆವಣಿಗೆಗಳೂ ಇಂದಿನ ಬಿಕ್ಕಟ್ಟು-ಮುಗ್ಗಟ್ಟಿನ ಮೂಲದಲ್ಲಿವೆ.

ಉದ್ಯೋಗಗಳ ಸೃಷ್ಟಿಗೆ ಬೆಳೆವಣಿಗೆಗೆ ಕತ್ತರಿ, ಕೊಡಲಿ ಏಟು ಬೀಳಲು ಔದ್ಯಮಿಕ ರಂಗವು ಉನ್ನತ ಪ್ರೌಢ ತಂತ್ರಜ್ಞಾನವನ್ನು ಅಳವಡಿಸಿ ಕೊಳ್ಳುತ್ತಿರುವುದು ಕಾರಣವಾಗಿದೆ. ಈ ಪ್ರಕ್ರಿಯೆಯು ಶ್ರಮ ಉಳಿತಾಯ ತಂತ್ರ, ಶ್ರಮ ಪಲ್ಲಟ ಗೊಳಿಸುವ ತಂತ್ರದಿಂದ ಕೂಡಿದೆ.

ಉದ್ಯೋಗಗಳನ್ನು ಸೃಷ್ಟಿಸದೆ, ವಿಸ್ತರಿಸದೆ ಮಾರುಕಟ್ಟೆ ಮುಗ್ಗಟ್ಟನ್ನು ಆರ್ಥಿಕತೆಯ ಇಕ್ಕಟ್ಟನ್ನು ನಿವಾರಿಸುವುದು ಸಾಧ್ಯವಿಲ್ಲ. ಎಲ್ಲಿ ಯವರೆಗೆ ಬೆಳೆವಣಿಗೆ ಪರಿಧಿಯೊಳಗೆ ಸಮಾಜದ ಕೆಳಸ್ತರದಲ್ಲಿರುವ ಶೇ. 70ರಷ್ಟು ಜನರನ್ನು ತೊಡಗಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಆರ್ಥಿಕತೆಗೆ ಚೈತನ್ಯ ಬರುವುದು ಸಾಧ್ಯವಿಲ್ಲ.

### ಶ್ವೇತ ಮಾರುಕಟ್ಟೆ

ವಾಷಿಂಗ್‌ಮೆಷಿನ್‌ಗಳು, ಹವಾನಿಯಂತ್ರಣ ಯಂತ್ರಗಳು, ವ್ಯಾಕ್ಯೂಮ್ ಕ್ಲೀನರ್‌ಗಳು, ಫ್ರಿಜ್ ಗಳು ಮುಂತಾದವುಗಳನ್ನು ಶ್ವೇತ ಸರಕುಗಳು ಎಂದು ಕರೆಯಲಾಗಿದೆ. ಇವುಗಳ ಜೊತೆಗೆ ದ್ವಿಚಕ್ರವಾಹನಗಳು, ಸಣ್ಣ ಕಾರುಗಳು, ಟಿ.ವಿಗಳು, ಪವರ್ ಹೌಸ್‌ಗಳು, ಫೋನು, ಗ್ಯಾಸ್, ತರಹೆವಾರಿ ಎಣ್ಣೆಗಳು, ಶಾಂಪು, ಹೇರ್ ಕಂಡೀಷನರ್‌ಗಳು, ಸೋಪು, ಸೋಪಿನ ಪುಡಿ-ಮುಂತಾದವುಗಳು ಇಂದಿನ ಮಾರುಕಟ್ಟೆಯಲ್ಲಿ ತುಂಬಿ ತುಳುಕುತ್ತಿವೆ. ಈ ಬಗೆಯ ಶ್ವೇತ ಶೋಕಿ ಸರಕುಗಳ ಗ್ರಾಹಕರು ಎಷ್ಟು ಜನರು ಇದ್ದಾರು?

ಕರ್ನಾಟಕದ ಒಟ್ಟು ಜನಸಂಖ್ಯೆ 449.77 ಲಕ್ಷ. ಇವರಲ್ಲಿ ನಿರಕ್ಷರಸ್ಥರ ಸಂಖ್ಯೆ 164 ಲಕ್ಷ. ಇವರಂತು ಶ್ವೇತ ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲ.

ಕರ್ನಾಟಕದ ಒಟ್ಟು ದುಡಿಯುವ ವರ್ಗದ ಸಂಖ್ಯೆ 172 ಲಕ್ಷ. ಇವರಲ್ಲಿ ಕೇವಲ 56 ಲಕ್ಷ (ಶೇ. 32) ಜನರು ಮಾತ್ರ ಶ್ವೇತ ಮಾರುಕಟ್ಟೆ ಗ್ರಾಹಕರಾಗಿದ್ದಾರೆ. ಏಕೆಂದರೆ ಉದ್ದಿಮೆ, ವಾಣಿಜ್ಯ, ವ್ಯಾಪಾರ, ಸಾರಿಗೆ, ಮಾಧ್ಯಮ, ನೌಕರಶಾಹಿ ಮುಂತಾದ ಸಮಾಜದ ಪ್ರತಿಷ್ಠಿತ ಕ್ಷೇತ್ರದಲ್ಲಿರುವ ಜನರ ಪ್ರಮಾಣ 56 ಲಕ್ಷ. ಉಳಿದ 116 ಲಕ್ಷ ಜನರು ಗ್ರಾಮೀಣ ಪ್ರದೇಶದಲ್ಲಿ, ನಗರಗಳ ಕೊಳಚೆ ಪ್ರದೇಶದಲ್ಲಿ ದಿನ ನಿತ್ಯದ ಎರಡೊತ್ತು ಕೂಳಿಗಾಗಿ ಬವಣೆ ಪಟ್ಟುಕೊಂಡು ಬದುಕು ನಡೆಸುತ್ತಿದ್ದಾರೆ. ಅವರು ಶ್ವೇತ ಮಾರುಕಟ್ಟೆ ಗ್ರಾಹಕರಾಗಿರುವುದಿಲ್ಲ. ಹೀಗೆ ತುಂಬಾ ಪರಿಮಿತವಾದ ಮಾರುಕಟ್ಟೆ ಸಹಜವಾಗಿ ಏದುಸಿರು ಬಿಡುತ್ತಿದೆ. ಮಾರುಕಟ್ಟೆಯು ಪರಿಮಿತವಾಗಿರುವುದರಿಂದಲೇ ಹಳೆಯ ಟಿ.ವಿ, ಹಳೆಯ ಕುಕ್ಕರ್, ಹಳೆಯ ಟೇಪ್‌ರೆಕಾರ್ಡ್ಡರ್, ಹಳೆಯ ಟೀ ಷರಟುಗಳಿಗೆ ಬದಲಾಗಿ ಹೊಸದನ್ನು ಕೊಡುವ ವಿನಿಮಯ ವ್ಯಾಪಾರ ಮಾರುಕಟ್ಟೆ ಸೃಷ್ಟಿಯಾಗಿದೆ. ವ್ಯಾಪಾರಗಾರರು- ಉದ್ಯಮ ಪತಿಗಳು ಕರ್ನಾಟಕದ ಸಂದರ್ಭದಲ್ಲಿ ಮತ್ತೆ ಮತ್ತೆ ಈ 56 ಲಕ್ಷ ಗ್ರಾಹಕರಿಗೆ ಮುಗಿಬೀಳಬೇಕಾಗಿದೆ.

ಹೀಗೆ ಮಾರುಕಟ್ಟೆ ಕುಸಿತದ ಹಿಂದೆ, ಮುಗ್ಗಟ್ಟಿನ ಮೂಲದಲ್ಲಿ ಸಾಮಾಜಿಕ ಸಂಗತಿಗಳಿವೆ. ಸಾಮಾಜಿಕ ಏಣಿಶ್ರೇಣಿಗಳು, ಭೂಮಾಲೀಕತ್ವದಲ್ಲಿನ ಅಸಮಾನತೆ, ಉಳ್ಳವರ ಹಿತಾಸಕ್ತಿಯನ್ನು ಮಾತ್ರ ಕಾಪಾಡಲು ಸೃಷ್ಟಿ ಯಾಗಿರುವ ಆರ್ಥಿಕ ಸುಧಾರಣೆ ಮುಂತಾದವು ಇಂದು ನಾವು ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣಗಳಾಗಿವೆ. ■




# ವಾಜಪೇಯಿ ಸರ್ಕಾರಕ್ಕೊಂದು ಸವಾಲು

■ ಮಾಧವ ಐತಾಳ್

'ದೇಶದ ಆರ್ಥಿಕ ಪರಿಸ್ಥಿತಿ' ಎಂಬ ಎಂಜಿನ್‌ಗೆ ಪ್ರಧಾನಿ ಒದೆಯುತ್ತಲೇ ಇದ್ದಾರೆ. ಅದು ಪ್ರಾರಂಭ ಆಗಲೊಲ್ಲದು, ಅವರಿಗೆ ಗೊತ್ತಿಲ್ಲದೇ ಹೋದದ್ದು- ವಾಹನದಲ್ಲಿ ಪೆಟ್ರೋಲ್ ಬರಿದಾಗಿದೆ ಎಂಬುದು. ಇನ್ನೊಂದೆಡೆ ವಿತ್ತಮಂತ್ರಿ ಯಶವಂತಸಿನ್ಹಾ ಕೂಡಾ ಕಿಕ್ ಕೊಡುತ್ತಲೇ ಇದ್ದಾರೆ. ಚಿನ್ನ ಅಡವಿಟ್ಟಿದ್ದ ಮಂತ್ರಿ ಎಂತಲೇ ಜನರಿಂದ ಗುರುತಿಸಲ್ಪಡುವ ಈತನಿಗೆ ತಾನೇನು ಮಾಡುತ್ತಿದ್ದೇನೆ ಎಂಬುದು ಇಲ್ಲಿಯತನಕ ಗೊತ್ತಾಗಿಲ್ಲ. ಗೊತ್ತಾಗುವ ಹೊತ್ತಿಗೆ ಆತ ಆ ಸ್ಥಾನದಲ್ಲಿ ಇರುವ ಸಾಧ್ಯತೆ ಕೂಡಾ ಇಲ್ಲ!

### ಭೂತಕಾಲದ ಹೆಣಭಾರ

ಪ್ರಧಾನಿ ಹಾಗೂ ವಿತ್ತಮಂತ್ರಿ ಈ ಇಬ್ಬರೂ ನಿರಾಶೆಯ ಪರಿಸ್ಥಿತಿಯನ್ನು ಹೊತ್ತುಕೊಂಡೇ ಅಧಿಕಾರಕ್ಕೆ ಬಂದಿದ್ದರು. ಆ ಪರಿಸ್ಥಿತಿ ಹಿಂದಿನ ಸರ್ಕಾರಗಳ ದೂರದರ್ಶಿತ್ವವಿಲ್ಲದ ನೀತಿಯಿಂದ ಸೃಷ್ಟಿಯಾದದ್ದಾಗಿತ್ತು. ಚಿದಂಬರಂ ಮಂಡಿಸಿದ್ದ ಕನಸಿನ ಆಯವ್ಯಯ ದುಸ್ವಪ್ನವಾಯಿತು. ಸಂಯುಕ್ತರಂಗ ಸರ್ಕಾರ ಆರ್ಥಿಕ ವ್ಯವಸ್ಥೆಯ ಮೇಲಿನ ತನ್ನ ಹಿಡಿತವನ್ನು ಕಳೆದುಕೊಂಡಿತ್ತು. ಅದಕ್ಕೆ ಸಿಕ್ಕಿದ್ದು ಡಾ.ಮನಮೋಹನ್‌ಸಿಂಗ್ ಗಬ್ಬೆಬ್ಬಿಸಿ ಹೋಗಿದ್ದ, ಕೊರತೆಗಳಿಂದ ತುಂಬಿ ಹೋಗಿದ್ದ ಆರ್ಥಿಕ ಸ್ಥಿತಿ. ಮೂರು ವಿಧಾನಸಭಾ ಚುನಾವಣೆಗಳಲ್ಲಿ ಸತತವಾಗಿ ಸೋತು ಹೋಗಿದ್ದ ನರಸಿಂಹರಾವ್, ಮನಮೋಹನ್‌ಸಿಂಗ್‌ಗೆ ಹಣ ದುಬ್ಬರದ ದರವನ್ನು ಕಡಿಮೆ ಮಾಡುವಂತೆ ಹೇಳಿದ್ದರು. ಮನಮೋಹನ್‌ಸಿಂಗ್ ಹಣದ ಪೂರೈಕೆಯ ಬೆಳೆವಣಿಗೆಯನ್ನು ಹತ್ತಿಕ್ಕಿದ ತಕ್ಷಣ ಬಡ್ಡಿಯದರ ಮುಗಿಲು ಮುಟ್ಟಿತು. ಸಾಲ ಪಡೆಯುವುದು ದುಬಾರಿಯಾದ್ದರಿಂದ ಉದ್ಯಮ ಗಳು ತಮ್ಮ ವಿಸ್ತರಣಾ ಯೋಜನೆಗಳನ್ನು ಮುಂದೆ



## ಎಲ್ಲೆಡೆ ವ್ಯಾಪಾರ ಡಲ್! ಏಕೆ?

ಹಾಕಿದರು. ಉಳಿತಾಯದ ಹಣವು ಶೇರುಮಾರುಕಟ್ಟೆಯಿಂದ ಹಣದ ಮಾರುಕಟ್ಟೆಗೆ ಸ್ಥಳಾಂತರಗೊಂಡಿದ್ದರಿಂದ, ಶೇರುಗಳ ಬೆಲೆ ಪಾತಾಳಕ್ಕಿಳಿಯಿತು.

ಭಾಜಪದ ವಿತ್ತಮಂತ್ರಿ ಸ್ಥಾನಕ್ಕೆ ಮೊದಲ ಆಯ್ಕೆ ಜಸವಂತ ಸಿಂಗ್. ಸಿನ್ಹಾ 2ನೇ ಆಯ್ಕೆಯಾಗಿದ್ದರೂ ಅವರಿಗೆ ಪರಿಸ್ಥಿತಿಯನ್ನು ಬದಲಿಸಿಬಿಡುವ ಅವಕಾಶಗಳಿದ್ದವು. ಏಷ್ಯಾದ ಟೈಗರ್‌ಗಳೆನಿಸಿಕೊಂಡಿದ್ದ ದೇಶಗಳ ಮಾರುಕಟ್ಟೆ ಮುರಿದುಬಿದ್ದಿತ್ತು. ಪೊಖ್ರಾನ್ ಸ್ಫೋಟದ ನಂತರವೂ ವಿದೇಶೀ ಬಂಡವಾಳ ಹೂಡಿಕೆ ಕಡಿಮೆಯಾಗಿರಲಿಲ್ಲ. ಆದರೆ ಸಿನ್ಹಾ 1960ರ ಮಾದರಿಯ ನೂರಾರು ನಿಯಂತ್ರಣ, ಸುಂಕ, ತೆರಿಗೆಗಳನ್ನುಳ್ಳ ಆಯವ್ಯಯ ಮಂಡಿಸಿದರು. ಪೆಟ್ರೋಲ್ ದರ ಏರಿಸಿದರು, ಅನಂತರ ಹಿಂತೆಗೆದುಕೊಂಡರು, ಜನರ ಸಾಮಾನ್ಯ ಬಳಕೆಯ ವಸ್ತುಗಳ ಮೇಲೆ ತೆರಿಗೆ ಹೇರಿದರು. ಬಜೆಟ್ ಉದ್ಯಮದ ಪರ ಎನ್ನಿಸಿದರೂ, ಕೊನೆಗೆ ಉದ್ಯಮಕ್ಕೂ ಅದರಿಂದ ಉಪಯೋಗವಾಗಲಿಲ್ಲ. ಬಜೆಟ್ ಬೆಲೆ ಏರಿಕೆಗೆ ಕಾರಣವಾಯ್ತು. ಬಂಡವಾಳಿಗರನ್ನು ದೂರ ಇರಿಸುವ, ಬೆಳೆವಣಿಗೆಯನ್ನು ಕುಂಠಿತಗೊಳಿಸುವ ಬಜೆಟ್ ಎಂಬುದು ಸಾರ್ವತ್ರಿಕವಾಯಿತು. ವಿರೋಧ ಹೆಚ್ಚಿದಂತೆ ಅನೇಕ ಸುಂಕಗಳನ್ನು ವಿತ್ತಮಂತ್ರಿ ಹಿಂತೆಗೆದುಕೊಂಡರು. ಸಿನ್ಹಾ ದೇಶಾದ್ಯಂತ ಸುತ್ತಿದ್ದರು. ಆದರೂ ಜನರ ಸಿನಿಕತೆಯನ್ನು ತೊಡೆಯುವುದು ಅವರಿಂದ ಸಾಧ್ಯವಾಗಲಿಲ್ಲ. ತುಂಬಾ ತಡವಾಗಿ ಹೋಗಿತ್ತು.

ಬಜೆಟ್‌ನಲ್ಲಿ ಎಡವಿದ ಸರ್ಕಾರ ಸಾರ್ವಜನಿಕ ಕ್ಷೇತ್ರದ ಉದ್ಯಮಗಳಲ್ಲಿನ ಬಂಡವಾಳ ಹಿಂತೆಗೆದುಕೊಳ್ಳುವ ಯೋಜನೆ ರೂಪಿಸಿತು. ಆದರೆ ಯೂನಿಟ್ ಟ್ರಸ್ಟ್ ಆಫ್ ಇಂಡಿಯಾದ US-64 ರ ಅವಘಡ ಹಿಂದಿನ ಸರ್ಕಾರಗಳ ಬಳುವಳಿಯಾದರೂ, ಜನ ಹಣ ಕಳೆದುಕೊಂಡರು, ಸಣ್ಣ ಹೂಡಿಕೆದಾರರು ಭೀತರಾದರು. ಅಕಾಲಿಕ ಮಳೆ

12ನೇ ಪುಟ ನೋಡಿ

# ಕಂಡೆಯಾ ಇದು ಇಂಡಿಯಾ!

**ಹತ್ತಾರು ವರ್ಷ ಪರದೇಶದಲ್ಲಿ ನೆಲೆಸಿ ಕೋಟ್ಯಾಂತರ ರೂಪಾಯಿ ಗಳಿಸಿದವರಿಗೆ, ಈ ನೆಲ, ಈ ಜಲ, ಈ ಜನ, ಅಖಂಡ ಸಾಧ್ಯತೆಗಳ ಆಗರವಾಗಿ ಕಾಣಿಸಬೇಕಿತ್ತು. ಇವರಿಗಾಗಿ ನಮ್ಮ ಸರ್ಕಾರವೂ ಕೆಂಪು ರತ್ನಗಂಬಳಿಯ ನಡೆ-ಮುಡಿ ಹಾಸಿ ಕಾಯುತ್ತಿದೆ. ಆದರೆ ಯಾಕೆ ಇಲ್ಲಿ ನಿರೀಕ್ಷಿತ ಫಲ ದೊರೆಯುತ್ತಿಲ್ಲ?**

■ ಶಾಂತಾ ನಾಗರಾಜ್

**ಅದೆಷ್ಟೆಂದರೂ ಪರದೇಶ ಬಿಟ್ಟು ಬಾ**
**ಪಂಜರದ ಬಂಧನವನ್ನು ಒಡೆದು ಬಾ**
**ಬಂದು ಬಿಡು ನಿನ್ನ ವಯಸ್ಸಿನ್ನೂ ಚಿಕ್ಕದಿದೆ**
**ನಿನ್ನದೀ ಮನೆಯಲ್ಲಿ ನಿನಗಾಗಿ ಅನ್ನವಿದೆ.**

ಇದು 'ಚಿಟ್ಟಿ ಆಯಿಹೈ' ಎನ್ನುವ ಗಝಲ್‌ನ ನಾಲ್ಕು ಸಾಲುಗಳು. ಪರದೇಶದಲ್ಲಿರುವ ಮಗನ ಕಾಗದ ಕೈಯಲ್ಲಿ ಹಿಡಿದು ತಂದೆ ಹಾಡುವ ಹಾಡಿನ ನುಡಿ. ಇದು ಪರದೇಶಕ್ಕೆ ಮಕ್ಕಳನ್ನು ಎರವಲು ಕೊಟ್ಟ ಎಲ್ಲ ತಂದೆ ತಾಯಿಗಳ ಅಂತರಂಗದ ರೋಧನವೆಂದರೂ ಸರಿಯೇ!

ಇಂದು ಪರದೇಶಕ್ಕೆ ಉದ್ಯೋಗಾರ್ಥವಾಗಿ ಹೋಗುತ್ತಿರುವವರ ಸಂಖ್ಯೆ ಬಹಳಷ್ಟು ದೊಡ್ಡದೇ ಇದೆ. ಅಲ್ಲಿ ಸಿಗುವ ಸೌಲಭ್ಯ, ಅಪಾರವಾದ ಹಣ, ಮತ್ತು ಪ್ರತಿಭೆಯನ್ನು ಗುರುತಿಸಿ ಗೌರವಿಸುವ ಪರಿಸರ, ಇದಿಷ್ಟೇ ಕಾರಣಗಳಿಗಾಗಿ ನಮ್ಮ ದೇಶದ ಚುರುಕು ಹುಡುಗರು ಮತ್ತು ಇತ್ತೀಚೆಗೆ ಹುಡುಗಿಯರೂ ಸಹ ಪರದೇಶಗಳತ್ತ ಮುಖಮಾಡಿದ್ದಾರೆಂದು ಭಾವಿಸಿದರೆ ಅದು ಅರ್ಧಸತ್ಯವಾದೀತು ಅಷ್ಟೆ. ಇದರ ಇನ್ನೊಂದು ಮುಖವನ್ನೂ ಗಮನಿಸುವ ಅಗತ್ಯವಿದೆ. ಇಲ್ಲಿನ ಜಡ್ಡುಗಟ್ಟಿದ ವಾತಾವರಣ, ಪ್ರತಿಭೆಗಳನ್ನು ಗುರುತಿಸದ ಅಥವಾ ಮೆಟ್ಟಿಹಾಕುವ ಪರಿಸರ, ಓದು ಮತ್ತು ಚುರುಕುತನಗಳಿಗೆ ತಕ್ಕುದಲ್ಲದ ಸಂಬಳ, ಹಾಗೊಂದು ವೇಳೆ ಒಳ್ಳೆ ಸಂಬಳ ಸಿಕ್ಕರೂ, ತೆರಿಗೆಗಳ ಭಾರೀ ಹೊಡೆತ ಮತ್ತು ಗಳಿಸಿದ್ದನ್ನು ಸರಾಗವಾಗಿ ಬಳಸಿ ಜೀವಿಸದಂತಹ ಭ್ರಷ್ಟ ವಾತಾವರಣ. ಈ ಒಟ್ಟು ವ್ಯವಸ್ಥೆಯೂ ನಮ್ಮಸಮಾಜದ ಸತ್ವಶೀಲರನ್ನು ಪರದೇಶದತ್ತ ಓಡಿಸುತ್ತಿದೆ.

ಪರದೇಶದಲ್ಲಿರುವ ಅನೇಕ ಭಾರತೀಯರಿಗೆ ತಮ್ಮ ಬೇರುಗಳಿರುವ, ತಮ್ಮದೇ ಇನ್ನೂ ಎಂದೆನಿಸುವ, ತಾಯ್ನೆಲಕ್ಕಾಗಿ ಏನಾದರೂ ಮಾಡಬೇಕೆಂಬ ಹಂಬಲವಿದ್ದೇ ಇರುತ್ತದೆ. ಕೆಲವೇ ವರ್ಷಗಳನ್ನು ಪರದೇಶಗಳಲ್ಲಿ ನೆಲೆಸಿ ಗಳಿಸಿದವರೂ ತಮ್ಮ ಮಾತೃ ಭೂಮಿಯಲ್ಲಿ ಏನಿಲ್ಲವೆಂದರೂ ಕೆಲವು ನಿವೇಶನಗಳನ್ನಾದರೂ ಖರೀದಿಸಿರುತ್ತಾರೆ. ಅನೇಕ ಬಡಾವಣೆಗಳಲ್ಲಿರುವ ಅನಿವಾಸಿ ಭಾರತೀಯರ ಭವ್ಯ ಬಂಗಲೆಗಳೇ ಇದಕ್ಕೆ ಸಾಕ್ಷಿ. ಇನ್ನು ಹತ್ತಾರು ವರ್ಷ ಪರದೇಶದಲ್ಲಿ ನೆಲೆಸಿ ಕೋಟ್ಯಾಂತರ ರೂಪಾಯಿ ಗಳಿಸಿದವರಿಗೆ, ಈ ನೆಲ, ಈ ಜಲ, ಈ ಜನ, ಅಖಂಡ ಸಾಧ್ಯತೆಗಳ ಆಗರವಾಗಿ ಕಾಣಿಸಬೇಕಿತ್ತು. ಇವರಿಗಾಗಿ ನಮ್ಮ ಸರ್ಕಾರವೂ ಕೆಂಪು ರತ್ನಗಂಬಳಿಯ ನಡೆ-ಮುಡಿ ಹಾಸಿ ಕಾಯುತ್ತಿದೆ. ಆದರೆ ಯಾಕೆ ಇಲ್ಲಿ ನಿರೀಕ್ಷಿತ ಫಲ ದೊರೆಯುತ್ತಿಲ್ಲ? ಇದು ಯಕ್ಷ ಪ್ರಶ್ನೆ!

ಇತ್ತೀಚೆಗೆ ನೊಬೆಲ್ ಪ್ರಶಸ್ತಿ ಪಡೆದ ಮೇಧಾವಿ ಅಮರ್ತ್ಯಸೇನ್ ಹೇಳುತ್ತಾರೆ "ಸ್ವಾತಂತ್ರ್ಯ ಪಡೆದ ಐವತ್ತು ವರ್ಷಗಳಲ್ಲಿ ಭಾರತದ ಆರ್ಥಿಕ ವ್ಯವಸ್ಥೆ ಭ್ರಷ್ಟಾಚಾರದಿಂದಾಗಿ ಹೊಲಸೆದ್ದು ಹೋಗಿದೆ" ಎಂದು. ಇದಕ್ಕೆ ಪ್ರತ್ಯಕ್ಷದರ್ಶಿಯಂತೆ ಬೆಲೆ ಏರಿಕೆಯಿಂದ ತತ್ತರಿಸುತ್ತಿರುವ ಪ್ರತಿ ಭಾರತೀಯನ ಬದುಕು ನಿಂತಿದೆ. ಪರಿಸ್ಥಿತಿ ಹೀಗಿರುವಾಗ ಅನಿವಾಸಿ ಭಾರತೀಯ ಬಂದು ಇಲ್ಲಿ ಹಣ ಹೂಡಲು ತಕ್ಕ ಪರಿಸರವನ್ನು ನಾವು ಸೃಷ್ಟಿಸಿದ್ದೇವೆಯೇ? ಎನ್ನುವ ಪ್ರಶ್ನೆ ಸರಕಾರಕ್ಕೆ ಹಾಗೂ ಪ್ರತಿ ಪ್ರಜ್ಞಾವಂತನನ್ನು ಕಾಡಬೇಕಿತ್ತು. ಆದರೆ ಕಾಡುತ್ತಿಲ್ಲ.

ದೇಶದ ಬಗ್ಗೆ ಒಂದಿಷ್ಟೂ ಕಾಳಜಿಯಿಲ್ಲದ ಪ್ರಜೆಗಳಿಂದ ತುಂಬಿದ ಈ ನೆಲದಲ್ಲಿ

ಅಪ್ರಾಮಾಣಿಕತೆ, ಅನೀತಿ, ಅಶಿಸ್ತು ಯಾವ ಯಾವ ಮಟ್ಟದಲ್ಲಿ ವಿಜೃಂಭಿಸುತ್ತಿದೆ ಎನ್ನುವುದಕ್ಕೆ ನಾನು ಕಂಡ ಮೂರು ಘಟನೆಗಳು ಸಣ್ಣ ಉದಾಹರಣೆಗಳು ಅಷ್ಟೆ.

**ಘಟನೆ-1**

ರಾಜ್‌ಘಾಟ್‌ನ ಗಾಂಧಿ ಸಮಾಧಿ ಬಳಿ ಚಪ್ಪಲಿ ಕಾಯುವವನ ಮುಂದೆ ನಾನು, ನಮ್ಮವರು ಮತ್ತು ನಾಲ್ಕು ಜನ ಪಾಶ್ಚಾತ್ಯರು ಚಪ್ಪಲಿಗಳನ್ನು ಬಿಟ್ಟೆವು. ವಾಪಸ್ ಬಂದಾಗ ನಮ್ಮ ಹತ್ತಿರ ಐವತ್ತು ಪೈಸೆ ತೆಗೆದುಕೊಂಡ ಆ ಮನುಷ್ಯ, ಆ ಬಿಳಿಯರಿಗೆ ತನ್ನ ಐದು ಬೆರಳನ್ನು ತೋರಿಸಿದ. ಅವರು ಒಬ್ಬೊಬ್ಬರೂ 50 ರೂಪಾಯಿ ನೋಟು ಕೊಟ್ಟರು. ಸರಿಯಾಯಿತು ಎಂಬಂತೆ ತಲೆ ಆಡಿಸಿದ ಅವರು ಹೊರಟೇ ಹೋದರು. ಒಂದು ಜೊತೆ ಚಪ್ಪಲಿ, ಹಲವು ನಿಮಿಷ ಕಾಯಲು 50 ರೂಪಾಯಿ!! ಈ ಅನ್ಯಾಯ ಕಂಡು ನನಗೆ ನಖಶಿಖಾಂತ ಉರಿಯಿತು. ನಾನು ''ಏನಯ್ಯ ಹೀಗಾ ಅನ್ಯಾಯ ಮಾಡುವುದು'' ಎಂದು ಹಿಂದಿಯಲ್ಲಿ ಕೇಳಿದೆ ಅವನು ''ನಿನಗಂತೂ ಕೊಡುವುದಕ್ಕೆ ಯೋಗ್ಯತೆ ಇಲ್ಲ ಹಣ ಇರುವವರಾದರೂ ಕೊಡುತ್ತಾರೆ ನಿನಗ್ಯಾಕೆ ಇದೆಲ್ಲ ಸುಮ್ಮನೆ ಹೋಗು'' ಎಂದ. ಹತ್ತಿರದಲ್ಲಿದ್ದ ಪೊಲೀಸನಿಗೆ ಹೇಳಿದೆ. ಅವನು ''ಇವೆಲ್ಲ ಪ್ರತಿನಿತ್ಯ ಇದ್ದದ್ದೆ. ಇಂಥದಕ್ಕೆಲ್ಲಾ ನಾವೇ ತಲೆ ಕೆಡಿಸಿಕೊಳ್ಳುವುದಿಲ್ಲ. ನೀವ್ಯಾಕೆ ಒದ್ದಾಡುತ್ತೀರಿ ಸುಮ್ಮನೆ ದಿಲ್ಲಿ ನೋಡಿಕೊಂಡು ನಿಮ್ಮೂರಿಗೆ ರೈಲು ಹತ್ತಿ'' ಎಂದ!! ತುಂಡು ಬಟ್ಟೆ ಉಟ್ಟು 'ನನ್ನ ಜನ ಬಡವರು, ಅವರ ಬದುಕು ಹಸನು ಮಾಡಬೇಕು' ಎಂದು ಜೀವನವನ್ನೆಲ್ಲಾ ತೇಯ್ದ ಮಹಾತ್ಮನ ನೆಲದಲ್ಲಿ, ಅವರ ಸಮಾಧಿಯ ಹತ್ತಿರವೇ ಎಂಥ ವ್ಯವಹಾರ!

**ಘಟನೆ-2**

ಚಾಮುಂಡಿ ಬೆಟ್ಟದ ದೇವಾಲಯದ ಹೊರಗೆ, ದೇವಸ್ಥಾನವನ್ನು ಕಾಯುವ ಗಾರ್ಡ್ ಹಾಗು ಮತ್ತೊಬ್ಬ ಸುಶಿಕ್ಷಿತನಂತೆ ಕಾಣುವ ವ್ಯಕ್ತಿ. ಇಬ್ಬರೂ, ಶಾಲೆಯಲ್ಲಿ ಓದುತ್ತಿರುವ ಹಾಗೂ ಆಗ ತಾನೆ ಶಾಲೆ ಮುಗಿಸಿ ಬಂದ ತಮ್ಮ ಮಕ್ಕಳಿಂದ ಬೆನ್ನಿನ ಚೀಲ ತೆಗೆದಿರಿಸಿ, ಶೂ, ಸಾಕ್ಸ್ ಬಿಚ್ಚಿಸಿ, ದೇವಸ್ಥಾನಕ್ಕೆ ಬಂದಿದ್ದ ಪಾಶ್ಚಾತ್ಯರ ಮುಂದೆ ಭಿಕ್ಷೆ ಬೇಡಲು ಕಳಿಸಿದರು. ಶಾಲೆಯ ಯೂನಿಫಾರಂ ತೊಟ್ಟಿದ್ದ ಆ ಮಕ್ಕಳು ಆ ಬಿಳಿಯರ ಮುಂಡಿ, ಕಾಲುಗಳನ್ನು ಮುಟ್ಟುತ್ತಾ 'ಪ್ಲೀಸ್‌ಮನಿ' ಎಂದು ಕೇಳುತ್ತಿದ್ದ ದೃಶ್ಯ ಕಂಡು ನಿಜಕ್ಕೂ ರೋಸಿ ಹೋದೆ. ''ನೀವು ಉದ್ಯೋಗದಲ್ಲಿದ್ದೀರಿ. ನಿಮ್ಮ ಮಕ್ಕಳು ಶಾಲೆಗೆ ಹೋಗುತ್ತಾರೆ ಅವರನ್ನು ಭಿಕ್ಷಕ್ಕೆ ಕಳಿಸಿದ್ದೀರಲ್ಲ'' ಎಂದು ಕೇಳಿದರೆ ''ಅಯ್ಯೋ ಸರ್ಕಾರನೇ ಪರದೇಶದವರ ಹತ್ತಿರ ಭಿಕ್ಷೆ ಕೇಳ್ತಿಲ್ಲವೆ, ಅಲ್ದೆ ಈ ಬಿಳಿಯರು ಹತ್ತು ಇಪ್ಪತ್ತು ರೂಪಾಯಿಯನ್ನು ಲೆಕ್ಕಕ್ಕೆ ಇಡಲ್ಲ ಸುಮ್ನೆ ಹಾಗೇ ಕೊಟ್ಟು ಹೋಗ್ತಾರೆ'' ಅಂದು ಬಿಡಬೇಕೆ? ಇದು ಬೇಡುವಿಕೆಯೋ, ಸುಲಿಗೆಯೋ, ಆತ್ಮ ಗೌರವ ಹೀನತೆಯೋ? ಯಾರು ನಿರ್ಧರಿಸಬೇಕು. ಬರೀ ಬಡವರೋ ಕೈಲಾಗದವರೋ ಭಿಕ್ಷೆಬೇಡುತ್ತಿದ್ದ ಕಾಲವೊಂದಿತ್ತು. ಈಗ ಯಾರು ಬೇಕಾದರೂ ಬೇಡಬಹುದಾದ ಲಜ್ಜಾಹೀನ ಸ್ಥಿತಿಗೆ ನಾವಿಂದು ತಲುಪಿದ್ದೇವೆ.

**ಘಟನೆ-3**

ನಮ್ಮ ಪರಿಚಿತ ಡಾಕ್ಟರ್ ದಂಪತಿಗಳು ಇಂಗ್ಲೆಂಡಿನಲ್ಲಿ ಹದಿನೈದು-ಇಪ್ಪತ್ತು ವರ್ಷ ನೆಲೆಸಿ, ಅಲ್ಲಿ ಗಳಿಸಿದ ಪುಟ್ಟ ಗಂಟನೊಂದಿಗೆ ಬೆಂಗಳೂರಿಗೆ ಬಂದು ಒಂದು ನರ್ಸಿಂಗ್ ಹೋಂ ಸ್ಥಾಪಿಸುವ ಪ್ರಯತ್ನ ಮಾಡಿದರು. ಈ ಕೆಲಸಕ್ಕಾಗಿ ಹಲವಾರು ರೀತಿಯ ಏಜೆಂಟರನ್ನು ಸಂಪರ್ಕಿಸಿದರು. ಇವರು ಪರದೇಶದಲ್ಲಿ ಪೌಂಡ್‌ಗಳಲ್ಲಿ ಹಣ ಗಳಿಸಿದ್ದಾರೆಂಬ ವಾಸನೆ ಹಿಡಿದ ಏಜೆಂಟರು ಒಂದಕ್ಕೆರಡರಂತೆ ಸುಲಿಯಲ್ಲಾರಂಭಿಸಿದರು. ನಿವೇಶನಕ್ಕಾಗಿ ಅಥವಾ ಕಟ್ಟಿದ ಮನೆಗಾಗಿ, ಕಡೆಗೆ ನರ್ಸಿಂಗ್ ಹೋಂ ತೆಗೆಯಲು ಅನುಮತಿಗಾಗಿ ತಿಂಗಳುಗಟ್ಟಲೆ ಅಲೆದಾಡ ಬೇಕಾಯಿತು. ಎಲ್ಲಾ ಕಡೆಗಳಲ್ಲೂ ಲಂಚ! ಲಂಚ! ಬರೀ ಅನುಮತಿಗೆ ಒಬ್ಬ ಮಹಾನು ಭಾವ ಹತ್ತು ಲಕ್ಷ ರೂ ಲಂಚ ಕೇಳಿದ. ಈ ಮಧ್ಯೆ ವಿದ್ಯುಚ್ಛಕ್ತಿಯ ಕಡಿತ, ನೀರಿನ ತಾಪತ್ರಯ, ರಸ್ತೆಯ ಹೊಂಡಗಳು, ಕಲುಷಿತ ಗಾಳಿ ಎಲ್ಲದರಿಂದ ಬೇಸತ್ತ ದಂಪತಿಗಳು, ಇನ್ನೂ ರಾಜೀನಾಮೆ ಕೊಡದೇ ಇಂಗ್ಲೆಂಡಿನಲ್ಲಿ ಉಳಿಸಿಕೊಂಡಿದ್ದ ತಮ್ಮ ಕೆಲಸಕ್ಕೆ ಸದ್ದಿಲ್ಲದೇ ವಾಪಸ್ಸಾದರು. ಅವರು ತಂದಿದ್ದ ಪುಟ್ಟ ಗಂಟನಲ್ಲಿ ವ್ಯರ್ಥವಾಗಿ ಅರ್ಧ ಕಳೆದೇ ಹೋಗಿತ್ತು! ಅದರೊಂದಿಗೆ ನನ್ನ ನೆಲ, ನನ್ನ ಜನ, ನನ್ನ ಸಂಸ್ಕೃತಿ ಎನ್ನುವ ಅವರ ಮಮತೆಯೂ ನೆಲಸಮವಾಗಿತ್ತು.

ನಮ್ಮ ಅನಿವಾಸಿ ಭಾರತೀಯರು ಚೀನಿಯರಂತೆ ತಮ್ಮ ತಾಯ್ನಾಡಿನಲ್ಲಿ ಹಣ ಹೂಡಬೇಕೆಂದು ಇತ್ತೀಚೆಗೆ ನಡೆದ ಸರಕಾರಿ ಸೆಮಿನಾರಿನಲ್ಲಿ ಹೇಳಲಾಯಿತು.

## ಎಲ್ಲೆಡೆ ವ್ಯಾಪಾರ ಡಲ್! ಏಕೆ?



ಚೀನಾದೊಂದಿಗೆ ಹೋಲಿಸುವಾಗ ಚೀನಾದಲ್ಲಿ ಈಗ್ಗೆ ಕೆಲವೇ ವರ್ಷಗಳಲ್ಲಿ ನಡೆದಿರುವ ಪ್ರಗತಿಯನ್ನು ಗಮನಿಸುವುದೂ ಮುಖ್ಯ. ಇಡೀ ವಿಶ್ವದಲ್ಲಿ ಜನಸಂಖ್ಯೆಯಲ್ಲಿ ಮುಂದಿದ್ದ ಚೀನಾ ಕೆಲವೇ ವರ್ಷಗಳಲ್ಲಿ ಜನನ ನಿಯಂತ್ರಣವನ್ನು ಕಟ್ಟು ನಿಟ್ಟಾಗಿ ಪಾಲಿಸಿ ಭಾರತಕ್ಕಿಂತ ಈ ವಿಚಾರದಲ್ಲಿ ಹಿಂದೆ ಸರಿದಿದೆ. ಕಾನೂನು ಮತ್ತು ನಿಯಮಗಳ ಪರಿಪಾಲನೆ ಅಲ್ಲಿ ಅತ್ಯಂತ ಬಿಗಿಯಾಗಿದೆ. ಸರಕಾರದ ಯೋಜನೆಗಳು ಅಲ್ಲಿ ಅಚ್ಚುಕಟ್ಟಾಗಿ ಪಾಲನೆಯಾಗುತ್ತವೆ.

ಸಿಂಗಾಪುರದ ಚೀನಿ ದೇವಾಲಯಗಳಲ್ಲಿ ಒಂದು ಹುಂಡಿ ಇಟ್ಟಿರುತ್ತಾರೆ. ಚೀನಾದಿಂದ ಮೂರು ತಲೆಮಾರುಗಳ ಹಿಂದೆಯೇ ವಲಸೆ ಬಂದ ಚೀನಿಯರು ಆ ಹುಂಡಿಗೆ ಚಿಲ್ಲರೆ ಹಾಕುತ್ತಿರುತ್ತಾರೆ. ಆ ಹಣವೆಲ್ಲ ಎಲ್ಲಿಗೆ ಹೋಗುತ್ತದೆ ಗೊತ್ತ? ಯಾವ ದೇವಾಲಯದ ಕಾರ್ಯಕ್ಕೂ ಅಲ್ಲ ಅಥವಾ ಪೂಜಾರಿಯ ಕಿಸೆಗೂ ಅಲ್ಲ! ಅದು ಹೋಗುವುದು ನೇರವಾಗಿ ಚೀನಾ ಸರಕಾರಕ್ಕೆ. ಈ ರೀತಿ ಎಲ್ಲೆಲ್ಲಿ ಚೀನಿಯರು ವಾಸ ಮಾಡುತ್ತಾರೋ ಅಲ್ಲಲ್ಲಿಂದ ಸಂಗ್ರಹಿಸಿದ ಹಣವನ್ನೆಲ್ಲಾ ಚೀನಾ ಸರಕಾರ ತನ್ನ ದೇಶದ ರಸ್ತೆ ದುರಸ್ತಿಗಾಗಿ ಬಳಸುವುದಂತೆ! 'ಈ ರಸ್ತೆ ಇಷ್ಟೊಂದು ಸುಂದರವಾಗಿರಲು ಕಾರಣ ದೂರದಲ್ಲಿರುವ ನಮ್ಮ ಬಂಧುಗಳ ಔದಾರ್ಯ' ಎನ್ನುವ ಫಲಕ ಚೀನಾದಲ್ಲಿ ಅಲ್ಲಲ್ಲಿ ಕಾಣುವುದಂತೆ!

ಶಿಸ್ತು, ಪರಧನವೆಂದರೆ ಬೆಂಕಿ ಎನ್ನುವ ಭಾವ, ದುಡಿದು ಗಳಿಸುವ ಛಲ, ಇವು ಯಾವುದೂ ಮೂಲದಲ್ಲೇ ಇಲ್ಲದ ಈ ನೆಲದಲ್ಲಿ ಹಣ ಹೂಡಲು, ಈ ನೆಲದ ಹಂಗನ್ನೇ ತೊರೆದು ಹೋಗಿರುವ ಭಾರತೀಯರನ್ನು ಆಹ್ವಾನಿಸಲು ನಮಗೆ ನೈತಿಕ ಹಕ್ಕಾದರೂ ಇದೆಯೇ? ■



ಎಲ್ಲಿಡೆ ವ್ಯಾಪಾರ ಡಲ್! ಏಕೆ?

10ನೇ ಪುಟದಿಂದ

ಮತ್ತು ವಾಣಿಜ್ಯ ಮಂತ್ರಾಲಯದ ಮಳ್ಳೆಗಣ್ಣಿನಿಂದಾಗಿ ಬೆಲೆಗಳು ಗಗನಕ್ಕೇರಿದವು. ತಾನೇ ರಫ್ತು ಮಾಡಿದ್ದ ಈರುಳ್ಳಿಯನ್ನು ಹೆಚ್ಚು ಬೆಲೆ ತೆತ್ತು ಆಮದು ಮಾಡಿಕೊಳ್ಳಬೇಕಾಯ್ತು. 3 ರಾಜ್ಯಗಳ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಆಡಳಿತ ರೂಢ ಸರ್ಕಾರ ಸೋತಿದ್ದರಿಂದ ಹೂಡಿಕೆದಾರರು ಇನ್ನಷ್ಟು ಸಂದಿಗ್ಧಕ್ಕೆ ಸಿಲುಕಿದರು.

### ಕುಸಿತಕ್ಕೆ ಕಾರಣಗಳು

ಪ್ರಸ್ತುತದ ಕುಸಿತಕ್ಕೆ ಮುಖ್ಯ ಕಾರಣಗಳು - ಜಾಗತಿಕ ಆರ್ಥಿಕ ಪರಿಸ್ಥಿತಿ, ಕುಸಿದ ಕೈಗಾರಿಕೆ, ಕೃಷಿ ಉತ್ಪಾದನೆ, ರಫ್ತು.

ಆಗಸ್ಟ್ 97ರಲ್ಲಿ ಥೈಲ್ಯಾಂಡ್‌ನಲ್ಲಿ ಪ್ರಾರಂಭವಾದ ಏಷಿಯನ್ ಫ್ಲೂ ನಂತರ ಪೂರ್ವ ಹಾಗೂ ಆಗ್ನೇಯ ಏಷ್ಯಾವನ್ನು ವ್ಯಾಪಿಸಿ, ರಷ್ಯಾವನ್ನು ಪ್ರವೇಶಿಸಿ ಅಲ್ಲಿನ ರೂಬೆಲ್‌ನ್ನು ಅಪಮೌಲ್ಯಗೊಳಿಸಿಬಿಟ್ಟಿತು. ನಂತರದ ಪಾಳಿ ಲ್ಯಾಟಿನ್

# ಆರ್ಥಿಕ ಹಿನ್ನಡೆ ಕುರಿತು ಹುಬ್ಬಳ್ಳಿ ವ್ಯಾಪಾರಿಗಳ ಅಭಿಪ್ರಾಯ

ಸಮೀಕ್ಷೆ

■ ಡಾ. ಟಿ.ಕೆ.ತಾಪಸ್

1. ನಿಮ್ಮ ಸಂಸ್ಥೆಯಲ್ಲಿ ಆರ್ಥಿಕ ಹಿನ್ನಡೆಯನ್ನು ಅನುಭವಿಸಿರುವಿರಾ?
2. ಹೌದಾದರೆ - ಯಾವಾಗಿನಿಂದ?
3. ಇಲ್ಲವೆಂದಾದರೆ - ಏಕೆ?
4. ಸಾರ್ವತ್ರಿಕ ಆರ್ಥಿಕ ಹಿನ್ನಡೆಗೆ ನಿಮ್ಮ ಅಭಿಪ್ರಾಯದಲ್ಲಿ ಯಾರು ಕಾರಣ? ಹೇಗೆ?

### ಸುಖದೇವ್ ಸಿಂಗ್ ಛಡ್ಡಾ

**ದ್ವಿಚಕ್ರವಾಹನಗಳ ಪ್ರಮುಖ ವ್ಯಾಪಾರಿ, ನೀಲಿಜಿನ್ ರಸ್ತೆ, ಹುಬ್ಬಳ್ಳಿ,**

1. ಇಲ್ಲ ಕಳೆದ ತಿಂಗಳು ನನ್ನ ವಹಿವಾಟು 100% ಹೆಚ್ಚಿದೆ. 3. ನನ್ನ ವ್ಯಾಪಾರದ ವಸ್ತು Hero Honda ಬಹಳ ಬೇಡಿಕೆಯಲ್ಲಿದೆ.

4. ಜಗತ್ತಿನ ಹಲವಾರು ರಾಷ್ಟ್ರಗಳನ್ನು ಅನೇಕ ಸಲ ಸಂದರ್ಶಿಸಿದ್ದೇನೆ. ಆರ್ಥಿಕ ಹಿನ್ನಡೆ ಜಾಗತಿಕ ಸಮಸ್ಯೆ.

ನವೆಂಬರ್‌ನಲ್ಲಿ ಜಪಾನ್, ರಶಿಯಾಗಳಿಗೆ ಭೆಟ್ಟಿಕೊಟ್ಟಿದ್ದೆ. ಭಾರತ ಸುದೈವಿ. ಅಲ್ಲೆಲ್ಲ ಪರಿಸ್ಥಿತಿ ಇಲ್ಲಿಗಿಂತ ಕೆಟ್ಟದಾಗಿದೆ. ಗ್ರಾಹಕರು ತಮ್ಮ ಆದಾಯಕ್ಕಿಂತ ಹೆಚ್ಚು ಖರ್ಚು ಮಾಡುವ ಪ್ರವೃತ್ತಿ, ಮಾರುಕಟ್ಟೆಯ ಸಮೀಕ್ಷೆಯಿಲ್ಲದೆ ಉತ್ಪಾದನೆ, ಉದ್ದಿಮೆಗಳ ಉಸ್ತುವಾರಿಯಲ್ಲಿನ ತಪ್ಪು ಹೆಜ್ಜೆಗಳೇ ಇಂದಿನ ಆರ್ಥಿಕ ಹಿನ್ನಡೆಗೆ ಕಾರಣ. ಇದಿಲ್ಲದಿದ್ದರೆ ಇನ್ನೂ 25% ರಿಂದ 30% ಹೆಚ್ಚು ಮಾರುತ್ತಿದ್ದೆ.

### ಪರಶುರಾಮ್ ಊಟವಾಲೆ

**ಅಂಬಿಕಾ ಡ್ರೆಸಿಸ್, ತಯಾರಿ ಬಟ್ಟೆಗಳ ಪ್ರಮುಖ ಸಗಟು ವ್ಯಾಪಾರಿಗಳು, ಹುಬ್ಬಳ್ಳಿ,**

1. ಹೌದು

2. ಕಳೆದ 3-4 ವರ್ಷಗಳಿಂದ

4. ಬಟ್ಟೆಯ ಗುಣಮಟ್ಟ ಇಳಿಯುತ್ತಲೇ ಇದೆ. ಯಾವ ಬಟ್ಟೆಯೂ ಗುಣಮಟ್ಟದ್ದಿಲ್ಲ. ಬಾಂಗ್ಲಾದೇಶ, ಚೀನಾದಿಂದ ಆಮದಾಗುವ ಕಚ್ಚಾ ವಸ್ತುಗಳ ಮಿಶ್ರಣದಿಂದ ತಾಳಿಕೆಯಿಲ್ಲ. ಪ್ರತಿ ದಿನ ಬೆಲೆಗಳು ಇಳಿಯುತ್ತಿರುವುದರಿಂದ 15 ದಿವಸಗಳಿಗಾಗುವಷ್ಟು ಮಾತ್ರ ಖರೀದಿ. ತೀಕ್ಷ್ಣ ಪೈಪೋಟಿಯಿಂದ ಲಾಭಕ್ಕೆ ಕತ್ತರಿ.

ಜನರ ಲಕ್ಷ್ಯ ಡಿಸೈನ್‌ನತ್ತ, ಗುಣಮಟ್ಟದತ್ತಲ್ಲ. ಹೈದರಾಬಾದ್, ಭಿವಂಡಿಗಳಲ್ಲಿಯ ಸಣ್ಣ ಪ್ರಮಾಣದ ತಯಾರಕರು ಲಾಭದಾಶೆಯಿಂದ ಏನೇನೋ ಉತ್ಪಾದಿಸಿ ಮೋಸ ಮಾಡುತ್ತಿದ್ದಾರೆ. ವ್ಯವಹಾರ ಮಾಡುವುದು ಅತ್ಯಂತ ಸಾಹಸವೆನಿಸುತ್ತಿದೆ.



### ಆನಂದ್ ನರಗುಂದ್

**ವಿದ್ಯುತ್ ಉಪಕರಣಗಳ ಮತ್ತು ಡೀಜೆಲ್ ಎಂಜಿನ್ ಬಿಡಿ ಭಾಗಗಳ ವ್ಯಾಪಾರಿ, ಹುಬ್ಬಳ್ಳಿ,**

1. ಹೌದು.

2. 1997ರಿಂದ

4. ಹಣಕಾಸಿನ ತೊಂದರೆಯಿಂದ ಎಲ್ಲ ರಂಗಗಳಲ್ಲೂ ಬೇಡಿಕೆ ಇಳಿಮುಖವಾಗಿದೆ. ಉತ್ಪಾದನೆ ಕುಂಠಿತಗೊಂಡಿದೆ. ನಮ್ಮ ರಂಗದಲ್ಲೂ 25% ರಿಂದ 28% ಬೇಡಿಕೆ ಇಳಿಮುಖ. ಯಾರಲ್ಲೂ ಉತ್ಸಾಹವಿಲ್ಲ.

ರಾಜ್ಯ-ಕೇಂದ್ರ ಸರಕಾರದ ನೀತಿ ಗಳಲ್ಲಿ ಆಗಾಗಿನ ಬದಲಾವಣೆ ಕಾರಣ. ಉದಾ: ಪ್ರವೇಶ ತೆರಿಗೆ ಹಾಗೂ ಕರ ಪದ್ಧತಿ.



### ಡಾ. ಪಿ. ಜಿ. ಲೋಕೇಶ್ವರ್

**ವಿಜಯಾ ಮೆಡಿಕಲ್ ವರ್ಕ್ಸ್ (ಆಯುರ್ವೇದ ಔಷಧಗಳ ತಯಾರಕರು) ಹುಬ್ಬಳ್ಳಿ**

1. ಹೊರಗಿನ ಸ್ಥಳಗಳಿಗೆ ಪೂರೈಕೆ 25 % ರಿಂದ 40 % ಇಳಿದಿದೆ.

2. ಒಂದು ವರ್ಷದಿಂದ.

4. ಕಚ್ಚಾವಸ್ತುಗಳ ಬೆಲೆ, ಸಾಗಾಣಿಕೆ ದರ, ಸಂಬಳ, ಸಾರಿಗೆ ಎಲ್ಲಾ ಏರಿವೆ. ಜನರು ನಗರಗಳಿಗೆ ಬರುವುದು ಸಾಮಾಜಿಕ ಅಶಾಂತಿಯಿಂದ ಕಡಿತಗೊಂಡಿದೆ. ಪ್ರಾಮಾಣಿಕ ವ್ಯವಹಾರಕ್ಕಾಗಿ ಹಣ ಬಳಕೆ ಕಡಿಮೆ ಯಾಗಿದೆ. ಕಲುಷಿತ ಪರಿಸರ, ದುಶ್ಚಟಗಳಿಂದ ರೋಗ ರುಜಿನಗಳು ಹೆಚ್ಚಾಗಿದ್ದರಿಂದ ನಮ್ಮ ಔಷಧಗಳಿಗೆ ಬೇಡಿಕೆ ಏರುತ್ತಿದೆ.

ಆದರೆ ಹಣದ ಅಭಾವ, ರಾಜಕೀಯ ಅನಿಶ್ಚಿತತೆ, ಏರುತ್ತಿರುವ ಉತ್ಪಾದನ ವೆಚ್ಚ (ಉದಾ: ವಿದ್ಯುತ್ ಉತ್ಪಾದನಾ ವೆಚ್ಚ ಪ್ರತಿ ಯೂನಿಟ್‌ಗೆ ಭಾರತದ ವೆಚ್ಚ ಜಾಗತಿಕ ದಾಖಲೆ) ಅದಕ್ಷತೆ, ನೈತಿಕ ಮೌಲ್ಯಗಳ ಪತನ ಇವೆಲ್ಲ ಕಾರಣ.



ಅಮೆರಿಕಾ ದೇಶಗಳದ್ದು, ಮುಖ್ಯವಾಗಿ ಬ್ರೆಜಿಲ್ ತೀವ್ರ ಒತ್ತಡಕ್ಕೆ ಒಳಗಾಯ್ತು. ಅಮೆರಿಕಾದ ಹೆಡ್ಜ್ ಫಂಡ್ ದಿವಾಳಿಯಾಯ್ತು. ಮುಕ್ತ ಮಾರುಕಟ್ಟೆ ಆಧಾರಿತ, ಅಂತರಾಷ್ಟ್ರೀಯ ಹಣಕಾಸು ನೆರವನ್ನು ನಂಬಿರುವ ವ್ಯವಸ್ಥೆಯನ್ನು ಹಾಗೂ ವರ್ಲ್ಡ್ ಬ್ಯಾಂಕ್ ಐಎಂಎಫ್‌ನ ಪಾತ್ರವನ್ನು ಈ ಕುಸಿತ ಪ್ರಶ್ನೆಗೆ ಸಿಲುಕಿಸಿಬಿಟ್ಟಿದೆ.

ಇದೆಲ್ಲದರಿಂದಾಗಿ ವಿಶ್ವದ ಒಟ್ಟು ಉತ್ಪಾದನೆ ಹಾಗೂ ಮಾರಾಟದ ಪ್ರಮಾಣ ಎರಡೂ ಕುಸಿದಿದೆ. ಜಾಗತಿಕ ವ್ಯಾಪಾರದ ಬೆಳವಣಿಗೆ ಶೇ. 1ಕ್ಕೆ, ಆರ್ಥಿಕ ಬೆಳವಣಿಗೆ ಪ್ರಮಾಣ ಶೇ. 2 ಕ್ಕೆ ಇಳಿದಿದೆ.

### ಕುಸಿದ ರಫ್ತು

ಏಷ್ಯಾದ ರಾಷ್ಟ್ರಗಳ ಸಂಕಷ್ಟವು ಭಾರತದ ರಫ್ತಿನ ಮೇಲೆ ಭಾರೀ ಪರಿಣಾಮ ಬೀರಿದೆ. ಮುಖ್ಯ ಆಮದು ದೇಶಗಳಾದ ಜಪಾನ್, ಇಂಡೋನೇಷ್ಯಾ, ಮಲೇಶಿಯಾ ಕೊಳ್ಳುವ ಪ್ರಮಾಣವನ್ನು ಕಡಿಮೆ ಮಾಡಿವೆ. ಜಪಾನ್ ತನ್ನ ಕೊಳ್ಳುವಿಕೆಯನ್ನು (ಒಟ್ಟು ಉತ್ಪನ್ನದ ಶೇ. 40 ರಷ್ಟಿದ್ದನ್ನು) ಕಡಿಮೆ ಮಾಡಿದೆ. ಇಷ್ಟಲ್ಲದೆ ಥೈಲ್ಯಾಂಡ್, ಇಂಡೋನೇಷ್ಯಾ, ದಕ್ಷಿಣ ಕೊರಿಯಾ ದೇಶಗಳು ಭಾರತದೊಡನೆ ಸ್ಪರ್ಧಿಸುತ್ತಿವೆ. ಆಗ್ನೇಯ ಏಷ್ಯಾದ ಪರಿಸ್ಥಿತಿಯಿಂದಾಗಿ ಕಚ್ಚಾ ಹತ್ತಿ, ಚರ್ಮ, ಔಷಧಿ ರಸಾಯನಿಕಗಳು, ಬಟ್ಟೆ, ಯಂತ್ರಗಳಿಗೆ ಬೇಡಿಕೆ ಕುಗ್ಗಿದೆ. ಕರಕುಶಲ ವಸ್ತು, ಚರ್ಮ ಮತ್ತು ಸಂಚಾರ ಸಲಕರಣೆಗಳಿಗೆ ಯುರೋಪ್‌ನಲ್ಲಿ ಬೇಡಿಕೆ ಕುಗ್ಗಿದೆ. ಬಾಂಗ್ಲಾದಲ್ಲಿ ಬೆಳೆ ವಿಫಲವಾಗಿದ್ದರಿಂದ ಹಾಗೂ ಆಫ್ರಿಕಾದ ಕೆಲವು ದೇಶಗಳು ಆಹಾರದ ಕೊರತೆ ಅನುಭವಿಸುತ್ತಿರುವುದರಿಂದ, ಅಕ್ಕಿಯ ರಫ್ತು ಶೇ. 100 ರಷ್ಟು ಹೆಚ್ಚಿದೆ. ಆಭರಣ ಮತ್ತು ಹರಳಿನ ರಫ್ತಿನ ಪ್ರಮಾಣ ಯಥಾಸ್ಥಿತಿಯಲ್ಲಿದೆ. ಆದರೆ ಇವುಗಳ ರಫ್ತಿನ ಪ್ರಮಾಣ ಒಟ್ಟು ರಫ್ತಿನ ಶೇ. 42 ಮಾತ್ರ. ರಫ್ತುದಾರರು ದೀರ್ಘಕಾಲದ ಸಾಲ ಮತ್ತು ವಿದೇಶೀ ಮಾರುಕಟ್ಟೆಯಲ್ಲಿ ಭಾರತದ ಪದಾರ್ಥಗಳ ಉತ್ತೇಜನಕ್ಕಾಗಿ ಕಡಿಮೆ ಬಡ್ಡಿಯಲ್ಲಿ ಸಾಲವನ್ನು ಅಪೇಕ್ಷಿಸುತ್ತಿದ್ದಾರೆ.

ಸಣ್ಣ ಮತ್ತು ಮಧ್ಯಮ ಪ್ರಮಾಣದ ರಫ್ತುದಾರರ ಪಾಲು ರಫ್ತಿನಲ್ಲಿ ನೇರವಾಗಿ ಶೇ. 40 ಹಾಗೂ ಅಪರೋಕ್ಷ ರಫ್ತು ಶೇ. 20ರಷ್ಟಿದೆ. ಭಾರತದ 500 ದೊಡ್ಡ ಕಂಪನಿಗಳ ರಫ್ತು ಕೇವಲ ಶೇ. 8 ಮಾತ್ರ. ದೀರ್ಘಕಾಲೀನ ಆರ್ಥಿಕ ಹಿನ್ನೆಡೆಯಿಂದಾಗಿ ಸಣ್ಣ, ಮಧ್ಯಮ ಸಂಸ್ಥೆಗಳ ಸೊಂಟವೇ ಮುರಿದು ಹೋಗಿದೆ. 91ರ ನಂತರ ರಫ್ತು 20 ರಿಂದ 30 ರಷ್ಟಿತ್ತು. ಈಗದು ಶೇ. 3ಕ್ಕೆ ಕುಸಿದಿದೆ. ಸದ್ಯಕ್ಕೆ ರಫ್ತು ಹೆಚ್ಚುವ ಸಾಧ್ಯತೆಗಳಿಲ್ಲ.

### ಕೈಗಾರಿಕೆ

ಕೈಗಾರಿಕಾ ಉತ್ಪನ್ನದ ಒಂದಂಗವಾದ ತಯಾರಿಕಾ ಕ್ಷೇತ್ರದ ಪಾಲು ಒಟ್ಟು ಉತ್ಪನ್ನದಲ್ಲಿ ಶೇ. 80ರಷ್ಟು. ಇದರ ಏರಿಕೆ ಪ್ರಮಾಣ 97ರಲ್ಲಿ ಶೇ. 6 ರಷ್ಟಿದ್ದದ್ದು 98ರಲ್ಲಿ ಶೇ. 3.6ಕ್ಕೆ ಇಳಿದಿದೆ. ಇನ್ನೊಂದು ಅಂಗವಾದ ಗಣಿಗಾರಿಕೆ ಮತ್ತು ವಿದ್ಯುತ್ ಉತ್ಪಾದನೆಯಲ್ಲಿ ಗಣಿಗಾರಿಕೆ ಶೇ. 0.4ರಷ್ಟು ಕುಸಿದಿದೆ. ಇದಕ್ಕೆ ಕಾರಣಗಳು ಕುಸಿದ ಸ್ವದೇಶೀ ಪೆಟ್ರೋಲಿಯಂ ಉತ್ಪಾದನೆ ಮತ್ತು ಪ್ರಪಂಚದಾದ್ಯಂತ ಲೋಹ ಹಾಗೂ ಅಲೋಹಗಳ ಬೆಲೆ ಇಳಿದಿರುವುದು. ಹೆಚ್ಚಿದ ಜಲವಿದ್ಯುತ್ ಉತ್ಪಾದನೆಯಿಂದಾಗಿ ವಿದ್ಯುತ್ ಕೊರತೆ ಕೆಲಮಟ್ಟಿಗೆ ತಪ್ಪಿದೆ.

ಮೂಲಭೂತ, ಮಧ್ಯಂತರ, ಗ್ರಾಹಕ ಹಾಗೂ ಕ್ಯಾಪಿಟಲ್ ವಸ್ತುಗಳಲ್ಲಿ ಎಲ್ಲವುಗಳ ಉತ್ಪಾದನೆ ಕುಸಿದಿದೆ. ಶೇ. 12-15ರಷ್ಟಿದ್ದ ಕೈಗಾರಿಕಾ ಬೆಳವಣಿಗೆ ಶೇ. 3ಕ್ಕೆ ಇಳಿದಿದೆ. ಕಳೆದ ವರ್ಷ ಉದ್ಯಮ ಕ್ಷೇತ್ರವು ಗಮನಾರ್ಹವಾದ ಒಂದೇ ಒಂದು ಹೊಸ ಯೋಜನೆಯನ್ನು ಪ್ರಾರಂಭಿಸಲಿಲ್ಲ. ಕೆಲವೇ ಕೆಲವು ಹೊಸ ಇಷ್ಯೂಗಳು ಮಾರುಕಟ್ಟೆಗೆ ಬಂದವು. ಬೇಡಿಕೆಯ ಪ್ರಮಾಣ ಕುಸಿದಿರುವುದರಿಂದ ಬಂಡವಾಳ ಹೂಡುವವರೇ ಇಲ್ಲವಾಗಿದ್ದಾರೆ. 98ರ ವರ್ಷವಿಡೀ ಗ್ರಾಹಕ ಎಲೆಕ್ಟ್ರಾನಿಕ್ ಉದ್ಯಮ ಬಹುಮಾನ, ಬದಲಿ ಒಂದುಕೊಂಡರೆ ಇನ್ನೊಂದು ವಸ್ತು ಸೋಡಿ ಇತ್ಯಾದಿ ನಾಟಕಗಳನ್ನು ಮಾಡಿ ವ್ಯಾಪಾರವನ್ನು ಕುದುರಿಸಲು ಪ್ರಯತ್ನಿಸಿತು. ದೇವನಹಳ್ಳಿ ವಿಮಾನ ಯೋಜನೆಯಿಂದ ಟಾಟಾ ಸಂಸ್ಥೆ ಹೊರ ಹೋಗಿದ್ದು ಸರ್ಕಾರಕ್ಕೆ ಬಿದ್ದ ಇನ್ನೊಂದು ಹೊಡೆತ.



ಎಲ್ಲೆಡೆ ವ್ಯಾಪಾರ ಡಲ್! ಏಕೆ?

### ಕೃಷಿ

ದೇಶದ 70% ಜನರ ಜೀವನಾಧಾರ ವೃತ್ತಿ ಇದು. 1997-98ರ ಸಾಲಿನಲ್ಲಿ ಕೃಷಿ ಉತ್ಪಾದನೆ ಶೇ. 3 ರಷ್ಟು ಕುಸಿದಿದೆ. 98-99ರ ಸಾಲಿನಲ್ಲಿ ಕೃಷಿ ಉತ್ಪಾದನೆ ಹೆಚ್ಚಾಗುವ ಸಾಧ್ಯತೆ ಇದೆ. 35 ಕೃಷಿ-ಹವಾಮಾನ ಉಪವಿಭಾಗಗಳಲ್ಲಿ 2ರಲ್ಲಿ ಮಾತ್ರ ಕಡಿಮೆ ಮಳೆ ಆಗಿದೆ. ಮಳೆಯನ್ನು ಆಧರಿಸಿ ಉತ್ಪಾದನೆಯನ್ನು ಗಣಿಸುವ ಪದ್ಧತಿ ಇದ್ದರೂ, ಶೇ. 60ರಷ್ಟು ಭೂಮಿಗೆ ನೀರಾವರಿ ಸೌಲಭ್ಯವಿಲ್ಲ ಎನ್ನುವುದನ್ನು ಮರೆಯುವಂತಿಲ್ಲ.

ಈ ಕ್ಷೇತ್ರಕ್ಕೆ ಬಂಡವಾಳ ಹೂಡಿದಲ್ಲಿ ಅದು ಆರ್ಥಿಕತೆಯನ್ನು ಮೇಲೆತ್ತಬಹುದು. ಆದರೆ ಈ ಕ್ಷೇತ್ರದ ಬಗ್ಗೆ ಬರೀ ಬಾಯಿಮಾತಿನ ಸಾಂತ್ವನ ನೀಡಲಾಗುತ್ತಿದೆ.

**ಕೋಷ್ಟಕ 1** ರಫ್ತಿನ ಇಳಿಮುಖ

| ಪದಾರ್ಥ | 1997 | 1998 | ಕುಸಿತಕ್ಕೆ ಕಾರಣ |
|---|---|---|---|
| ಬಾಸ್ಮತಿ ಅಕ್ಕಿ | 22.75% | 15.34% | ಅಕಾಲಿಕ ಮಳೆ |
| ಸಮುದ್ರ ಉತ್ಪನ್ನಗಳು | 13.26% | 6.21% | ಜಪಾನ್ ಆಮದನ್ನು ಕಡಿಮೆ ಮಾಡಿತು. |
| ನಾರು, ಬಟ್ಟೆ ಇತ್ಯಾದಿ | 14.42% | 18.95% | ಆಗ್ನೇಯ ಏಷ್ಯಾದಲ್ಲಿನ ಆರ್ಥಿಕ ಕುಸಿತ, ಬೇರೆ ದೇಶಗಳಿಂದ ಸ್ಪರ್ಧೆ. |
| ಕರಕುಶಲ ವಸ್ತುಗಳು | 16.70% | 10.94% | ಉದ್ಯಮಗಳಿಗೆ ಸಾಲದ ನೆರವು ಸಿಗುತ್ತಿಲ್ಲ. |
| ಚರ್ಮ ಉತ್ಪನ್ನಗಳು | - 1.96% | - 5.2% | ಮಾರ್ಕೆಟ್ ಸೌಲಭ್ಯವಿಲ್ಲ. ಕಠಿಣ ಮಾಲಿನ್ಯ ನಿಯಂತ್ರಣ ಕಾಯ್ದೆ. |
| ಯಂತ್ರೋಪಕರಣಗಳು | 10.3% | 0.02% | ಕುಸಿದ ಜಾಗತಿಕ ಬೇಡಿಕೆ |



ಎಲ್ಲೆಡೆ ವ್ಯಾಪಾರ ಡಲ್! ಏಕೆ?

**ಆರ್ಥಿಕಸ್ಥಗಿತತೆ - ಹಣದುಬ್ಬರ**

ಎಲ್ಲ ಆರ್ಥಿಕ ಸೂಚಕಗಳು - ಒಟ್ಟು ರಾಷ್ಟ್ರೀಯ ಉತ್ಪಾದನೆ, ಕೈಗಾರಿಕಾ ಬೆಳವಣಿಗೆ, ವ್ಯಾಪಾರನಂಬಿಕೆ, ರಫ್ತು, ಕೃಷಿ ಉತ್ಪಾದನೆ ಕುಗ್ಗಿರುವುದು ಹಾಗೂ ಹಣದುಬ್ಬರ ಏರಿರುವುದು ಆರ್ಥಿಕ ಪರಿಸ್ಥಿತಿ ಸಂಕುಚನಗೊಳ್ಳುತ್ತಿರುವ ಆದರೆ ಬೆಲೆ ನಿರಂತರವಾಗಿ ಏರುತ್ತಿರುವ ಸೂಚನೆ. ಇದನ್ನು ಸ್ಟಾಗ್‌ಫ್ಲೇಷನ್ ಎನ್ನುತ್ತಾರೆ. ಇಂತಹ ಸ್ಥಿತಿಯಲ್ಲಿ ಗ್ರಾಹಕ ಕಡಿಮೆ ಮೌಲ್ಯದ ವಸ್ತುಗಳನ್ನು ಕೊಳ್ಳಲು ಪ್ರಾರಂಭಿಸುತ್ತಾನೆ. ಉತ್ಪನ್ನಗಳು ಮಾರಾಟವಾಗದೆ ಉಳಿಯುವುದರಿಂದ ಉತ್ಪಾದನೆ ಕುಸಿಯುತ್ತದೆ, ಕೆಲಸಗಾರರು ಕೆಲಸ ಕಳೆದುಕೊಳ್ಳುತ್ತಾರೆ. ನಿರುದ್ಯೋಗ ಹೆಚ್ಚುವುದರಿಂದ, ಖರ್ಚು ಮಾಡಲು ಇಚ್ಚಿಸದ ಗ್ರಾಹಕರು ಹಣ ಉಳಿಸುತ್ತಾರೆ, ಬಂಡವಾಳ ಹೂಡಲಿಚ್ಚಿಸದೆ ಉತ್ಪಾದಕರು ಹಣ ಉಳಿಸುತ್ತಾರೆ. ಹಣ ಬ್ಯಾಂಕ್‌ನಲ್ಲಿ ಶೇಖರವಾಗುತ್ತದೆ. / ನಂತರ ಯಾವುದೇ ಸರ್ಕಾರದ ನೀತಿಯು ಬೇಡಿಕೆಯನ್ನು

# ರಸ್ತೆ ಎಂಬ ಜೀವನಾಡಿ

**ಬೆಂ**ಗಳೂರಿನ ರಸ್ತೆಗಳನ್ನು ನೋಡಿಯೇ ಸಂತೋಷಿಸಬೇಕು, ಅಷ್ಟು ಚೆನ್ನಾಗಿವೆ (?) ಅವು. ಇದೇ ಮಾತು ಭಾರತದ ಬಹುಪಾಲು ರಸ್ತೆಗಳಿಗೆ ಅನ್ವಯಿಸುತ್ತದೆ.

ಅಮೆರಿಕಾದ ಅಧ್ಯಕ್ಷರಾಗಿದ್ದ ಜಾನ್ ಎಫ್ ಕೆನಡಿ ಒಮ್ಮೆ ಹೇಳಿದ್ದರು - ರಸ್ತೆಗಳು ಸಂಪತ್ತನ್ನು ಸೃಷ್ಟಿಸುತ್ತವೆ. ಭಾಜಪ ಸರ್ಕಾರವು ಕಾಶ್ಮೀರವನ್ನು ಕನ್ಯಾಕುಮಾರಿಗೆ, ಸಿಲ್ಚಾರ್ ಅನ್ನು ಪೋರಬಂದರ್‌ಗೆ ಕೂಡಿಸುವ ಹಾಗೂ ದೇಶದ ನಾಲ್ಕು ಮಹಾನಗರಗಳನ್ನು (ನವದೆಹಲಿ, ಕಲ್ಕತ್ತ, ಮುಂಬೈ, ಚೆನ್ನೈ) ಜೋಡಿಸುವ ಒಟ್ಟು 12,000 ಕಿ.ಮೀ. ಉದ್ದದ, 50,000 ಕೋಟಿ ರೂ. ಮೊತ್ತದ ಯೋಜನೆಯೊಂದನ್ನು ಮೊನ್ನೆ ಪ್ರಾರಂಭಿಸಿದೆ.

ರಾಷ್ಟ್ರದ ಜೀವನಾಡಿಗಳಾದ ರಸ್ತೆಗಳಿಗೆ ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಒಟ್ಟು ವೆಚ್ಚದಲ್ಲಿ ಶೇ.1.4ರಷ್ಟನ್ನು ಮೀಸಲಿಡಲಾಗಿತ್ತು. 8ನೇ ಯೋಜನೆಯಲ್ಲಿ ಅದು ಶೇ.0.57ಕ್ಕೆ ಇಳಿದಿದೆ. ರಸ್ತೆಗಳ ಉದ್ದ (1951 ರಿಂದ 1996) 1998 11 ಕಿ.ಮೀ.ನಿಂದ 38,500 ಕಿ.ಮೀ ಏರಿದೆ. ಪ್ರಯಾಣಿಕರ ಹಾಗೂ ಸರಕು ಸಾಗಾಣೆ ಕ್ರಮವಾಗಿ ಶೇ. 65 ಹಾಗೂ 60 ರಷ್ಟು ಹೆಚ್ಚಿದೆ.

ಒಂದು ವೇಳೆ ಪ್ರಧಾನಿ ಘೋಷಿಸಿದ ಯೋಜನೆ ಕಾರ್ಯ ಸಾಧ್ಯವಾದಲ್ಲಿ ಅದೊಂದು ಪವಾಡ ಸೃಷ್ಟಿಗೆ ದಾರಿಮಾಡಿಕೊಡುತ್ತದೆ.

■ 10 ವರ್ಷಗಳ ಕಾಲ ಆಟೋ ಉದ್ಯಮವು ತನ್ನ ಉತ್ಪಾದನೆಯನ್ನು ವರ್ಷಕ್ಕೆ 4 ರಿಂದ 16 ಲಕ್ಷಕ್ಕೆ ಏರಿಸಬಹುದು.

■ ಈ ರಸ್ತೆಮಾರ್ಗಗಳ ನಿರ್ಮಾಣಕ್ಕೆ ವರ್ಷಕ್ಕೆ 600 ಕೋಟಿ ರೂ.ಗಳ ಸಿಮೆಂಟ್ ಹಾಗೂ 700 ಕೋಟಿ ರೂ. ಮೊತ್ತದ ಉಕ್ಕಿನ ಅಗತ್ಯವಿದ್ದು, ಇಡೀ ಆರ್ಥಿಕ ಪರಿಸ್ಥಿತಿ ಬದಲಾಗಿ ಬಿಡುತ್ತದೆ.

■ ವರ್ಷವೊಂದಕ್ಕೆ ಇಂಧನ, ಬಿಡಿಭಾಗ ಹಾಗೂ ವಾಹನ ದುರಸ್ತಿನ ಬಾಬ್ತಿನಲ್ಲಿ 42,000 ಕೋಟಿ ರೂ. ಉಳಿಯುತ್ತದೆ.

■ ಸುಮಾರು 50 ಲಕ್ಷ ದಷ್ಟು ಉದ್ಯೋಗ ಸೃಷ್ಟಿ ಸಾಧ್ಯ.

■ ಅಪಘಾತದಿಂದಾಗುವ ಪ್ರಾಣಹಾನಿ, ಆಸ್ತಿನಷ್ಟದಿಂದಾಗುವ ರೂ. 4000 ಕೋಟಿ ಉಳಿತಾಯ ಸಾಧ್ಯ.

■ ಸಾಗಾಣಿಕೆಯಿಂದ ನಷ್ಟವಾಗುವ ಶೇ.5-7ರಷ್ಟು ಕೃಷಿ ಉತ್ಪನ್ನಗಳು ಉಳಿಯುವುದರಿಂದ, ಬೆಲೆ ಇಳಿಯುತ್ತದೆ.

ಈ ಯೋಜನೆಗೆ ಅನೇಕ ಅಡೆತಡೆಗಳಿವೆ. ಸರ್ಕಾರ ಇದಕ್ಕಾಗಿ ಪ್ರತಿವರ್ಷ 5000 ಕೋಟಿ ರೂ. ಒದಗಿಸಬೇಕಾಗುತ್ತದೆ. ಇದರಲ್ಲಿ ಖಾಸಗಿ ಕ್ಷೇತ್ರ 1000 ಕೋಟಿ ರೂ. ಪೂರೈಸಬಲ್ಲುದು. ಡೀಸೆಲ್‌ಮೇಲೆ ವಿಶೇಷ ಶುಲ್ಕ ಹಾಕಿ ಹಣ ಸಂಗ್ರಹಿಸಬಹುದು. ಆದರೆ ಅದು ರಾಜಕೀಯವಾಗಿ ಕಷ್ಟವಾದ ನಿರ್ಧಾರ. ಹೊಸ ವಾಹನಗಳ ಮೇಲೆ ಒಂದೇ ಸಲ ತೆರಿಗೆ ವಿಧಿಸುವ ಮೂಲಕ ಹಾಗೂ ಅಬ್ಕಾರಿ ಸುಂಕದ ಒಂದು ಭಾಗವನ್ನು ಸರ್ಕಾರ ನೀಡಲು ಯೋಚಿಸುತ್ತಿದೆ. ಇಷ್ಟಲ್ಲದೆ ರಾಜ್ಯಗಳು ಹೊಸ ತೆರಿಗೆ ಮೂಲಕ 200-400 ಕೋಟಿ ರೂ. ಸಂಗ್ರಹಿಸಬೇಕಾಗುತ್ತದೆ. ಯೋಜನೆಯನ್ನು 10 ವರ್ಷಗಳಲ್ಲಿ ಮುಗಿಸಲು ಪ್ರತಿವರ್ಷ 1200 ಕಿ.ಮೀ. ರಸ್ತೆ ನಿರ್ಮಾಣ ನಡೆಯಬೇಕು. ಈಗ ಸಾಧ್ಯವಾಗುತ್ತಿರುವುದು ಕೇವಲ 100 ರಿಂದ 150 ಕಿ.ಮೀ ನಷ್ಟು. ಇದಕ್ಕೆ ಉಪಕರಣಗಳ ಕೊರತೆಯನ್ನು ತುಂಬಬೇಕು. ತಂತ್ರಜ್ಞಾನವನ್ನು ಮೇಲ್ದರ್ಜೆಗೇರಿಸಬೇಕು. ರಸ್ತೆಗಾಗಿ ಭೂಮಿಯನ್ನು ಹಿಡಿಸಿಕೊಳ್ಳುವುದು ದೊಡ್ಡ ಸಮಸ್ಯೆ. ರಸ್ತೆ ನಿರ್ಮಾಣಕ್ಕೆ ಸರಕಾರದ ಹಲವು ಏಜೆನ್ಸಿಗಳ ಅನುಮತಿ ಬೇಕಾಗಿರುವುದರಿಂದ, ಅಧಿಕಾರಶಾಹಿ ತಡೆಯೊಡ್ಡಬಹುದು. ಖಾಸಗಿ ಉದ್ಯಮ ತಾನು ಖರ್ಚು ಮಾಡಿದ ಹಣವನ್ನು ವಾಪಸ್ ಪಡೆಯಲು ವಿಧಿಸುವ ನಾಕಾ ಸುಂಕವನ್ನು ಅಧಿಕೃತಗೊಳಿಸಲು ಕಾನೂನಿನ ಬದಲಾವಣೆಯ ಅಗತ್ಯವಿದೆ.

ಇದೆಲ್ಲ ಅವಘಡಗಳನ್ನು ಮೀರಿ ಈ ಯೋಜನೆ ಕಾರ್ಯಸಾಧ್ಯವಾದರೆ, ಪರಿಸ್ಥಿತಿ ಬದಲಾಗಿ ಬಿಡುತ್ತದೆ. ಮರೆತಿದ್ದು - ಕಾಂಗ್ರೆಸ್ ಸರ್ಕಾರದಲ್ಲಿದ್ದ ಮಂತ್ರಿ ಜಗದೀಶ್ ಟೈಟ್ಲರ್ ಇಂತದ್ದೇ ಭಾರಿ ಯೋಜನೆಯೊಂದರ ಬಗ್ಗೆ ಮಾತನಾಡಿದ್ದರು. ಅದು ಕಡತದಲ್ಲೇ ಉಳಿದು ಹೋಯ್ತು!

## ಜೀವವಿಮೆಯ ಕ್ಷೇತ್ರ

ಭಾರತೀಯ ಜೀವವಿಮೆಯ ಪರಿಸ್ಥಿತಿ ಹೇಗೆಂದರೆ ಜೀವದ ರಕ್ಷಣೆಗೆ ಪಾಲಿಸಿ ತೆಗೆದುಕೊಳ್ಳುವ ವ್ಯಕ್ತಿ ಜೀವವಿಮಾ ಸಂಸ್ಥೆಯಿಂದ ತನ್ನ ಹಣವನ್ನು ವಾಪಸ್ ತೆಗೆದುಕೊಳ್ಳಲು ತನ್ನೆಲ್ಲ ಶಕ್ತಿಯನ್ನು, ಚಪ್ಪಲಿಗಳನ್ನು ಸವೆಸಬೇಕಾಗಿದೆ.

ಈ ದೃಶ್ಯ ಬದಲಾಗಲಿದೆ. ಸರ್ಕಾರ ಈ ಕ್ಷೇತ್ರವನ್ನು ಖಾಸಗಿ ಸಂಸ್ಥೆಗಳಿಗೆ ತೆರೆಯಲಿದೆ. ಇದು ಜೀವವಿಮೆ ಕ್ಷೇತ್ರದಲ್ಲಿ ಪ್ರಮಾಣಾತ್ಮಕ ಹಾಗೂ ಪರಿಮಾಣಾತ್ಮಕ ಪರಿಣಾಮ ಬೀರಲಿದೆ. 99 ಕೋಟಿ ಜನರಿರುವ ದೇಶವಲ್ಲಿರುವುದು ಕೇವಲ 2 ಕೋಟಿ ಪಾಲಿಸಿದಾರರು. ಜೀವವಿಮೆ ಹರಡಿಲ್ಲದ 77 ದೇಶಗಳ ಪಟ್ಟಿಯಲ್ಲಿ ಭಾರತವು 74ನೇ ಸ್ಥಾನ!

ಭಾರತೀಯರು ಇನ್ಶೂರೆನ್ಸ್‌ನಲ್ಲಿ ತೊಡಗಿಸಿ

ಹೆಚ್ಚಿಸುವಲ್ಲಿ ಸೋಲುತ್ತದೆ.

ಹೆಚ್ಚಿದ ಹಣದುಬ್ಬರ (ಶೇ.8.5)ದಿಂದಾಗಿ ಬೆಲೆಗಳು ಏರಿ, ಮಧ್ಯವರ್ತಿಗಳು ದುಡ್ಡು ಮಾಡಿದರು. ಕೈಗಾರಿಕಾ ಉತ್ಪಾದನೆ ಶೇ.3ಕ್ಕೆ, ಶೇ.6.2ರಷ್ಟಿದ್ದ ಗ್ರಾಹಕ ಪದಾರ್ಥಗಳ ಉತ್ಪಾದನೆ ಶೇ.0.8ಕ್ಕೆ ಇಳಿದಿದೆ. 563 ಕಂಪನಿಗಳ ಬೆಳವಣಿಗೆ ಪ್ರಮಾಣ ಶೇ. 8.3ಕ್ಕೆ ಕುಸಿದಿದ್ದು, ಒಟ್ಟು ಲಾಭ ಶೇ.1.3ಕ್ಕೆ ಇಳಿದಿದೆ. ವಾಹನಗಳ ಮಾರಾಟ ಕುಸಿದಿದೆ. ಟಾಟಾ ಇಂಡಿಕಾದ ಪ್ರವೇಶವಾಗಿದ್ದರೂ, ಮಾರಾಟದಲ್ಲಿ ಹೆಚ್ಚಳವೇನೂ ಕಂಡು ಬಂದಿಲ್ಲ. ಭಾರೀ ಹೋಟೆಲುಗಳು ಕೊಠಡಿಗಳ ಬಾಡಿಗೆಯನ್ನು ಅರ್ಧದಷ್ಟು ಕಡಿಮೆಮಾಡಿವೆ.

ಸರ್ಕಾರವೊಂದು ಆರ್ಥಿಕ ಕೊರತೆಯನ್ನು ಎದುರಿಸುತ್ತಿದ್ದಾಗ ಅದನ್ನು ಬಗೆಹರಿಸಲು ಅದು ಬಳಸುವ ದಾರಿಗಳು ನಾಲ್ಕು- ವಿದೇಶದಿಂದ ಸಾಲ ತೆಗೆದುಕೊಳ್ಳುವುದು, ಸ್ವದೇಶದಲ್ಲಿ ಬಾಂಡ್‌ಗಳ ಮೂಲಕ ಸಾಲ ಎತ್ತುವುದು, ತನ್ನ ವಿದೇಶೀ ಕಾಯ್ದಿಟ್ಟ (Foreign Reserve) ಹಣವನ್ನು ಬಳಸಿಕೊಳ್ಳುವುದು ಮತ್ತು ಹೆಚ್ಚು ಕರೆನ್ಸಿಯನ್ನು ಮುದ್ರಿಸುವುದು. ಈ ಎಲ್ಲ ಕ್ರಮಗಳೂ ಒಂದಲ್ಲ ಒಂದು ರೀತಿ ಆರ್ಥಿಕ ಅಸಮತೋಲನಕ್ಕೆ ಕಾರಣವಾಗುತ್ತವೆ. ಹೆಚ್ಚು ಸ್ವದೇಶಿ ಸಾಲದಿಂದ ಬಡ್ಡಿಯ ದರ ಹೆಚ್ಚುತ್ತದೆ. ಇದರಿಂದಾಗಿ ಖಾಸಗಿ ಬಂಡವಾಳ ಹೂಡಿಕೆ ಕುಸಿಯುತ್ತದೆ. ವಿದೇಶಿ ಸಾಲದಿಂದ ಸಾಲ ಬಿಕ್ಕಟ್ಟು (debt crisis) ತಲೆದೋರುತ್ತದೆ. ವಿದೇಶೀ ಕಾಯ್ದಿಟ್ಟ ಹಣವನ್ನು ಬಳಸಿಕೊಂಡಲ್ಲಿ, ಕರೆನ್ಸಿಯ ಮೌಲ್ಯ ಕುಸಿಯುತ್ತದೆ. ಹೆಚ್ಚು ಕರೆನ್ಸಿಯನ್ನು ಮುದ್ರಿಸಿದರೆ, ಹಣದುಬ್ಬರ ಹೆಚ್ಚುತ್ತದೆ. 98ರಲ್ಲಿ ಮೇಲಿನವುಗಳಲ್ಲಿ 3ನ್ನು ಮಾಡಲಾಗಿದೆ. ರಿಸರ್ಜೆಂಟ್ ಇಂಡಿಯಾ ಬಾಂಡ್‌ಗಳ ಮೂಲಕ ಅನಿವಾಸಿ ಭಾರತೀಯರಿಂದ ಹಣ ಸಂಗ್ರಹಿಸಲಾಗಿದೆ. 91,000 ಕೋಟಿ ರೂ. ನಷ್ಟು ಸ್ವದೇಶಿ ಸಾಲ ಎತ್ತಲಾಗಿದೆ. ಹಣದ ಮುದ್ರಣವು ಶೇ. 15ರ ಗುರಿ ಮೀರಿ ಶೇ. 17ನ್ನು ದಾಟಿದೆ. ಸ್ವದೇಶಿ ಸಾಲದಿಂದ ಬಡ್ಡಿಯ ದರ ಏರದಿರಲು ಕಾರಣ ಹಣ ಸಂಗ್ರಹಿಸಿರುವುದು ರಿಸರ್ವ್ ಬ್ಯಾಂಕ್. ಇದೆಲ್ಲದರಿಂದಾಗಿ ಹಣದುಬ್ಬರ ಬಹುಕಾಲ ಮುಂದುವರಿಯುತ್ತದೆ. ಅಂದರೆ ಪದಾರ್ಥಗಳ ಬೆಲೆಯು ಇಳಿಯುವುದಿಲ್ಲ. (ಕೋಷ್ಟಕ-2)



ಎಲ್ಲೆಡೆ ವ್ಯಾಪಾರ ಡಲ್! ಏಕೆ?

## ಎಲ್ಲೆಡೆ ಕುಸಿತ

ಕೃಷಿ, ಉದ್ಯಮ ಹಾಗೂ ಕೃಷಿ ಕ್ಷೇತ್ರದಲ್ಲಿ ಬೆಳವಣಿಗೆ ಕುಸಿದಿರುವುದರಿಂದ, ಒಟ್ಟು ರಾಷ್ಟ್ರೀಯ ಉತ್ಪನ್ನವು 99ರಲ್ಲಿ ಶೇ.6.5ರಷ್ಟು ಬೆಳೆಯುತ್ತದೆ ಎನ್ನುವುದನ್ನು ಕಠೋರ ಆಶಾವಾದಿ ಕೂಡಾ ನಂಬುವುದಿಲ್ಲ. ಸರ್ಕಾರ ಒಟ್ಟಾರೆ ಸಾಲ ತೆಗೆದುಕೊಳ್ಳುವ ಪ್ರಮಾಣ ಹೆಚ್ಚಿಸುವುದರಿಂದ ಹಣಕಾಸಿನ ಕೊರತೆ ಶೇ.7ನ್ನು ಮುಟ್ಟುವ ಸಾಧ್ಯತೆ ಇದೆ. ಆದಾಯ ಸಂಗ್ರಹಣೆಯ ಗುರಿಯ ಹತ್ತಿರ ಹೋಗುವುದೂ ಸಾಧ್ಯವಾಗಿಲ್ಲ. ಎಕ್ಸೈಜ್ ಸಂಗ್ರಹಣೆಯಲ್ಲಿನ ಕೊರತೆ ರೂ. 10,000 ಕೋಟಿ ಇದ್ದರೆ, ಕಸ್ಟಂಸ್‌ನಲ್ಲಿನ ಕೊರತೆ 4000

ರುವ ಹಣ ತಲಾ ರೂ. 255. ಕೊರಿಯಾದಲ್ಲಿ ಈ ಪ್ರಮಾಣ ರೂ. 56865 ಇದೆ. ಭಾರತದಲ್ಲಿ ಒಟ್ಟಾರೆ ಇನ್ಶೂರೆನ್ಸ್‌ನಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ.2 ರಷ್ಟನ್ನು ಹೂಡಲಾಗಿದೆ, ಇದು ಜಾಗತಿಕ ಸರಾಸರಿ ಶೇ.7.8 ಕ್ಕಿಂತ ಭಾರೀ ಕಡಿಮೆ. ಇನ್ಶೂರೆನ್ಸ್‌ನ ಉಳಿತಾಯವು ಒಟ್ಟು ಉಳಿತಾಯದ ಶೇ. 5.95 ರಷ್ಟಿದ್ದರೆ, ಇಂಗ್ಲೆಂಡ್‌ನಲ್ಲಿ ಆ ಪ್ರಮಾಣ ಶೇ. 52.5 ರಷ್ಟಿದೆ.

ಇನ್ಶೂರೆನ್ಸ್ ಭಾರತದಲ್ಲಿ ಬೆಳೆಯದೇ ಇರುವುದಕ್ಕೆ ಕಾರಣ ಗ್ರಾಹಕನಿಗೆ ಆಯ್ದುಕೊಳ್ಳಲು ಸ್ವಾತಂತ್ರ್ಯವಿಲ್ಲದಿರುವುದು ಹಾಗೂ ಸೇವಾಸೌಲಭ್ಯದ ಕೊರತೆ. ಈ ವಿಭಾಗದಲ್ಲಿ ಸರ್ಕಾರದ ಏಕಸ್ವಾಮ್ಯವಿರುವುದರಿಂದ ಪರಿಸ್ಥಿತಿ ಹದಗೆಟ್ಟು ಹೋಗಿದೆ. ಎಲ್‌ಐಸಿಯಲ್ಲಿ 80 ರೀತಿಯ ಪಾಲಿಸಿಗಳಿವೆ. ಆದರೆ 4-5ರಲ್ಲಿ ಮಾತ್ರ ಜನ ಹಣ ತೊಡಗಿಸುತ್ತಿದ್ದಾರೆ. ನಗರದಲ್ಲಿನ ಜನರು ತೆರಿಗೆ ಉಳಿಸಲು ಇನ್ಶೂರೆನ್ಸ್ ಅನ್ನು ಬಳಸಿಕೊಳ್ಳುತ್ತಾರೆ. ಜನರಿಗೆ ಯಾವುದು ಸೂಕ್ತ ಎನ್ನುವುದನ್ನು ನಿರ್ಧರಿಸುವವರು ವಿಮಾ ಏಜೆಂಟರು. ಏಜೆಂಟನಿಗೆ ಕಮೀಷನ್ ಪ್ರಮಾಣ ಮುಖ್ಯವೇ ಹೊರತು ಗ್ರಾಹಕರ ಹಿತವಲ್ಲ. ಇನ್ಶೂರೆನ್ಸ್ ಪಾಲಿಸಿಯ ಅವಧಿ ಮುಗಿದ ನಂತರ ಹಣ ವಾಪಸ್ ಪಡೆಯಲು, ಎಲ್ಲ ದಾಖಲೆಗಳು ಸರಿಯಿದ್ದರೂ ಹರ ಸಾಹಸ ಪಡಬೇಕಾಗುತ್ತದೆ. ಪಾಲಿಸಿಗಳನ್ನು ಸೂಕ್ತವಾಗಿ ವಿಭಾಗಿಸಿ, ಪ್ರೀಮಿಯಂ ಮೊತ್ತವನ್ನು ಕಡಿಮೆ ಮಾಡಿದಲ್ಲಿ, ಗ್ರಾಹಕ ಸ್ನೇಹಿಯಾಗಿಸಿದಲ್ಲಿ, ಗ್ರಾಹಕ ಈ ಕ್ಷೇತ್ರದಲ್ಲಿ ಹಣ ಹೂಡುತ್ತಾನೆ. ಮುಂದಿನ 5 ವರ್ಷಗಳಲ್ಲಿ ಮೂಲಭೂತ ಸೌಕರ್ಯಗಳ ರಚನೆಗೆ 4,50,000 ಕೋಟಿ ರೂ.ಗಳ ಅವಶ್ಯಕತೆ ಇದೆ. ಇನ್ಶೂರೆನ್ಸ್ ಬಳಸಿ, ಈ ಬಂಡವಾಳದ ಕ್ರೋಢೀಕರಣ ಸಾಧ್ಯ. ಸಂಗ್ರಹವಾದ ಹಣವನ್ನು ದೇಶದಲ್ಲೇ ಹೂಡಿ ಉದ್ಯೋಗ ಸೃಷ್ಟಿಸಿ, ಆರ್ಥಿಕ ಬೆಳವಣಿಗೆಯನ್ನು ಸಾಧಿಸಬಹುದು.

ಖಾಸಗೀಕರಣದ ನಿರ್ಧಾರವನ್ನು ಕಾರ್ಮಿಕ ಸಂಘಟನೆ,ಬೇರೆ ರಾಜಕೀಯ ಪಕ್ಷಗಳಲ್ಲದೆ, ಆರ್‌ಎಸ್‌ಎಸ್, ಸ್ವದೇಶಿ ಜಾಗರಣ ಮಂಚ್‌ಗಳು ವಿರೋಧಿಸುತ್ತಿವೆ. ಈ ಕ್ಷೇತ್ರಕ್ಕೆ ಕಾಲಿಡಲು ಟಾಟಾ, ಗೋದ್ರೆಜ್, ಬಿರ್ಲಾಗಳು ಕಾಯುತ್ತಿದ್ದಾರೆ. ಸೂಕ್ತ ಎಚ್ಚರಿಕೆಯೊಂದಿಗೆ ಖಾಸಗೀಕರಣ ಮಾಡಿದಲ್ಲಿ ಒಳಿತಾದೀತು.

ಆರ್‌ಬಿಐ ವರದಿ ಪ್ರಕಾರ ದೇಶದ ಹಣಕಾಸಿನ ಲೆಕ್ಕ ಸಂಪೂರ್ಣ ಗೊಂದಲಮಯವಾಗಿದೆ. ಮಿತಿಯಿಲ್ಲದ ವೆಚ್ಚ ಹಾಗೂ ಅಸಮರ್ಪಕ ಆದಾಯ ಸಂಗ್ರಹದಿಂದಾಗಿ ಜಿಡಿಪಿಯ ನಿರ್ದೇಶಿತ ಗುರಿ ಮುಟ್ಟುವುದು ಸಾಧ್ಯವಿಲ್ಲ. ಶೇ. 13.9 ರಷ್ಟಿರಬೇಕಿದ್ದ ಒಟ್ಟಾರೆ ವೆಚ್ಚ ಶೇ.29ಕ್ಕೆ ಏರಿದೆ. (ಕಳೆದ ಸಾಲಿನ ಪ್ರಮಾಣ ಶೇ. 16.6) ಶೇ. 17ರಷ್ಟಿರಬೇಕಿದ್ದ ಆದಾಯ ಸಂಗ್ರಹಣೆ ಶೇ. 11.7ಕ್ಕೆ ಇಳಿದಿದೆ.

ಸರ್ಕಾರ ಸಾಲ ಎಂದು ಎತ್ತಿದ ಹಣ 8 ತಿಂಗಳಿನಲ್ಲಿ 80,543 ಕೋಟಿ ರೂ. ಮೀರಿದೆ. ಅಂದರೆ ಪ್ರತಿದಿನ ಸರ್ಕಾರ ರೂ.319 ಕೋಟಿಯುಷ್ಟು ಸಾಲ ಪಡೆದುಕೊಳ್ಳುತ್ತಿದೆ. ಇದು ಖರ್ಚುಗಳನ್ನು ತೂಗಿಸಲು ತೆಗೆಯುತ್ತಿರುವ ಹಣ. ಸದ್ಯಕ್ಕೆ ಸರ್ಕಾರ ತೀರಿಸಬೇಕಾಗಿರುವ ಸಾಲದ ಪ್ರಮಾಣ ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ.53.9 ರಷ್ಟಿದೆ. ಸರ್ಕಾರ ಒಟ್ಟು ವೆಚ್ಚ ಮಾಡುವ ಹಣದಲ್ಲಿ ಶೇ.28 ರಷ್ಟು ಭಾಗ ಸಾಲದ ಬಡ್ಡಿಗೆ ಹೋಗುತ್ತಿದೆ. ಸರ್ಕಾರ ತೆಗೆದುಕೊಳ್ಳುತ್ತಿರುವ 100 ರೂ. ಸಾಲಕ್ಕೆ ಅದು 135 ರೂ. ಪಾವತಿ ಮಾಡುತ್ತಿದೆ. ಈ ಬಡ್ಡಿಯ ಹೊರೆ ಏರುತ್ತಲೇ ಹೋಗುತ್ತಿದೆ. ಸಾರ್ವಜನಿಕ ಕ್ಷೇತ್ರದ ಉದ್ಯಮಗಳಿಂದ ಬಂಡವಾಳವನ್ನು ಹಿಂತೆಗೆದುಕೊಂಡು ಸಾಲವನ್ನು ಪುನರ್ ರೂಪಿಸುವ ತನಕ ಇದು ಮುಂದುವರಿಯುತ್ತದೆ.



# ಎಲ್ಲೆಡೆ ವ್ಯಾಪಾರ ಡಲ್! ಏಕೆ?

ಕೋಟಿ ರೂ. ಇದೆ. ಸಾರ್ವಜನಿಕ ಕ್ಷೇತ್ರದ ಉದ್ಯಮಗಳಲ್ಲಿ ಬಂಡವಾಳ ಹೂಡಿಕೆಯನ್ನು ಹಿಂತೆಗೆದುಕೊಳ್ಳುವುದರಿಂದ ನಿರೀಕ್ಷಿಸಿದ್ದ 5,000 ಕೋಟಿ ರೂ.ನಲ್ಲಿ ಸಂಗ್ರಹವಾಗಿರುವುದು ಕೇವಲ 225 ಕೋಟಿ ರೂ. ಮಾತ್ರ. ಕೈಗಾರಿಕಾ ಬೆಳವಣಿಗೆ ಮತ್ತು ರಫ್ತು ಕುಸಿದಿರುವುದರಿಂದ ವ್ಯಾಪಾರ ಕೊರತೆ (Trade Deficit) ಯ ಪ್ರಮಾಣ 5.5. ಬಿಲಿಯನ್ ಡಾಲರ್‌ನಿಂದ 12 ಬಿಲಿಯನ್ ಡಾಲರ್‌ಗೆ ಹೆಚ್ಚಿದೆ. ಸ್ಟಾಕ್ ಮಾರುಕಟ್ಟೆ ಸ್ಥಗಿತವಾಗಿದೆ.

ಈ ವರ್ಷವೂ ರಾಜ್ಯಾದಾಯದ ಕೊರತೆ ಜಿ.ಡಿ.ಪಿ.ಯ. ಶೇ.6ನ್ನು ಮೀರುತ್ತದೆ. ಆದಾಯದ ಕೊರತೆ ಎಂದರೆ ರಾಜ್ಯ ತನ್ನ ವೆಚ್ಚ ಭರಿಸಲು ಸಾಲ ಮಾಡುತ್ತಿದೆ ಎಂದರ್ಥ.

## ಹೊಸ ಯೋಜನೆ ಮತ್ತು ಆಯವ್ಯಯ

ಶೇ.6.5ರ ಆರ್ಥಿಕ ಬೆಳವಣಿಗೆಯನ್ನು ನಿರೀಕ್ಷಿಸಿರುವ 8,59,000 ಕೋಟಿ ರೂ.ನ 9ನೇ ಯೋಜನೆಯನ್ನು ಸರ್ಕಾರ ಸಿದ್ಧಪಡಿಸಿದೆ. ಈ ಪಂಚವಾರ್ಷಿಕ ಯೋಜನೆಗಳು 5 ವರ್ಷಕ್ಕೊಮ್ಮೆ ನಡೆಯುವ ತಮಾಷೆಗಳು. ಸಿನ್ಹಾರ ಇನ್ನೊಂದು ಬಜೆಟ್ ಹೊಸದನ್ನೇನಾದರೂ ತರಬಹುದೆಂದು ಜನ ನಿರೀಕ್ಷಿಸುತ್ತಿದ್ದಾರೆ.

ಅಮೆರಿಕಾ ವ್ಯಾಪಾರ ನಿಷೇಧವನ್ನು ಹಿಂತೆಗೆದುಕೊಂಡಿದ್ದರಿಂದ, ಕಂಪನಿಗಳು ತಮ್ಮ ಶೇರುಗಳನ್ನು ವಾಪಸ್ ತೆಗೆದುಕೊಳ್ಳುವ ವಿಧೇಯಕವನ್ನು ಹೊರಡಿಸಿದ್ದರಿಂದ, ಕಂಟೈನರ್ ಕಾರ್ಪೋರೇಷನ್‌ನ 9 ದಶಲಕ್ಷ ಶೇರುಗಳನ್ನು ಮಾರಿದ್ದಲ್ಲದೆ, ಇನ್ನೂ 5 ಸಾರ್ವಜನಿಕ ಕ್ಷೇತ್ರದ ಉದ್ಯಮಗಳಲ್ಲಿ ಬಂಡವಾಳ ಹಿಂತೆಗೆದುಕೊಳ್ಳುವ ನಿರ್ಧಾರ ಪ್ರಕಟಿಸಿರುವುದರಿಂದ ಈಗ ಮಾರುಕಟ್ಟೆ ಸ್ವಲ್ಪ ಮಟ್ಟಿಗೆ ಉತ್ಸಾಹದಲ್ಲಿದೆ. ಸರ್ಕಾರ ಟೆಲಿಕಾಂ ಕ್ಷೇತ್ರದಲ್ಲಿ ಆಮದನ್ನು ಸರಳೀಕರಿಸಿದೆ. ಖಾಸಗಿ ಸಂಸ್ಥೆಗಳಿಗೆ ಇಂಟರ್‌ನೆಟ್ ಸೌಲಭ್ಯ ಪೂರೈಸಲು ಅನುಮತಿ ನೀಡಿದೆ. ನಗರಗಳ ಭೂಮಿತಿ ಕಾಯಿದೆಯಲ್ಲಿ ಬದಲಾವಣೆ ತರಲು, ವಿದ್ಯುತ್ ಉತ್ಪಾದನಾ ಕ್ಷೇತ್ರದಲ್ಲಿ ಖಾಸಗೀ/ವಿದೇಶಿ ಸಂಸ್ಥೆಗಳಿಗೆ ಪೂರ್ಣ ಒಡೆತನ ಕೊಡಲು ಪ್ರಯತ್ನ ನಡೆದಿದೆ.

ವಿದೇಶೀ ಬಂಡವಾಳ ಹೂಡಿಕೆಗೆ ಪಾರದರ್ಶಕ ನಿಯಮಗಳನ್ನು ರೂಪಿಸುವ ಅಗತ್ಯವಿದೆ. ಕಸ್ಟಂಸ್ ಶುಲ್ಕವನ್ನು ಹೆಚ್ಚಿಸುತ್ತ ಕೂರುವ ಬದಲು, ಮಾರುಕಟ್ಟೆಗೆ ವಿದೇಶೀ ಸಂಸ್ಥೆಗಳು ವಸ್ತುಗಳನ್ನು ತಂದು ತುಂಬುವುದನ್ನು ತಡೆಯುವ ವ್ಯವಸ್ಥೆ ಬಲಗೊಳ್ಳಬೇಕು. ಯುರೋಪಿಯನ್ ಕಮಿಷನ್‌ನಲ್ಲಿ ಇದಕ್ಕಾಗಿ 70 ಜನ, ಅಮೆರಿಕಾದಲ್ಲಿ 150 ಜನ ಅಧಿಕಾರಿಗಳಿದ್ದರೆ, ಭಾರತದಲ್ಲಿರುವುದು ಕೇವಲ 3 ಜನ! ಅದರಲ್ಲೂ ಒಬ್ಬ ಬೇರೆಡೆಗೆ ವರ್ಗವಾಗುವವನಿದ್ದಾನೆ. ಕಾರ್ಯನೀತಿಯ ಸುಧಾರಣೆ ಮಾತ್ರ ಸರ್ಕಾರದ ಜವಾಬ್ದಾರಿಯಾಗಬೇಕು. ಉಳಿದದ್ದನ್ನು ಗ್ರಾಹಕ, ಉದ್ಯಮ ಮತ್ತು ಸೇವಾಕ್ಷೇತ್ರಗಳು ಗಮನಿಸಿಕೊಳ್ಳುತ್ತವೆ.

91ರ ನಂತರ ಆರ್ಥಿಕ ಸರಳೀಕರಣ ನಮ್ಮನ್ನಿಲ್ಲಿಗೆ ತಂದು ನಿಲ್ಲಿಸಿದೆ. ಮೂಲಭೂತ ಸೌಕರ್ಯಗಳ ನಿರ್ಮಾಣಕ್ಕೆ ಸರ್ಕಾರ ಹೆಚ್ಚು ಹಣ ಹೂಡಲೇಬೇಕು. ಬೊಕ್ಕಸ ಖಾಲಿಯಾಗಿದೆ, ಆದರೆ ಸಾರ್ವಜನಿಕರಿಂದ ಸಾಲ ಎತ್ತುವಂತಿಲ್ಲ. ಕೃಷಿ ಕ್ಷೇತ್ರದಲ್ಲಿನ ಹೂಡಿಕೆ ಹೆಚ್ಚಿಸಬೇಕು. ಆಮದಿನ ಮೇಲೆ ಹೆಚ್ಚು ಸುಂಕ ಹಾಕಬಹುದಾದರೂ, ಅದನ್ನು ವಿದೇಶೀ ಸಂಸ್ಥೆಗಳು ವಿರೋಧಿಸುತ್ತವೆ.

ಸಿನ್ಹಾ ಸೆಪ್ಟೆಂಬರ್‌ನಲ್ಲಿ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ ಎಂದಿದ್ದರು. ಅದು 99ರಲ್ಲಿಯೂ ಸಾಧ್ಯವಾಗುವಂತೆ ಕಾಣಿಸುತ್ತಿಲ್ಲ. ತಮಾಷೆಯೆಂದರೆ ವೈಯಕ್ತಿಕ ಉಳಿತಾಯ ಯೋಜನಾ ಗುರಿಯಾದ ಶೇ.18.9ನ್ನು ಮೀರಿ, ಶೇ.19.3ಕ್ಕೆ ಮುಟ್ಟಿದೆ. ಖಾಸಗಿ ಕಾರ್ಪೋರೇಟ್ ಉಳಿತಾಯ ಉದ್ದೇಶಿತ ಶೇ.4.5ನ್ನು ಮೀರಿಸಿದೆ. ಇದರ ಅರ್ಥ ಜನರ ಬಳಿ, ಉತ್ಪಾದಕರ ಬಳಿ ಕಾಸು ಇದೆ. ಯಾರೂ ಬಿಚ್ಚುತ್ತಿಲ್ಲ ಅಷ್ಟೆ!

1998 ಅನೇಕ ಕನಸುಗಳು ಸತ್ತ ವರ್ಷ. ಕಾಂಗ್ರೆಸ್‌ಗಿಂತ ಬಿಜೆಪಿ ಉತ್ತಮ ಎನ್ನುವ ಕನಸು ಸತ್ತಿತ್ತು. ವಾಜಪೇಯಿ ಸಿನ್ಹಾ ತೆಗೆದುಕೊಂಡ ಕೆಲವು ನಿರ್ಧಾರಗಳು ಕೆಲಕಾಲದ ನಂತರ ಫಲ ಕೊಡುತ್ತವೆ. ದುರಂತವೆಂದರೆ ಆಗ ಅವರು ಇರುವುದಿಲ್ಲ ಅಷ್ಟೆ. ಮನಮೋಹನ್ ಸಿಂಗ್, ಚಿದಂಬರಂ ಮಾಡಿದ ಪಾಪಕ್ಕೆ ಸಿನ್ಹಾ ಪ್ರಾಯಶ್ಚಿತ್ತ ಅನುಭವಿಸುತ್ತಿದ್ದಾರೆ. ತಮ್ಮ ಮೂಢಮತಿಯಿಂದ ಅವರು ಇನ್ನಷ್ಟು ಹೊರೆ ಏರಿಸಿಕೊಂಡಿದ್ದಾರೆ. ■

**ಕೋಷ್ಟಕ 2**

| ಆರ್ಥಿಕ ಸೂಚಕಗಳು | ಬಜೆಟ್ ಅಂದಾಜು (98-99) | ಸಾಧನೆ(ಶೇ) | ಶರಾ |
|---|---|---|---|
| ಆದಾಯದ ಖರ್ಚು | 15 | 28.5 | ದುಪ್ಪಟ್ಟು |
| ಕಂದಾಯ ಸಂಗ್ರಹ | 17 | 11.7 | ಕುಸಿತ |
| ಒಟ್ಟು ಖರ್ಚು | 13.9 | 29 | ದುಪ್ಪಟ್ಟು |
| ತೆರಿಗೆಗಳಿಂದ ಬಂದ ಆದಾಯ | 17.8 | 8.6 | ಕುಸಿತ |
| ಬಂಡವಾಳ ಹಿಂದೆಗೆದುಕೊಳ್ಳುವುದರಿಂದ ನಿರೀಕ್ಷಿಸಿದ ಹಣ | 5000 ಕೋಟಿ ರೂ. | 225ಕೋಟಿ ರೂ. | ಭಾರೀ ಕಡಿಮೆ ಸಂಗ್ರಹ |
| ಕೈಗಾರಿಕಾ ಉತ್ಪಾದನೆ | 10 ರಿಂದ 11 | 3.6 | ತೀವ್ರ ಕುಸಿತ |
| ರಾಜ್ಯಾದಾಯದ ಕೊರತೆ | 5.6 | 7ಕ್ಕಿಂತ ಕಡಿಮೆ | ಹೆಚ್ಚು |
| ಜಿಡಿಪಿ ಬೆಳವಣಿಗೆ | 6.5-7 | 6ಕ್ಕಿಂತ ಕಡಿಮೆ | ಕಡಿಮೆ |

## ಪಂಜುಗಳು
(ಬಿಡಿ ಲೇಖನಗಳು)

ಲೇ: ಸು.ರಂ. ಎಕ್ಕುಂಡಿ
ಪ್ರ: ನವಕರ್ನಾಟಕ ಪಬ್ಲಿಕೇಷನ್ಸ್
ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 1
ಪುಟ: 112, ಬೆಲೆ: 35/-

## ಸಲಿಲಧಾರೆ
(ಚಿತ್ರ ಕವನಗಳು)

ಲೇ: ಪುಂಡಲೀಕ ಕಲ್ಲಿಗನೂರ
ಪ್ರ: ವೀರೇಂದ್ರ ಪ್ರಕಾಶನ
ಕಳಗಿನಪೇಟೆ, ಗಜೇಂದ್ರಗಡ-582 114
ಪುಟ: 56, ಬೆಲೆ: 30/-

## ಗೋರಾ
(ನಾಸ್ತಿಕವಾದಿಯೊಬ್ಬನ ಜೀವನ ಚರಿತ್ರೆ)

ಲೇ: ಎಚ್.ಎಸ್. ದೊರೆಸ್ವಾಮಿ
ಸಿ.ಆರ್. ಕೃಷ್ಣರಾವ್
ಪ್ರ: ನವಕರ್ನಾಟಕ ಪಬ್ಲಿಕೇಷನ್ಸ್
ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 1.
ಪುಟ :64, ಬೆಲೆ : 18/-

## ನೆಲಮುಗಿಲು
(ಕವನ ಸಂಕಲನ)

ಲೇ: ಶಂಕರ ಮುತ್ತಣ್ಣವರ
ಪ್ರ: ರಾಮಕೃಷ್ಣ ಪ್ರಕಾಶನ
ಯಡಹಳ್ಳಿ (ಗಲಗಲಿ) 587 117
ಪುಟ: 64, ಬೆಲೆ: 40/-

## ಇದು ಮುಗಿಯದ ಕಥೆ

ಲೇ : ದೇವಿಪ್ರಸಾದ್ ಚಟ್ಟೋಪಾಧ್ಯಾಯ
ಪ್ರ: ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್
ಲಿಮಿಟೆಡ್
ಎಂಬೆಸಿ ಸೆಂಟರ್,
ಕ್ರೆಸೆಂಟ್ ರಸ್ತೆ,
ಬೆಂಗಳೂರು - 560 001
ಪುಟ : 152, ಬೆಲೆ : 50/-

## ಸೂಕ್ತಿಗಳಲ್ಲಿ ಶಿಕ್ಷಣ

ಲೇ: ಟಿ.ವಿ.ವೆಂಕಟರಮಣಯ್ಯ
EWS 218, ಕೆ.ಎಚ್.ಬಿ. ಕಾಲೋನಿ
2ನೇ ಹಂತ, 5ನೇ ಕ್ರಾಸ್,
ಬಸವೇಶ್ವರನಗರ, ಬೆಂಗಳೂರು - 560 079
ಪುಟ: 80, ಬೆಲೆ: 30/-

## ಗುಡ್ ಬೈ ಬಿಜಾಪುರ!
(ನಗೆ ಬರಹಗಳು)

ಲೇ : ಮಲ್ಲಿಕಾರ್ಜುನ ಹುಲಗಬಾಳಿ
ಪ್ರ: ನಂದ ಪ್ರಕಾಶನ ಬನಹಟ್ಟಿ
'ಬಸವ ಸಂಪದ' ಬಸ್ ನಿಲ್ದಾಣ ಸಮೀಪ
ಬನಹಟ್ಟಿ - 587 311, ಜಿ. ಬಾಗಲಕೋಟೆ
ಪುಟ : 97, ಬೆಲೆ : 40/-

## ಕುಣಿಯಿತೆಂದರೆ ನಂದೀಕೋಲು
(ಕಥಾ ಸಂಕಲನ)

ಲೇ: ಕೆ.ಜಗದೀಶ್ ಬಳ್ಳಾರಿ
ಪ್ರ: ಅಂಕುರ ಪ್ರಕಾಶನ
473, ವಾಟರ್‌ಟ್ಯಾಂಕ್ ಬಸ್‌ಸ್ಟಾಪ್ ಬಳಿ,
ಬಸವೇಶ್ವರನಗರ, ಬೆಂಗಳೂರು - 79
ಪುಟ: 96, ಬೆಲೆ: 45/-

## ವೈದ್ಯನ ಅವೈದ್ಯ ಡೈರಿ

ಲೇ : ಡಾ. ಆರ್.ಆರ್. ಪಾಂಗಾಳ
ಪ್ರ: ಶಿವರಾಮ ಕಾರಂತ ವೇದಿಕೆ
307, 2ನೇ ಬ್ಲಾಕ್, 17ನೇ ಅಡ್ಡರಸ್ತೆ,
ಆರ್.ಟಿ. ನಗರ,
ಬೆಂಗಳೂರು - 560 0032.
ಪುಟ : 122, ಬೆಲೆ : 50/-

## ಪ್ರೇಮಿಕಾ
(ಹನಿಗವನಗಳು)

ಲೇ: ಪಮ್ಮಿ
ಪ್ರ: ಪಲ್ಲವಿ ಪ್ರಕಾಶನ
ಶಿಲ್ಪಾ ಸ್ಟುಡಿಯೋ,
ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು.
ಪುಟ: 64, ಬೆಲೆ: 25/-

# ಬೆಂಗಳೂರಿನ ನಾಗರಿಕರಿಗೆ ವಿಷ ಪ್ರಾಶನ?

ಡಿಎಲ್‌ಎಫ್ ವಸತಿ ಕಾಲೋನಿ ನಿರ್ಮಾಣದಿಂದ ಕೊಚ್ಚೆಗುಂಡಿಯಾಗಲಿರುವ ತಿಪ್ಪಗೊಂಡನಹಳ್ಳಿ ಜಲಾಶಯ

■ ಪ್ರೊ. ಟಿ. ಗೋವಿಂದಯ್ಯ
ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು

**ತಿಪ್ಪಗೊಂಡನಹಳ್ಳಿ ಕೆರೆಗೂ
ಬೆಂಗಳೂರಿನ ನಾಗರಿಕರಿಗೂ
ತಾಯಿ ಮಕ್ಕಳ ಸಂಬಂಧವೆನ್ನಬಹುದು.
ತಿಪ್ಪಗೊಂಡನಹಳ್ಳಿ
ಕೆರೆಯ ನೀರು
ಬೆಂಗಳೂರಿನ ನಾಗರಿಕರಿಗೆ
ತಾಯಿಯ ಎದೆ ಹಾಲಿನಷ್ಟೇ ಪವಿತ್ರ.
ತಾಯಿಯ ಎದೆ ಬತ್ತಿದರೆ
ಮಗುವಿಗೆ ಜೀವವಿಲ್ಲದಂತೆ,
ತಿಪ್ಪಗೊಂಡನಹಳ್ಳಿ
ಕೆರೆ ಬರಿದಾದರೆ
ಬೆಂಗಳೂರು ನಾಗರಿಕರಿಗೆ ಜೀವವಿಲ್ಲ.**

ಬೆಂಗಳೂರು ನಗರವು 'ಕಲ್ಯಾಣ ನಗರಿ' ಎಂಬ ಚಾರಿತ್ರಿಕ ಹಿನ್ನೆಲೆಗೆ ಪಾತ್ರವಾಗಿ ವಿಜಯನಗರ ಸಾಮ್ರಾಜ್ಯದ ವೈಭವ ಸಿರಿಯನ್ನು ಮೈಗೂಡಿಸಿಕೊಂಡು, ಸಮೃದ್ಧಿಯ ಸಿರಿನಾಡಾಗಿ, ವಿಶ್ವದಾದ್ಯಂತದಿಂದ ಜನರನ್ನು ತನ್ನೆಡೆಗೆ ಸೆಳೆದುಕೊಂಡು ಕನ್ನಡ ಹಾಗೂ ಕನ್ನಡಿಗರನ್ನು ತಬ್ಬಲಿಗಳಾಗಿಸುತ್ತಿರುವುದು ಖೇದಕರ.

ಇಂದು ಬೆಂಗಳೂರಿನ ಸುಮಾರು 20-25 ಲಕ್ಷ ನಾಗರಿಕರು ಇನ್ನು ಕೇವಲ 5-10 ವರ್ಷಗಳಲ್ಲಿ ಸುರಕ್ಷಿತ ನೀರು ಕುಡಿಯುವ ಬದಲು ಕೊಚ್ಚೆ ನೀರನ್ನು ಕುಡಿಯಬೇಕಾದ ಅನಿವಾರ್ಯತೆ ಉದ್ಭವಿಸಿ, ಕಂಡರಿಯದ ಸಾಂಕ್ರಾಮಿಕ ಕಾಯಿಲೆಗಳಿಂದ ಪೀಡಿತರಾಗಿ ಕುಡಿಯಲು ನೀರಿಲ್ಲದೆ ಬೆಂಗಾಡಾಗುವ ಈ ಪ್ರದೇಶದಲ್ಲಿ ಯಾತನೆ ಪಡಬೇಕಾಗುತ್ತದೆ. ಇಲ್ಲವೇ ತಾವು ಸಂಪಾದಿಸಿ ಗುಡ್ಡೆ ಹಾಕಿಕೊಂಡ ಆಸ್ತಿಪಾಸ್ತಿಯ ಹಂಗನ್ನು ತೊರೆದು ಪ್ರಾಣ ಉಳಿಸಿಕೊಳ್ಳಲು ಅಗತ್ಯವಾದ ಕುಡಿಯುವ ನೀರಿನ ಅನ್ವೇಷಣೆಯಲ್ಲಿ ಬೇರೆ ಪ್ರದೇಶಗಳಿಗೆ ಓಡಿ ಹೋಗಬೇಕಾಗುತ್ತದೆ.

ದಿನನಿತ್ಯದ ಜೀವನ್ಮರಣ ಸಮಸ್ಯೆಯಾಗಿ ಬೆಂಗಳೂರು ನಾಗರಿಕರನ್ನು ಕಾಡುತ್ತಿರುವ ಗಂಭೀರ ಸಮಸ್ಯೆಗಳಲ್ಲಿ ಕುಡಿಯುವ ನೀರಿನ ಅಭಾವ ಅಥವಾ ಬವಣೆ ಅತಿ ಪ್ರಮುಖವಾದುದು. ಮನುಕುಲ, ಪಶು, ಪಕ್ಷಿ ಸಂಕುಲದ ಅಳಿವು ಉಳಿವಿಗೆ ಪ್ರಥಮ ಆಧಾರ ಶುದ್ಧ ನೀರೆಂದರೆ ತಪ್ಪಾಗಲಾರದು.

ಬೆಂಗಳೂರು ನಗರದ ಕುಡಿಯುವ ನೀರಿನ

ಬವಣೆ ಪರಿಹರಿಸಲು ಬೆಂಗಳೂರು ನಿರ್ಮಾತೃ ಕೆಂಪೇಗೌಡರು ನಗರದ ಸುತ್ತಮುತ್ತ ಹತ್ತಾರು ಕೆರೆಕಟ್ಟೆಗಳನ್ನು ನಿರ್ಮಿಸಿ, ತನ್ನ ನಾಡಿನ ನಾಗರಿಕರಿಗೆ ಸ್ವಚ್ಛ ಹಾಗೂ ಸುರಕ್ಷಿತ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸಿದ್ದರು. ಕಾಲಾನುಕ್ರಮೇಣ ಈ ಕೆರೆಗಳ ನೀರು ಕುಡಿಯುವುದಿರಲಿ, ಮುಟ್ಟಲೂ ಅನರ್ಹವಾಗಿ, ಯಾವುದೇ ಉಪಯೋಗಕ್ಕೂ ಬಾರದೆಂಬ ಅರಿವುಂಟಾದ ಹಿನ್ನೆಲೆಯಲ್ಲಿ ಮೈಸೂರು ಸರಕಾರ ಬೆಂಗಳೂರು ನಾಗರಿಕರಿಗೆ ಪರ್ಯಾಯ ವ್ಯವಸ್ಥೆಯ ಮುಖೇನ ಕುಡಿಯುವ ನೀರು ಸರಬರಾಜು ಮಾಡುವ ನಿಟ್ಟಿನಲ್ಲಿ ಚಿಂತಿಸಿ, ಹೆಸರಘಟ್ಟ ಕೆರೆಯಿಂದ ಕುಡಿಯುವ ನೀರಿನ ವ್ಯವಸ್ಥೆ ರೂಪಿಸಿತು. ಸವಿಸ್ತಾರಗೊಂಡ ಬೆಂಗಳೂರಿನ ನಾಗರಿಕರ ಕುಡಿಯುವ ನೀರಿನ ದಾಹವನ್ನು ಘಾಸಿಪಟ್ಟು ನೀಗಿಸುತ್ತಿದ್ದ ಹೆಸರಘಟ್ಟ ಕೆರೆ 1922ರಲ್ಲಿ ಸಂಪೂರ್ಣವಾಗಿ ಬತ್ತಿಹೋಗಿ ಕುಡಿಯುವ ನೀರಿಗೆ ಆಹಾಕಾರವೆದ್ದಿತು. ಅಲ್ಲದೆ, ಬೃಹದಾಕಾರವಾಗಿ , ಬೆಳೆಯುತ್ತಿರುವ ಇಡೀ ಬೆಂಗಳೂರಿಗೆ ಹೆಸರಘಟ್ಟ ಕೆರೆ ಒಂದರಿಂದಲೇ ಕುಡಿಯುವ ನೀರು ಸರಬರಾಜು ವ್ಯವಸ್ಥೆ ರೂಪಿಸುವುದು ಅಸಾಧ್ಯವೆಂದು ಮನಗಂಡ ಸರಕಾರ ಹೊಸ ವ್ಯವಸ್ಥೆಯ ಬಗ್ಗೆ ಗಮನ ಹರಿಸಬೇಕಾದ ಅನಿವಾರ್ಯತೆ ಉಂಟಾಯಿತು.

ಈ ನಿಟ್ಟಿನಲ್ಲಿ ಕ್ರಿ.ಶ. 1925ರಲ್ಲಿ ಕಾರ್ಯೋನ್ಮುಖವಾದ ರಾಜ್ಯ ಸರಕಾರ ವಿಶ್ವೇಶ್ವರಯ್ಯನವರ ಮಾರ್ಗದರ್ಶನದಲ್ಲಿ ಕ್ರಿ.ಶ. 1927ರಲ್ಲಿ ಅನುಷ್ಠಾನಗೊಳಿಸಿದ ತಿಪ್ಪಗೊಂಡನ ಹಳ್ಳಿ ಜಲಾಶಯ ಕ್ರಿ.ಶ. 1933ರಲ್ಲಿ ಮುಕ್ತಾಯಗೊಂಡು ಮಾರ್ಚ್ 15, 1933ರಿಂದ ಬೆಂಗಳೂರು ಮಹಾ ನಗರದ ನಾಗರಿಕರಿಗೆ ಶುದ್ಧೀಕರಿಸಿದ, ಸುರಕ್ಷಿತ ಕುಡಿಯುವ ನೀರು ಸರಬರಾಜು ಮಾಡುತ್ತಾ ಬಂದಿದೆ.

ಸುಮಾರು 50 ಲಕ್ಷಕ್ಕೂ ಹೆಚ್ಚು ಜನಸಂಖ್ಯೆ ಹೊಂದಿರುವ ಬೆಂಗಳೂರು ನಗರಕ್ಕೆ ಪ್ರತಿನಿತ್ಯ ಕನಿಷ್ಠ 750 ಮಿಲಿಯನ್ ಲೀಟರ್ ನೀರಿನ ಅಗತ್ಯವಿದೆ ಎಂದು ತಿಳಿದು ಬರುತ್ತದೆ. ಈ ಮೂಲಗಳೊಂದಿಗೆ ಬೆಂಗಳೂರಿನಲ್ಲಿ 1.5 ಲಕ್ಷ ಬೋರ್‌ವೆಲ್‌ಗಳಿವೆ, ಇದರಲ್ಲಿ 6000 ಬೋರ್ ವೆಲ್‌ಗಳು ಜಲಮಂಡಳಿ ಉಸ್ತುವಾರಿಯಲ್ಲಿದ್ದು, ಬೆಂಗಳೂರಿಗೆ ಕುಡಿಯುವ ನೀರು ಸರಬರಾಜು ಮಾಡುವುದರೊಂದಿಗೆ, ಕಾರ್ಖಾನೆಗಳ ಬೇಡಿಕೆಗಳನ್ನು ಪೂರೈಸುತ್ತಿವೆ.

ಸುಮಾರು 15 ವರ್ಷಗಳ ಹಿಂದೆ ಅನಾವೃಷ್ಟಿಯಿಂದ ತಿಪ್ಪಗೊಂಡನಹಳ್ಳಿ ಜಲಾಶಯ ಬತ್ತಿ ಬೆಂಗಳೂರಿನ ನಾಗರಿಕರು ಕುಡಿಯುವ ನೀರಿಗೆ ಪರದಾಡಬೇಕಾದ ಪರಿಸ್ಥಿತಿ ಉದ್ಭವಿಸಿದಾಗ ರಾಜ್ಯ ಸರಕಾರ ಯೋಗಿಗಳಿಂದ ಮಳೆರಾಯನ ಬರುವಿಗಾಗಿ ತಿಪ್ಪಗೊಂಡನಹಳ್ಳಿ ಕೆರೆಯಲ್ಲಿ ವಿಶೇಷ ಪೂಜೆ ಏರ್ಪಡಿಸಿತ್ತು. ಮಳೆಗಾಲದಲ್ಲಿ ಕೊಳಚೆ ನೀರು ಒಡೆದ ಪೈಪುಗಳ ಮುಖೇನ ಜಲಮಂಡಳಿಯ ಕುಡಿಯುವ ನೀರಿನ ವ್ಯವಸ್ಥೆಗೆ ಸೇರಿ ಕೊಳ್ಳುವುದರಿಂದ ಹಾಗೂ ಒಳಚರಂಡಿ ಕೊಚ್ಚೆ ನೀರು ಹಾಗೂ ಕೊಳಚೆ ಪ್ರದೇಶಗಳ ಕಲುಷಿತ ಜಲಮಂಡಳಿ, ಕೆರೆಗಳು ಮತ್ತು ಸರಬರಾಜು ಮಾಡುವ ನೀರಿನೊಂದಿಗೆ ಸೇರಿಕೊಂಡು ಅನೇಕ ಜೀವಗಳನ್ನು ಬಲಿತೆಗೆದುಕೊಂಡು ವಾಂತಿ ಭೇದಿ, ಡಂಗೆ ಜ್ವರ ಹಾಗೂ ಇತರೇ ಗಂಭೀರ ರೋಗಗಳಿಗೆ ನಾಂದಿ ಹಾಡಿದ ಉದಾಹರಣೆಗಳಿವೆ.

ಆದರೆ ಬೆಂಗಳೂರು ನಗರಕ್ಕೆ ಕುಡಿಯುವ ನೀರು ಸರಬರಾಜು ಮಾಡುವಲ್ಲಿ ಪ್ರಥಮ ಸ್ಥಾನಗಳಿಸಿರುವ ಹಾಗೂ ಬೆಂಗಳೂರು ನಾಗರಿಕರಿಗೆ ಕುಡಿಯುವ ನೀರು ಸರಬರಾಜು ಮಾಡುವಲ್ಲಿ ಪ್ರಶ್ನಾತೀತ ಮೂಲವೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ತಿಪ್ಪಗೊಂಡನಹಳ್ಳಿ ಜಲಾಶಯದ ಜಲಾನಯನ ಪ್ರದೇಶದಲ್ಲಿ ದೆಹಲಿ ಮೂಲದ ಡಿಎಲ್‌ಎಫ್ ಸಂಸ್ಥೆಯ ವಸತಿ ಕಾಲೋನಿ ನಿರ್ಮಾಣಕ್ಕೆ ರಾಜ್ಯ ಸರಕಾರ ಹಾಗೂ ಸರಕಾರದ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ ನಗರ ಯೋಜನಾ ಇಲಾಖೆ, ವಿಶೇಷ ಜಿಲ್ಲಾಧಿಕಾರಿಗಳು ಒಪ್ಪಿಗೆ ನೀಡಿರುವುದು ಜನತೆಗೆ ಬಗೆದ ಮಹಾದ್ರೋಹ ಎನ್ನಬಹುದು. ಈ ಅನುಮತಿ ಬೆಂಗಳೂರಿನ ನಾಗರಿಕರ ಜಂಘಾ ಬಲವನ್ನೇ ಅಡಗಿಸಿದೆ.

ಸುಮಾರು 66 ವರ್ಷಗಳಿಂದ ಬೆಂಗಳೂರು ನಗರದ ನಾಗರಿಕರಿಗೆ ಸ್ವಚ್ಛ ಕುಡಿಯುವ ನೀರು ಸರಬರಾಜು ಮಾಡುತ್ತಿದ್ದ ತಿಪ್ಪಗೊಂಡನಹಳ್ಳಿ ಜಲಾಶಯ ಕ್ರಿ.ಶ. 1992-93ರಲ್ಲಿ, ಅದರಲ್ಲೂ ವಿಶೇಷವಾಗಿ 1997-98ರಲ್ಲಿ ಉಂಟಾದ ಅನಾವೃಷ್ಟಿಯಿಂದ ಜಲಾನಯನ ಪ್ರದೇಶದ ಒಳಹರಿವು ಕಡಿಮೆಯಾಗಿ, ಮಾರ್ಚ್ ಮತ್ತು ಮೇ 1998ರಲ್ಲಿ ಸಂಪೂರ್ಣವಾಗಿ ಬತ್ತಿ ಹೋದ ಪರಿಣಾಮವಾಗಿ ಬೆಂಗಳೂರಿನ ನಾಗರಿಕರು ಕುಡಿಯುವ ನೀರಿಗೆ ಪಟ್ಟ ಬವಣೆ ಅಷ್ಟಿಷ್ಟಲ್ಲ. ಕುಡಿಯುವ ನೀರಿಗಾಗಿ ರಾತ್ರಿಯೆಲ್ಲಾ ನಿದ್ದೆಗೆಟ್ಟು, ರಸ್ತೆಗಳಲ್ಲಿ ಕ್ಯೂನಿಂತು, ನೀರಿಗಾಗಿ ನಾಗರಿಕರು ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಜನಸಾಗರದ ಮನಸ್ಸನ್ನೇ ಕಲಕಿದ್ದು, ಮರೆಯಲಾಗದ ಕಹಿ ಅನುಭವ. ಅದರಲ್ಲೂ ವಿಶೇಷವಾಗಿ, ಹೊಸದಾಗಿ ನಗರ ಪಾಲಿಕೆಗೆ ಸೇರಿಕೊಂಡ ಹೊಸ ಬಡಾವಣೆಗಳ ನಾಗರಿಕರು ಕುಡಿಯುವ ನೀರಿಗಾಗಿ ಪಟ್ಟ ಪಾಡಂತೂ ಹೇಳತೀರದು. ಈ ವರ್ಷ ಬೆಂಗಳೂರಿನ ಸುಮಾರು 100 ಬ್ಲಾಕ್‌ಗಳಲ್ಲಿ ಅರ್ಧದಷ್ಟು ಬ್ಲಾಕ್‌ಗಳು ಕುಡಿಯುವ ನೀರಿನ ತೀವ್ರತರ ಅಭಾವಕ್ಕೆ ಒಳಗಾಗಿದ್ದು ಕಟುಸತ್ಯ.

> **ಕಾಲ**
> ನಲ್ಲೆ,
> ನೀನತ್ತರೆ
> ಮಳೆ
> ನೀನಪ್ಪಿದರೆ
> ಬೇಸಿಗೆ
> ನೀನಿರದಿರೆ
> ಚಳಿ
> -ವಿವೇಕಾನಂದ ಗೌಡ ಪಾಟೀಲ



ಮಹಾನಗರ ಪಾಲಿಕೆಯವರು ತಿಪ್ಪಗೊಂಡನಹಳ್ಳಿ ಜಲಾಶಯದ ಹತ್ತಿರ ಎಲ್ಲೆಂದರಲ್ಲಿ ಕಸಕಡ್ಡಿ ಸುರಿದಿರುವುದು

ಕೇವಲ 2-3 ತಿಂಗಳ ತಾತ್ಕಾಲಿಕ ಕುಡಿಯುವ ನೀರಿನ ಅಭಾವ ಹಾಗು ಅದರಿಂದ ಉದ್ಭವಿಸಿದ ಗಂಭೀರ ಸಮಸ್ಯೆಗಳು ಬೆಂಗಳೂರು ನಾಗರಿಕರಿಗೆ ತಿಪ್ಪಗೊಂಡನಹಳ್ಳಿ ಜಲಾಶಯ ಎಷ್ಟು ಅನಿವಾರ್ಯ ಎಂಬ ಸತ್ಯಾಂಶದ ಮನವರಿಕೆ ಮಾಡಿಕೊಟ್ಟಿವೆ.

ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದೀದುರ್ಗ ಬೆಟ್ಟಗಳ ತಪ್ಪಲಿನಲ್ಲಿ, ಸಮುದ್ರ ಮಟ್ಟದಿಂದ ಸುಮಾರು 1450 ಮಿ. ಎತ್ತರದಲ್ಲಿ ಹುಟ್ಟಿ, 161 ಕಿ.ಮಿ. ದೂರ ಹರಿದು ಕೊನೆಗೆ ಕಾವೇರಿ ನದಿ ಸೇರಿಕೊಳ್ಳುವ, ಒಂದು ಕಾಲದಲ್ಲಿ ಜೀವನದಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ ನದಿಯ ಹೆಸರು ಅರ್ಕಾವತಿ. ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕಿನ, ತಾವರೆಕೆರೆ ಹೋಬಳಿಯ ತಿಪ್ಪಗೊಂಡನಹಳ್ಳಿ ಗ್ರಾಮದ ಬಳಿ ಸರ್ ಎಂ.ವಿಶ್ವೇಶ್ವರಯ್ಯನವರ ಸಲಹೆಯಂತೆ ಈ ನದಿಗೆ ಜಲಾಶಯ ಒಂದನ್ನು (ಬೆಂಗಳೂರು ನಾಗರಿಕರಿಗೆ ಕುಡಿಯುವ ನೀರು ಸರಬರಾಜು ಮಾಡುವ ಏಕೈಕ ಧ್ಯೇಯದಿಂದ ಅಂದಿನ ಮಹಾರಾಜರಾದ ಕೃಷ್ಣರಾಜ ಒಡೆಯರ್‌ರವರ ಸಹಕಾರದೊಂದಿಗೆ) ನಿರ್ಮಿಸಲಾಯ್ತು. ಜಲಾಶಯಕ್ಕೆ ಚಾಮರಾಜಸಾಗರ ಎಂದು ಕರೆದಿದ್ದರೂ, ಇಂದಿಗೂ ಇದು ತಿಪ್ಪಗೊಂಡನಹಳ್ಳಿ ಜಲಾಶಯ ಎಂದೇ ಪ್ರಸಿದ್ಧವಾಗಿದೆ.

ಮಾರ್ಚ್ 14, 1998ರಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯದಲ್ಲಿ ನೀರಿನ ಸಂಗ್ರಹಣೆ ಕಡಿಮೆಯಾಗಿ ಕೇವಲ 15 ಅಡಿ ನೀರು ಸಂಗ್ರಹಣೆಯಾಗಿದ್ದು, ಇದರಲ್ಲಿ 8 ಅಡಿ ಡೆಡ್ ಸ್ಟೋರೇಜ್. ಉಳಿದಂತೆ, ಕೇವಲ 7 ಅಡಿ ನೀರು ಮಾತ್ರ ಸಾರ್ವಜನಿಕರ ಬಳಕೆಗೆ ಲಭ್ಯವಿದ್ದ ಕಾರಣ ಪ್ರತಿನಿತ್ಯ ಈ ಜಲಾಶಯದಿಂದ ಸಾಮಾನ್ಯವಾಗಿ 30-40 ದಶಲಕ್ಷ ಲೀಟರ್ ನೀರು ಸರಬರಾಜು ಆಗಬೇಕಾಗಿದ್ದರೂ ಸರಬರಾಜಾದುದು 10 ದಶಲಕ್ಷ ಲೀಟರ್‌ಗಳು ಮಾತ್ರ. ಇದರಿಂದ ಬೆಂಗಳೂರು ನಾಗರಿಕರ ಕುಡಿಯುವ ನೀರಿನ ಸಮಸ್ಯೆ ಗಂಭೀರ ಸ್ವರೂಪ ತಳೆದು ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಜಲಮಂಡಳಿ ಅಧಿಕಾರಿಗಳು ಹಾಗೂ ನೌಕರ ವರ್ಗದ ನಿದ್ದೆ ಕೆಡಿಸಿತ್ತು ಎಂಬುದಂತೂ ಸತ್ಯ.

ತಿಪ್ಪಗೊಂಡನಹಳ್ಳಿ ಜಲಾಶಯದ ಜಲ ಸಂಗ್ರಹಣೆ ಮಾರ್ಚ್, ಏಪ್ರಿಲ್ ಮತ್ತು ಮೇ 1998ರಲ್ಲಿ ಅತ್ಯಂತ ಕಡಿಮೆಯಾದ್ದರಿಂದ ಈ ಜಲಾಶಯದಿಂದ ಕುಡಿಯುವ ನೀರು ಸರಬರಾಜಾಗುತ್ತಿರುವ ಬೆಂಗಳೂರಿನ ಪಶ್ಚಿಮ ಮತ್ತು ಉತ್ತರ ವಲಯಗಳ ಬಡಾವಣೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಉಲ್ಬಣಗೊಂಡು ಜನ ಜೀವನ ಅಸ್ತವ್ಯಸ್ತವಾಗಿತ್ತು. ಜಲಮಂಡಳಿ ಸಮಸ್ಯೆ ಸುಧಾರಿಸಲು ಸುಮಾರು 23 ಟ್ಯಾಂಕರ್‌ಗಳ ಮುಖೇನ ಈ ಬಡಾವಣೆಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಿತ್ತು. ಈ ವರ್ಷ ಎಲ್ಲಾ ಪ್ರದೇಶಗಳಲ್ಲಿ ನೀರಿನ ಅಭಾವವಿದ್ದರೂ, ತಿಪ್ಪಗೊಂಡನಹಳ್ಳಿ ಜಲಾಶಯವನ್ನು ಸಂಪೂರ್ಣವಾಗಿ ಅವಲಂಬಿಸಿಕೊಂಡಿರುವ ಬಡಾವಣೆಗಳ ಜನರ ಗೋಳಂತೂ ಹೇಳತೀರದು.

ಈ ಮೂಲವನ್ನು ಕಳೆದುಕೊಂಡರೆ ಅಥವಾ ಸ್ವಾರ್ಥಿಗಳ ನೀಚತನದಿಂದ ಈ ಮೂಲದಿಂದ ಬೆಂಗಳೂರಿಗೆ ಸರಬರಾಜು ಆಗುತ್ತಿರುವ ನೀರು ಕಲುಷಿತಗೊಂಡರೆ ಬೆಂಗಳೂರು ನಗರದ ಶೇ.50 ರಷ್ಟು ನಾಗರಿಕರು ಕುಡಿಯುವ ನೀರಿಗೂ ಗತಿ ಇಲ್ಲದೆ, ಇಲ್ಲವೇ ವಿಷಪೂರಿತ ಮಾಲಿನ್ಯಭರಿತ ನೀರು ಕುಡಿದು ಸಾಯಬೇಕಾಗುತ್ತದೆ ಎಂಬುದಂತೂ ವಾಸ್ತವಾಂಶ.

ಈ ಹಿನ್ನೆಲೆಯಲ್ಲಿ ಈಗ ನಿರ್ಮಿಸಲು ಉದ್ದೇಶಿಸಿರುವ ವಸತಿ ಕಾಲೋನಿ ಬೆಂಗಳೂರಿನಲ್ಲಿ ಒಂದು ಭೀಕರ ದುರಂತವನ್ನೇ ಸೃಷ್ಟಿಸುತ್ತದೆ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ಇದರ ಅನುಷ್ಠಾನ ಬೆಂಗಳೂರಿನ ನಾಗರಿಕರಿಗೆ ಕೊಳಚೆ ನೀರುಣಿಸಿ, ಅವರ ಬಾಳಲ್ಲಿ ನರಕ ಯಾತನೆ ಸೃಷ್ಟಿಸಲಿದೆ. ಕೊಚ್ಚೆ ನೀರು ಕುಡಿಯ ಬಯಸದ ತಿಪ್ಪಗೊಂಡನಹಳ್ಳಿ ಜಲಾಶಯ ಆಶ್ರಿತ ಬೆಂಗಳೂರು ನಾಗರಿಕರು ಬೆಂಗಳೂರು ನಗರವನ್ನೇ ಖಾಲಿ ಮಾಡಿ, ಬೇರೆ ಭಾಗಗಳಿಗೆ ದಂಡು ದಂಡಾಗಿ ವಲಸೆ ಹೋಗಬೇಕಾದ ಪರಿಸ್ಥಿತಿ ಉದ್ಭವ ಆಗುವುದರಲ್ಲಿ ಅನುಮಾನವೇ ಇಲ್ಲ.

ದೆಹಲಿ ಮೂಲದ ಸುಮಾರು 42 ಜನ ಸೇನಾ ಅಧಿಕಾರಿಗಳು ತಿಪ್ಪಗೊಂಡನಹಳ್ಳಿ ಜಲಾಶಯದ ಜಲಾನಯನ ಪ್ರದೇಶದಲ್ಲಿ ತಾವರೆಕೆರೆಗೆ ಸೇರಿದ ಅರ್ಕಾವತಿ ಕಣಿವೆಯ 414.2 ಎಕರೆ ಕೃಷಿ ಭೂಮಿಯನ್ನು 1972-75ರ ಮಧ್ಯೆ ಅರ್ಕಾವತಿ ಕಣಿವೆ ಪ್ರಗತಿಪರ ರೈತರ ಸಹಕಾರಿ ಸಂಘ ನಿಯಮಿತ ಎಂಬ ಸಂಸ್ಥೆ ಒಂದನ್ನು ಸ್ಥಾಪಿಸಿಕೊಂಡಿದ್ದಾರೆ.

ಈ ಜಮೀನಿನ ಸುಮಾರು 213.6 ಎಕರೆ ಪ್ರದೇಶದಲ್ಲಿ 335 ನಿವೇಶನಗಳನ್ನು ಅರ್ಕಾವತಿ ನದಿಯ ಎಡಭಾಗದಲ್ಲೂ ಹಾಗೂ ಉಳಿದ 200.6 ಎಕರೆ ಜಮೀನಿನಲ್ಲಿ 386 ನಿವೇಶಗಳನ್ನು ಅರ್ಕಾವತಿ ನದಿಯ ಉತ್ತರ ಭಾಗದಲ್ಲೂ, ಅಂದರೆ ಒಟ್ಟು 414.2 ಎಕರೆ ಕೃಷಿ ಭೂಮಿಯಲ್ಲಿ 721 ನಿವೇಶನಗಳನ್ನು ನಿರ್ಮಿಸಿಕೊಂಡು ಸುಮಾರು 20,000 ಜನಸಂಖ್ಯೆಯ ವಾಸಕ್ಕೆ ಅನುಕೂಲ ಕಲ್ಪಿಸುವ ವಸತಿ ಯೋಜನೆ ಒಂದನ್ನು ರೂಪಿಸಿಕೊಳ್ಳುವುದಕ್ಕೆ ಅವಕಾಶ ಕಲ್ಪಿಸಿ ಕೊಡುವಂತೆ ಸರಕಾರಕ್ಕೆ ಮನವಿ ಮಾಡಿಕೊಂಡಿರುತ್ತಾರೆ.

ಡಿಎಲ್‌ಎಫ್ ಸಂಸ್ಥೆಯ ಮೇಲಿನ ಪರಿಷ್ಕೃತ ಯೋಜನಾ ಪ್ರಸ್ತಾವನೆಗೆ ರಾಜ್ಯ ಪರಿಸರ ನಿಯಂತ್ರಣ ಮಂಡಳಿ ಮೇ 13, 1991 ರಂದು ಒಪ್ಪಿಗೆ ನೀಡಿತ್ತು.

ವಸತಿ ಕಾಲೋನಿ ಅನುಷ್ಠಾನಗೊಂಡರೆ, ವಸತಿ ಕಾಲೋನಿ ಮಾಲೀಕರ ಅಗತ್ಯಗಳಿಗೆ



ಈ ಬೋನಿನಲ್ಲಿ ದೇಶದ ಸಂಪತ್ತು ಲೂಟಿ ಮಾಡುವ ದೊಡ್ಡ ಹೆಗ್ಗಣಗಳನ್ನೂ ಹಿಡಿಯಬಹುದೆ?

ಬೇಕಾದ ಕೂಲಿ ಆಳುಗಳು, ವಸತಿ ಕಾಲೋನಿ ನಿರ್ಮಾಣದಲ್ಲಿ ಬಳಸುವ ಮೂಲ ವಸ್ತುಗಳ ಪಳೆಯುಳಿಕೆಗಳು, ಮೂಲ ಸಾಮಗ್ರಿಗಳ ಪೂರೈಕೆಯ ಕ್ರಿಯೆಗಳಿಂದ ಹೊರದೂಡುವ ಧೂಳಿನಿಂದ ಉಂಟಾಗುವ ಪರಿಸರ ಮಾಲಿನ್ಯ, ಶ್ರೀಮಂತರ ಜೀವನ ಶೈಲಿಯ ಅಗತ್ಯ ಪೂರೈಸುವಲ್ಲಿ ಸಾಕುವ ಜೀವರಾಶಿಗಳಿಂದ ಆಗುವ ಪರಿಸರ ಮಾಲಿನ್ಯ ಈಗ ನಿರೀಕ್ಷಿಸಿರುವುದಕ್ಕಿಂತ 10 ಪಟ್ಟು ಹೆಚ್ಚಾಗಲಿದೆ.

ಮಳೆಗಾಲದಲ್ಲಿ ಮಳೆ ನೀರಿನೊಡನೆ ಈ ವ್ಯವಸ್ಥೆ ಸೃಷ್ಟಿಸುವ ಕಲ್ಮಶ ಮತ್ತು ಕಲುಷಿತಗೊಂಡ ವಸ್ತುಗಳು, ಒಳಚರಂಡಿ ನೀರು ಕೆರೆಗೆ ಹರಿದು ಬಂದು ಕೆರೆಯಲ್ಲಿ ಸೇರಿಕೊಂಡು ಇಡೀ ಕೆರೆ ನೀರು ಕೊಳೆತು, ಕುಡಿಯಲು ಅನರ್ಹವಾಗುವುದೇ ಅಲ್ಲದೆ, ದುರ್ವಾಸನೆಯಿಂದ ಇಡೀ ಜಲಾಶಯದ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶ ಮಾದರಿ ಜನವಸತಿಗೆ ಉಪಯುಕ್ತವಿಲ್ಲದಂತಾಗುತ್ತದೆ.

ಇದಲ್ಲದೆ, ಈ ಪ್ರದೇಶದಲ್ಲಿ ಪ್ರಾರಂಭವಾಗುವ ನಿರ್ಮಾಣ ಕಾರ್ಯಗಳಿಂದ ತಿಪ್ಪಗೊಂಡನಹಳ್ಳಿ ಜಲಾಶಯಕ್ಕೆ ಜಲಾನಯನ ಪ್ರದೇಶದಿಂದ ನೀರು ಸರಬರಾಜು ಮಾಡುತ್ತಿದ್ದ ಹಳ್ಳಕೊಳ್ಳಗಳು ಹಾಗೂ ನೀರು ಕಾಲುವೆಗಳು ಮುಚ್ಚಿಹೋಗಿ, ಕೆರೆಗೆ ಜಲಾನಯನ ಪ್ರದೇಶದಿಂದ ಮಳೆ ನೀರು ಹರಿದು ಬರುವ ಮೂಲಗಳಿಗೂ ಕೆರೆಗೂ ಸಂಬಂಧ ಕಡಿದು ಹೋಗಿ, ಮಳೆ ನೀರು ಅಲ್ಲಲ್ಲೇ ಹಿಂಗಿಕೊಳ್ಳುವುದರಿಂದ ಕೆರೆಗೆ ಹರಿದು ಬರುವ ನೀರಿನ ಪ್ರಮಾಣ ಗಣನೀಯವಾಗಿ ಕುಸಿಯುತ್ತದೆ.

ಕೆರೆ ಉಳಿದರೂ ಇದರಲ್ಲಿನ ನೀರು ಮಲಿನಗೊಂಡು ಇದನ್ನು ಕುಡಿಯುವ ನಾಗರಿಕರು ಊಹೆಗೂ ನಿಲುಕದ ಅನೇಕ ಸಾಂಕ್ರಾಮಿಕ ಕಾಯಿಲೆಗಳಿಗೆ ತುತ್ತಾಗಿ ತಮ್ಮ ಜೀವ ತೆರಬೇಕಾಗುತ್ತದೆ.

ಬೆಂಗಳೂರಿನಲ್ಲಿ ಕುಡಿಯುವ ನೀರಿನ ಪೈಪಿನ ಪಕ್ಕದಲ್ಲೇ ಒಳಚರಂಡಿ ನೀರು ಹಾದು ಹೋಗುವ ಪೈಪುಗಳನ್ನು ಅಳವಡಿಸಲಾಗಿದ್ದು, ಇತ್ತೀಚೆಗೆ ಹಲವಾರು ಬಾರಿ ಈ ಪೈಪು ಒಡೆದು ಕುಡಿಯುವ ನೀರಿನೊಂದಿಗೆ ಸೇರ್ಪಡೆಯಾಗುತ್ತಿರುವುದರಿಂದ ಕಾಲರಾ ಮತ್ತು ಕರುಳುಬೇನೆ ರೋಗಗಳು ಉಲ್ಬಣಗೊಳ್ಳುತ್ತಿವೆ ಎಂದು ತಿಳಿದು ಬಂದಿದೆ. ಇದಕ್ಕಿಂತ 10 ಪಟ್ಟು ಗಂಭೀರ ಪರಿಸ್ಥಿತಿ ತಿಪ್ಪಗೊಂಡನಹಳ್ಳಿ ಜಲಾಶಯದ ಜಲಾನಯನ ಪ್ರದೇಶದಲ್ಲಿ ಡಿಎಲ್‌ಎಫ್ ಸಂಸ್ಥೆ ತನ್ನ ವಸತಿ ಕಾಲೋನಿ ಅನುಷ್ಠಾನಗೊಳಿಸಿದ ನಂತರ ಉದ್ಭವಿಸಲಿದೆ.




ತಿಪ್ಪಗೊಂಡನಹಳ್ಳಿ ಜಲಾಶಯದಲ್ಲಿ ಸಂಗ್ರಹವಾಗುವ ಕಲುಷಿತ ನೀರು ಬೆಂಗಳೂರು ನಾಗರಿಕರನ್ನು ಬಾಧಿಸುವುದರ ಜೊತೆಗೆ, ಜಲಾಶಯದ ಸುತ್ತಮುತ್ತಲಿನ ಗ್ರಾಮಗಳ ಬೋರ್‌ವೆಲ್ ಅಥವಾ ಕುಡಿಯುವ ನೀರಿನ ತೆರೆದ ಬಾವಿಗಳ ನೀರಿನ ಸೆಲೆಯನ್ನು ಕಲುಷಿತಗೊಳಿಸಿ, ಈ ಜಲಾಶಯದ ಸುತ್ತಮುತ್ತಲಿನ ಸುಮಾರು 20-30 ಕಿ.ಮಿ ದೂರದ ಲಕ್ಷಾಂತರ ಗ್ರಾಮೀಣ ನಾಗರಿಕರನ್ನು ಪೀಡಿಸಿ, ಅವರನ್ನು ಬಲಿ ತೆಗೆದುಕೊಳ್ಳುವ ಸಾಧ್ಯತೆಗಳೇ ಹೆಚ್ಚು.

ಅಂತರ್ಜಲ ಮಟ್ಟ 300 ಅಡಿಗಳಿಗೂ ಹೆಚ್ಚು ಕುಸಿದಿರುವುದು ಒಂದು ಕಡೆಯಾದರೆ, ಮತ್ತೊಂದು ಕಡೆ ಮೇಲ್ಮೈ ನೀರು ಮತ್ತು ಅಂತರ್ಜಲ ಎರಡೂ ಮಲಿನವಾಗಿರುವುದರಿಂದ ಮುಂದಿನ 5 ವರ್ಷಗಳಲ್ಲಿ ಬೆಂಗಳೂರಿನ ನಾಗರಿಕರ ಕುಡಿಯುವ ನೀರಿನ ಸಮಸ್ಯೆ ಗಂಭೀರ ರೂಪ ತಾಳಲಿದೆ ಎಂಬುದು ತಜ್ಞರ ಅಭಿಪ್ರಾಯ.

ಮೇಲಿನ ಎಲ್ಲಾ ಸಮಸ್ಯೆಗಳು ಹಾಗೂ ಅದಕ್ಕೂ ಗಂಭೀರವಾದ ಸಮಸ್ಯೆಗಳು ತಿಪ್ಪಗೊಂಡನಹಳ್ಳಿ ಜಲಾಶಯದ ಮೇಲ್ಭಾಗದಲ್ಲಿ ಡಿಎಲ್‌ಎಫ್ ವಸತಿ ಸಂಸ್ಥೆ ತನ್ನ ಯೋಜನೆ ಅನುಷ್ಠಾನಗೊಳಿಸಿದ ನಂತರ ಉದ್ಭವಿಸಲಿದ್ದು, ತಿಪ್ಪಗೊಂಡನಹಳ್ಳಿ ಕೆರೆಯ ನೀರು ಕಲುಷಿತ ಗೊಳ್ಳುವುದೇ ಅಲ್ಲದೆ, ಅಂತರ್ಜಲವನ್ನೂ ಕಲುಷಿತಗೊಳಿಸುವುದರಿಂದ ಬೆಂಗಳೂರಿನ ನಾಗರಿಕರೊಂದಿಗೆ, ಜಲಾಶಯದ ಸುತ್ತ ಮುತ್ತಲಿನ ಸುಮಾರು 20-30 ಕಿ.ಮಿ. ದೂರದ ಗ್ರಾಮೀಣ ಜನಸಮುದಾಯ, ಕೃಷಿ ಬೆಳೆಗಳು, ಜಾನುವಾರು ಹಾಗೂ ಪಶುಪಕ್ಷಿ ಸಂಕುಲ ನೀರಿನಿಂದ ಉದ್ಭವಿಸುವ ಮಾರಕ ರೋಗಗಳು ಹಾಗೂ ಭೀಕರ ಸಂಕಷ್ಟಗಳಿಗೆ ತುತ್ತಾಗ ಬೇಕಾಗುತ್ತದೆ ಎಂಬುದರಲ್ಲಿ ಅನುಮಾನವೇ ಇಲ್ಲ.

ತಿಪ್ಪಗೊಂಡನಹಳ್ಳಿ ಕೆರೆಗೂ ಮತ್ತು ಬೆಂಗಳೂರಿನ ನಾಗರಿಕರಿಗೂ ತಾಯಿ ಮಕ್ಕಳ ಸಂಬಂಧವೆನ್ನಬಹುದು. ತಿಪ್ಪಗೊಂಡನಹಳ್ಳಿ ಕೆರೆಯ ನೀರು ಬೆಂಗಳೂರಿನ ನಾಗರಿಕರಿಗೆ ತಾಯಿಯ ಎದೆ ಹಾಲಿನಷ್ಟೇ ಪವಿತ್ರ. ತಾಯಿಯ ಎದೆ ಬತ್ತಿದರೆ ಮಗುವಿಗೆ ಜೀವವಿಲ್ಲದಂತೆ, ತಿಪ್ಪಗೊಂಡನಹಳ್ಳಿ ಕೆರೆ ಬತ್ತಿ ನೀರಿಲ್ಲದೆ ಬರಿ ದಾದರೆ ಬೆಂಗಳೂರು ನಾಗರಿಕರಿಗೆ ಜೀವವಿಲ್ಲ.

ಈ ಕೆರೆಯ ನೀರಿನ ಸವಿಯುಂಡು, ಅದರ ಆಸರೆಯಲ್ಲಿ ತಮ್ಮ ದಾಹ ಹಾಗೂ ದಣಿವು ನೀಗಿಸಿಕೊಂಡ ಬೆಂಗಳೂರಿನ ನಾಗರಿಕರ ಸಮುದಾಯ ತಿಪ್ಪಗೊಂಡನಹಳ್ಳಿ ಕೆರೆಯ ಅಸ್ತಿತ್ವಕ್ಕೆ ಕಂಟಕ ಉಂಟಾಗಿದ್ದರೂ, ಎದೆ ಹಾಲು ಕುಡಿಸಿದ ತಾಯಿಯ ಮೇಲೆ ಅತ್ಯಾಚಾರ ನಡೆಯುತ್ತಿದ್ದರೂ ಅದು ತನಗೆ ಸಂಬಂಧಿಸಿದ್ದಲ್ಲವೆಂಬಂತೆ ತಟಸ್ಥರಾಗಿರುವುದು ಅನ್ಯಾಯವನ್ನು ಪ್ರತಿ ಭಟಿಸುವ ಗೋಜಿಗೆ ಹೋಗದೆ, ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸದೆ ನಿದ್ರಾವಸ್ಥೆಯಲ್ಲಿ ಮುಳುಗಿರುವುದು ಅವರ ವಿನಾಶದ ಮುನ್ಸೂಚನೆ ಎನ್ನಬಹುದು.

ಹಣವಿದ್ದರೆ ಎಲ್ಲವನ್ನೂ ಕೊಳ್ಳಬಹುದೆಂಬ ಹಮ್ಮಿನಲ್ಲಿರುವ ಕೆಲವೇ ಮಂದಿಯಿಂದ ಇಡೀ ಸಮಾಜ ಸರ್ವನಾಶ ಆಗಬೇಕೆ? ಬಡ ಹಾಗೂ ಮಧ್ಯಮ ವರ್ಗದ ನಾಗರಿಕರು ಮತ್ತು ತಮ್ಮ ಬಾಳಿಗೆ ಕಂಟಕದ ಮುನ್ಸೂಚನೆ ಪಡೆದಿರುವ ತಿಪ್ಪಗೊಂಡನಹಳ್ಳಿ ಜಲಾಶಯದ ಸುತ್ತಮುತ್ತಲಿನ ಗ್ರಾಮೀಣ ಜನತೆ ಗಂಭೀರವಾಗಿ ಚಿಂತಿಸಬೇಕಾದ ಶಾಶ್ವತ ಸಮಸ್ಯೆ ಇದು.

■

# 'ಬರಹ' - ಗಣಕ ಲೋಕದಲ್ಲಿ ಕನ್ನಡದ ಹೆಜ್ಜೆ

**ನೋ**ಡು ನೋಡುತ್ತಿದ್ದಂತೆಯೇ ಗಣಕ ಯಂತ್ರ ಭಾರತದ ಉದ್ದಗಲಕ್ಕೂ ಹಬ್ಬುತ್ತಿರುವುದನ್ನು ಗಮನಿಸಿದಾಗ ಅಚ್ಚರಿ ಉಂಟಾಗುತ್ತದೆ. ಹಿಂದೆ ಕೆಲವು ವರ್ಷಗಳ ಕೆಳಗೆ ನಿಮ್ಮ ಊರಿನಲ್ಲಿ ಮೊದಲ ಟಿ.ವಿ. ಬಂದಾಗ ಬಿಟ್ಟ ಕಣ್ಣು ಬಿಟ್ಟು, ಗುಂಪಿನಲ್ಲಿ ತಲೆ ತೂರಿಸಿ ನೋಡಿದಾಗ ಇನ್ನು ಕೆಲವೇ ದಿನಗಳಲ್ಲಿ ಅದು ನಿಮ್ಮ ಮನೆಯಲ್ಲೂ ಇರಬಹುದೆಂದು ಅನ್ನಿಸಿರಲಿಲ್ಲ ಅಲ್ಲವೆ? ಬಹುಶಃ ಗಣಕಯಂತ್ರ ಕೂಡಾ ಅದೇ ರೀತಿ ಮನೆ ಮನೆಯಲ್ಲಿ ತನ್ನ ಸ್ಥಾನವನ್ನು ಗಟ್ಟಿ ಮಾಡಿಕೊಳ್ಳುವ ದಿನ ದೂರವಿಲ್ಲ. ಇಂದಿನ ವೇಗದ ಬದುಕಿಗೆ ಗಣಕಯಂತ್ರ ಅತ್ಯಾವಶ್ಯಕವಾಗುತ್ತಿದೆ. ಜಗತ್ತೇ ಗಣಕ ಯಂತ್ರದ ಬಳಕೆಯತ್ತ ಸಾಗುತ್ತಿರುವಾಗ ಭಾರತ 'ನಾನು ಮಾತ್ರ ಬೇರೆ' ಎಂದು ಸುಮ್ಮನೆ ಕುಳಿತುಕೊಳ್ಳಲಾಗುವುದಿಲ್ಲ. ಜಗತ್ತಿನೊಡನೆ ವ್ಯವಹಾರ ಮಾಡಲು ಅದರ ಜೊತೆ ಹೆಜ್ಜೆ ಹಾಕಬೇಕಾಗುತ್ತದೆ.

ಗಣಕಯಂತ್ರವನ್ನು ಬಳಸಿಕೊಳ್ಳಲು ಮುಖ್ಯವಾಗಿ ಜಗತ್ತಿನಲ್ಲಿ ಇಂಗ್ಲಿಷ್ ಭಾಷೆಯನ್ನು ಉಪಯೋಗಿಸಿಕೊಳ್ಳಲಾಗುತ್ತಿದೆ. ಆದರೆ ನಮ್ಮ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೆ, ದಿನ ನಿತ್ಯದ ವ್ಯವಹಾರಗಳೆಲ್ಲಾ ಮಾತೃಭಾಷೆಯಾದ ಕನ್ನಡದಲ್ಲೇ ಮಾಡಬೇಕೆಂದು ನಾವು ಆಶಿಸುತ್ತಿದ್ದೇವೆ.

ಯಾವುದೇ ವ್ಯವಹಾರವಾಗಲಿ, ಅದನ್ನು ಮಾತೃಭಾಷೆಯಲ್ಲಿ ಮಾಡಿದರೆ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ ಎಂಬುದು ಸತ್ಯ.

ಹೀಗಿರುವಾಗ ನಾವು ಗಣಕ ಯಂತ್ರವನ್ನು ಬಳಸಿಕೊಳ್ಳಲು ಹೊಸ ಹೊಸ ಲಘುವರ (software)ಗಳನ್ನು ರಚಿಸಿಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಇತ್ತೀಚೆಗೆ ಅಮೇರಿಕದಲ್ಲಿರುವ ಕನ್ನಡಿಗ ಶೇಷಾದ್ರಿವಾಸುರವರು ರಚಿಸಿರುವ ಕನ್ನಡದ ಲಘುವರ 'ಬರಹ' ಒಂದು ದಿಟ್ಟ ಹೆಜ್ಜೆ. ಈ 'ಬರಹ' ಲಘುವರ ಉಪಯೋಗ, ಬಳಕೆ ಮತ್ತು ಮೂಲ ಅವಶ್ಯಕತೆಗಳನ್ನು ತಿಳಿಸುವುದೇ ಈ ಲೇಖನದ ಉದ್ದೇಶವಾಗಿದೆ.

## 'ಬರಹ' - ಏನಿದರ ವಿಶೇಷ?

ಇದೊಂದು ಕನ್ನಡಿಗನೊಬ್ಬ ಕನ್ನಡಿಗರೆಲ್ಲರೂ ಸರಳವಾಗಿ ಗಣಕದಲ್ಲಿ ಕನ್ನಡದಲ್ಲಿ ದಾಖಲೆಗಳನ್ನು (documents) ತಯಾರಿಸಿಕೊಳ್ಳಲು, ಅಂತರ್ ಜಾಲದಲ್ಲಿ (internet) ಲೇಖನಗಳನ್ನು ಪ್ರಕಟಿಸಲು, ಎಲೆಕ್ಟ್ರಾನಿಕ್ ಅಂಚೆಯನ್ನು ಕನ್ನಡದಲ್ಲಿ ಕಳುಹಿಸುವ ಸಲುವಾಗಿ ರಚಿಸಿದ ಸುಂದರ ಲಘುವರ. ಕನ್ನಡದ ಮುದ್ದು ಅಕ್ಷರಗಳು ಗಣಕಯಂತ್ರದ ತೆರೆಯ ಮೇಲೆ ಮೂಡಿಸಲು ಮಾಡಿದ ಪ್ರಶಂಸನೀಯ ಕೆಲಸ. ಕನ್ನಡ ಸಾಹಿತಿಗಳಿಗೆ, ಪತ್ರಕರ್ತರಿಗೆ, ಸರಕಾರಿ ಕಛೇರಿಗಳಿಗೆ, ಶಾಲಾ-ಕಾಲೇಜುಗಳಿಗೆ, ಕನ್ನಡಿಗರ ಮನೆ-ಮನೆಗೆ ನೀಡಿದ ಅಪೂರ್ವ ಕೊಡುಗೆ.




■ ವಸುಧೇಂದ್ರ,
ನಂ. 15, 5ನೇ ಕ್ರಾಸ್, 1ನೇ ಮೇನ್
ಬಿಟಿಎಂ 2ನೇ ಹಂತ, ಮೈಕೋ ಲೇಔಟ್
ಬೆಂಗಳೂರು-560 076

## ಇದು ಹೇಗೆ ಕೆಲಸ ಮಾಡುತ್ತದೆ?

ಇಂಗ್ಲಿಷ್ ಕೀಲು-ಮಣೆಯನ್ನು ಉಪಯೋಗಿಸಿಕೊಂಡು, ಕನ್ನಡದ ಶಬ್ದಗಳನ್ನು ಇಂಗ್ಲಿಷಿನಲ್ಲಿಯೇ ಬರೆದು ಅನಂತರ ಕನ್ನಡದ ಅಕ್ಷರಗಳಾಗಿ ಅದನ್ನು ಲಿಪ್ಯಂತರಗೊಳಿಸುವ ಪದ್ಧತಿಯನ್ನು ಬರಹ ಉಪಯೋಗಿಸಿಕೊಂಡಿದೆ. ಇದರ ಕಾರ್ಯ ವಿಧಾನವನ್ನು ಮೇಲೆ ಕೊಟ್ಟಿರುವ ಚಿತ್ರದೊಡನೆ ಇನ್ನಷ್ಟು ಹೆಚ್ಚು ವಿವರವಾಗಿ ಅರ್ಥ ಮಾಡಿಕೊಳ್ಳಬಹುದು.

ಮುಖ್ಯವಾಗಿ ಇದು ಮೂರು ಕಿಟಕಿ(ವಿಂಡೋಸ್)ಗಳನ್ನು ಹೊಂದಿದೆ. ಮೇಲಿನ ಎರಡು ಕಿಟಕಿಗಳಲ್ಲಿ ಕನ್ನಡದ ಅಕ್ಷರಗಳು ಮೂಡಿದರೆ, ಕೆಳಗಿನ ಕಿಟಕಿಯಲ್ಲಿ ಕನ್ನಡದ ಶಬ್ದಗಳು ಇಂಗ್ಲಿಷ್ ಭಾಷೆಯಲ್ಲಿರುತ್ತವೆ. (ಈ ರೀತಿಯಾಗಿ ಕನ್ನಡವನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆಯುವುದನ್ನು 'ಕಾಂಗ್ಲಿಷ್' ಎನ್ನಬಹುದು) ನಾವು ಬರೆಯ ಬೇಕೆಂದಿರುವ ವಾಕ್ಯಗಳನ್ನು ಕೆಳಗಿನ ಕಿಟಕಿಯಲ್ಲಿ ಇಂಗ್ಲಿಷ್‌ನಲ್ಲಿಯೇ ಟೈಪ್ ಮಾಡಬೇಕು. ಉದಾಹರಣೆಗೆ 'ನಮ್ಮ ಭಾಷೆ ಕನ್ನಡ' ಎಂದು ಬರೆಯಬೇಕಾದರೆ, ಅದನ್ನು ಇಂಗ್ಲಿಷ್‌ನಲ್ಲಿ "namma bashe kannada'ಎಂದು ಬರೆಯಬೇಕು. ಹೀಗೆ ಬರೆಯುವಾಗ ಆ ಸಾಲು ಮಧ್ಯದ ಕಿಟಕಿಯಲ್ಲಿ ಅದು ಕನ್ನಡದಲ್ಲಿ ಹೇಗೆ ಲಿಪ್ಯಂತರ ಹೊಂದಬಹುದೆಂದು ನೋಡಬಹುದಾಗಿದೆ. ಅನಂತರ ಇದನ್ನು ಲಿಪ್ಯಂತರಿಸು ಎಂಬ ಆಜ್ಞೆಯನ್ನು ನೀಡಿ ನಾವು ಬರೆದದ್ದೆಲ್ಲವನ್ನೂ ಕನ್ನಡದಲ್ಲಿ ಮೊದಲ ಕಿಟಕಿಯಲ್ಲಿ ಮೂಡಿಸಬಹುದು. ಇಂಗ್ಲಿಷಿನ ಸಣ್ಣ ಮತ್ತು ದೊಡ್ಡ (capital and small letters) ಅಕ್ಷರಗಳನ್ನು ಉಪಯೋಗಿಸಿ, ಹ್ರಸ್ವ ಮತ್ತು ದೀರ್ಘವನ್ನು ಹಾಗೂ ಗುರು ಮತ್ತು ಲಘು ವ್ಯಂಜನಗಳನ್ನು ಮೂಡಿಸಬಹುದು. ಸಂಯುಕ್ತಾಕ್ಷರಗಳನ್ನೂ ಇದೇ ರೀತಿ ಬರೆಯಬಹುದು.

ಈ ಲಘುವರವನ್ನು ಹೇಗೆ ಉಪಯೋಗಿಸಬೇಕೆಂಬುದರ ಬಗೆಗೆ ಕನ್ನಡದಲ್ಲಿ ಸಹಾಯವಿದೆ. ಕನ್ನಡದ ಪ್ರತಿಯೊಂದು ಅಕ್ಷರವನ್ನು ಯಾವ ರೀತಿಯಲ್ಲಿ ಇಂಗ್ಲಿಷಿನಲ್ಲಿ ಬರೆಯಬೇಕೆಂಬುದರ ಸಂಪೂರ್ಣ ವಿವರಣೆ ಈ ಸಹಾಯದಲ್ಲಿದೆ. ಈ ಸಹಾಯವನ್ನು ಮುಖ್ಯ ಮೂರು ಕಿಟಕಿಗಳ ಪಕ್ಕದಲ್ಲಿರುವ ಕಿಟಕಿಯಲ್ಲಿ ನಮಗೆ ಬೇಕೆಂದರೆ ಉಳಿಸಿಕೊಂಡು ನೋಡಬಹುದು. ಜೊತೆಗೆ ಉಪಕರಣ ಪಟ್ಟಿಯೂ (tool bar) ಸಂಪೂರ್ಣವಾಗಿ ಕನ್ನಡದಲ್ಲಿರುವುದು ಈ ಲಘುವರದ ವಿಶೇಷ.

ಅಕ್ಷರದ ಗಾತ್ರಗಳನ್ನು ಹೆಚ್ಚು ಅಥವಾ

ಕಡಿಮೆಯಾಗಿ, ಸಾಲುಗಳ ಮಧ್ಯದಲ್ಲಿನ ಅಂತರವನ್ನು ಹೆಚ್ಚು ಅಥವಾ ಕಡಿಮೆ ಮಾಡುವುದು, ಅಕ್ಷರಗಳ ಬಣ್ಣಗಳನ್ನು ಬದಲಾಯಿಸುವುದು, ಹಿನ್ನೆಲೆಯ ಬಣ್ಣವನ್ನು ಬದಲಾಯಿಸುವುದು, ಕನ್ನಡದ ವಾಕ್ಯಗಳ ಮಧ್ಯದಲ್ಲಿ ಇಂಗ್ಲಿಷ್ ಅಕ್ಷರಗಳನ್ನು ಬಳಸುವುದು, ಅಕ್ಷರಗಳನ್ನು ಓರೆಯಾಗಿ ಇಟಾಲಿಕ್ ಮಾದರಿಯಲ್ಲಿ ಬರೆಯುವುದು, ಅಕ್ಷರಗಳನ್ನು ಒತ್ತಿ ಬರೆಯುವುದು(bold letters).. ಇತ್ಯಾದಿ ವಿಭಿನ್ನ ರೀತಿಯಲ್ಲಿ ನಮ್ಮ ಲೇಖನಗಳನ್ನು ಸರಳವಾಗಿ ತಯಾರಿಸಬಹುದು.

'ಬರಹ' ಲಘುವರದ ಉಪಯೋಗಗಳನ್ನು ಮುಖ್ಯವಾಗಿ ಮೂರು ರೀತಿಯಲ್ಲಿ ನೋಡಬಹುದು.

## ಗಣಕ ಮುದ್ರಣ (D.T.P.)

ಗಣಕ ಮುದ್ರಣಕ್ಕಾಗಿ ಈಗಾಗಲೇ ಒಂದೆರಡು ಕನ್ನಡದ ಲಘುವರಗಳು ಮಾರುಕಟ್ಟೆಯಲ್ಲಿವೆ. ಆದರೆ ಈ ಎಲ್ಲಾ ಲಘುವರಗಳಿಗೆ ತಮ್ಮದೇ ಆದ ಕೀಲು-ಮಣಿಗಳ (key board) ರಚನೆಯಿದೆ. ಈ ಲಘುವರಗಳನ್ನು ಉಪಯೋಗಿಸಿಕೊಳ್ಳುವವರು ಮೊದಲು ಕ್ಲಿಷ್ಟವಾದ ಈ ಕೀಲು-ಮಣಿಗಳನ್ನು ಅಭ್ಯಾಸ ಮಾಡಿಕೊಳ್ಳಬೇಕಾಗುತ್ತದೆ. ಆದರೆ 'ಬರಹ' ಈ ಸಮಸ್ಯೆಗೆ ಮಂಗಳ ಹಾಡಿ ಈಗಿರುವ 26 ಅಕ್ಷರದ ಇಂಗ್ಲಿಷಿನ ಕೀಲುಗಳನ್ನೇ ಉಪಯೋಗಿಸುವ ಸರಳ ಉಪಾಯವನ್ನು ಹೊಂದಿದೆ. ಅದು ಹೇಗೆಂದರೆ, ಈಗ ನೀವು ಕನ್ನಡದಲ್ಲಿ 'ಬಿಸಿಲ ಬದುಕು' ಎಂದು ಬರೆಯಬೇಕೆಂದರೆ, ಅದನ್ನು ಇಂಗ್ಲಿಷಿನಲ್ಲಿ "bisila badhuku' ಎಂದು ಬರೆದರಾಯಿತು. ಇಂತಹ ಸರಳ ಉಪಯೋಗ ಕ್ರಮದಿಂದಾಗಿ, ವ್ಯಕ್ತಿಯೊಬ್ಬ ಯಾವುದೇ ತರಬೇತಿಯಿಲ್ಲದೆ ನೇರವಾಗಿ 'ಬರಹ'ವನ್ನು ಉಪಯೋಗಿಸಿಕೊಳ್ಳಬಹುದಾಗಿದೆ.

ಗಣಕದಲ್ಲಿ ನಾವು ಕನ್ನಡದ ದಾಖಲೆಗಳನ್ನು ಶೇಖರಿಸಿಟ್ಟುಕೊಳ್ಳಬೇಕಾಗಿದೆ. ಅದರಿಂದಾಗುವ ಉಪಯೋಗವೇನು ಎನ್ನುವಿರಾ? ಅದನ್ನು ಈ ಉದಾಹರಣೆಯಿಂದ ವಿವರಿಸಬಹುದು. ಒಬ್ಬ ಸಾಹಿತಿಯನ್ನೇ ತೆಗೆದುಕೊಳ್ಳಿ, ಒಮ್ಮೆ ಒಂದು ಲೇಖನವನ್ನು ಬರೆದ ನಂತರ ಸಾಮಾನ್ಯವಾಗಿ ಅದನ್ನು ಮತ್ತೊಮ್ಮೆ ಓದಿದಾಗ ಅದರಲ್ಲಿ ಬದಲಾವಣೆಗಳನ್ನು ಮಾಡಬೇಕೆನಿಸುತ್ತದೆ. ಆಗ ಮತ್ತೊಮ್ಮೆ ಅದನ್ನೆಲ್ಲಾ ತಿದ್ದಿ ಬರೆಯುವ ಕೆಲಸಕ್ಕೆ ಬೆಚ್ಚಿ ಸಾಮಾನ್ಯವಾಗಿ ಅವನು ಅದನ್ನು ಬಿಟ್ಟು ಕೊಡುತ್ತಾನೆ. ಆದರೆ ಗಣಕ ಯಂತ್ರದಲ್ಲಿ ಈ ಲೇಖನವನ್ನು ಶೇಖರಿಸಿಕೊಂಡಿದ್ದರೆ ಅತ್ಯಂತ ಸರಳವಾಗಿ ಲೇಖನದಲ್ಲಿ ಬೇಕೆಂದ ಕಡೆ ಬದಲಾವಣೆಗಳನ್ನು ಅಲ್ಪ ಸಮಯದಲ್ಲಿಯೇ ಮಾಡಿಬಿಡಬಹುದು. ಅಷ್ಟೇ ಅಲ್ಲದೆ ಯಾವುದೇ ಕಾಗದಗಳ ಗೋಜಿಲ್ಲದೆ ಒಂದು ಚಿಕ್ಕ ಮಾಹಿತಿ ಸಂಗ್ರಹ (floppy)ದಲ್ಲಿ ಇಟ್ಟುಕೊಳ್ಳಬಹುದು. ಜೊತೆಗೆ ಎಷ್ಟು ಪ್ರತಿಗಳು ಬೇಕೆಂದರೂ ಸರಿ, ಕ್ಷಣದಲ್ಲಿ ಮುದ್ರಿಸಬಹುದು. ಜೊತೆಗೆ ನಾವು ಬರೆದ ಅಕ್ಷರಗಳು ಕೊಕ್ಕರೆಯ ಕಾಲಿನಂತಿದ್ದು, ಬೇರೆಯವರಿಗೆ ಓದಲು ಕಷ್ಟವಾಗುತ್ತದೆ ಎಂಬ ಕೀಳರಿಮೆಯೂ ಇಲ್ಲ.

### 'ಬರಹ'ಕ್ಕೆ ಏನು ಬೇಕು?

'ಬರಹ'ವನ್ನು ವಿಂಡೋಸ್ 3.1 (16 ಬಿಟ್) ಮತ್ತು ವಿಂಡೋಸ್ 95/ ವಿಂಡೋಸ್ ಎನ್.ಟಿ. (32 ಬಿಟ್)ಗಳಲ್ಲಿ ಅಳವಡಿಸಿ ಕೊಳ್ಳಬಹುದಾಗಿದೆ. ಇದು ಸುಮಾರು 800 ಕೆಬಿ ನಷ್ಟುಸ್ಥಳವನ್ನಾಕ್ರಮಿಸುತ್ತದೆ. ಅದಲ್ಲದೆ ಕನಿಷ್ಠ 4 ಎಂ.ಬಿ. ರ್‍ಯಾಮ್‌ನ ಅವಶ್ಯಕತೆಯಿದೆ. (ಇದಕ್ಕೂ ಹೆಚ್ಚಿದ್ದರೆ 'ಬರಹ'ವನ್ನು ಹೆಚ್ಚು ಪರಿಣಾಮ ಕಾರಿಯಾಗಿ ಉಪಯೋಗಿಸಿ ಕೊಳ್ಳಬಹುದು.)

ಗಣಕ ಯಂತ್ರವೊಂದನ್ನು ಕೊಂಡರೆ ಸಾಮಾನ್ಯವಾಗಿ ಇಂಗ್ಲಿಷಿನ ಕೆಲವು ಎಡಿಟರ್‌ಗಳು ಇದ್ದೇ ಇರುತ್ತವೆ. ಆದರೆ ಸರಳವಾಗಿ ಕನ್ನಡದಲ್ಲಿ ದಾಖಲೆಗಳನ್ನು ತಯಾರಿಸಲು ನಮಗೆ ಒಂದು ಒಳ್ಳೆಯ ಲಘುವರ ಲಭ್ಯವಿರಲಿಲ್ಲ. 'ಬರಹ' ಈ ಸಮಸ್ಯೆಯನ್ನು ನಿವಾರಿಸಿದೆ.

## ಅಂತರ್‌ಜಾಲದಲ್ಲಿ ಪ್ರಕಟಣೆ

ಅಂತರ್‌ಜಾಲ ಮುಂಬರುವ ದಿನಗಳ ಅತ್ಯಂತ ಮಹತ್ವದ ಮಾಧ್ಯಮವಾಗುತ್ತದೆನ್ನುವುದು ಶತ ಸತ್ಯ. (ವಿವರಗಳಿಗಾಗಿ 'ಬಿಸಿಲ ಬದುಕು' ಜನವರಿ 1999ರ ಸಂಚಿಕೆಯನ್ನು ಓದಿ) ನಮ್ಮ ಎಲ್ಲಾ ಪತ್ರಿಕೆಗಳು ಮುಂದೆ ಅಂತರ್‌ಜಾಲದಲ್ಲಿಯೇ ಪ್ರಕಟವಾಗುವ ದಿನಗಳು ದೂರವಿಲ್ಲ. ಈಗಾಗಲೇ ಉದಯವಾಣಿ, ಸಂಜೆವಾಣಿ ಮತ್ತು ಪ್ರಜಾವಾಣಿಗಳು ಅಂತರ್‌ಜಾಲದಲ್ಲಿ ಪ್ರಕಟವಾಗುತ್ತಿವೆ. ಇತರ ಕನ್ನಡ ಪತ್ರಿಕೆಗಳೂ ಈ ನಿಟ್ಟನಲ್ಲಿ ಯೋಚಿಸುತ್ತಿವೆ. ಇಂತಹ ಸಂದರ್ಭದಲ್ಲಿ ಸರಳವಾಗಿ ನಮ್ಮಕನ್ನಡ ಲೇಖನಗಳನ್ನು ಅಂತರ್‌ಜಾಲದಲ್ಲಿ ಪ್ರಕಟಿಸಲು ಸಹಾಯ ಮಾಡುವ ಒಂದು ಲಘುವರದ ಅವಶ್ಯಕತೆಯಿತ್ತು. ಈ ಅವಶ್ಯಕತೆಯನ್ನು 'ಬರಹ' ಪೂರೈಸಿದೆ.

ಅಂತರ್‌ಜಾಲದ ಮಾಹಿತಿಯನ್ನು ವೀಕ್ಷಿಸಲು ಬಳಸುವ ಲಘುವರಗಳೆಲ್ಲವೂ (internet explorer, Netscape etc.) ಮಾಹಿತಿಯನ್ನು ಪ್ರಕಟಿಸಲು ಎಚ್.ಟಿ.ಎಂ.ಎಲ್. (HTML) ಎಂಬ ಗಣಕ ಭಾಷೆಯನ್ನು ಬಳಸುತ್ತವೆ. ಆದ್ದರಿಂದ ನಾವು ಯಾವುದೇ ಲೇಖನವನ್ನು ಅಂತರ್‌ಜಾಲದಲ್ಲಿ ಪ್ರಕಟಿಸಬೇಕೆಂದರೂ, ನಮ್ಮ ಲೇಖನವನ್ನು ಎಚ್.ಟಿ.ಎಂ.ಎಲ್. ಎಂಬ ಭಾಷೆಯನ್ನು ಉಪಯೋಗಿಸಿ ಬರೆಯಬೇಕಾಗುತ್ತದೆ. ಆದರೆ 'ಬರಹ' ಲಘುವರದಲ್ಲಿ ನಾವು ಕನ್ನಡದಲ್ಲಿ ಬರೆದ ಲೇಖನವನ್ನು ನೇರವಾಗಿ ಎಚ್.ಟಿ.ಎಂ.ಎಲ್. ಆಗಿ ಪರಿವರ್ತಿಸಬಹುದಾಗಿದೆ. ಇದಕ್ಕೆ ನಿಮಗೆ ಎಚ್.ಟಿ.ಎಂ.ಎಲ್. ಭಾಷೆಯ ತಿಳುವಳಿಕೆಯ ಅವಶ್ಯಕತೆಯೇ ಇಲ್ಲ. ಅಂದರೆ ನೀವು ಬರೆದ ಕನ್ನಡ ಲೇಖನ

ಕ್ಷಣಾರ್ಧದಲ್ಲಿ ಅಂತರ್‌ಜಾಲದಲ್ಲಿ ಪ್ರಕಟಿಸಲು ಲಭ್ಯ!

ಇಂತಹ ವಿಶೇಷ ಸವಲತ್ತಿನಿಂದಾಗಿ, ನಾವು ಸ್ವತಂತ್ರವಾಗಿ ಅಂತರ್‌ಜಾಲದಲ್ಲಿ ಪತ್ರಿಕೆಗಳನ್ನು ಪ್ರಕಟಿಸಬಹುದಾಗಿದೆ. ಸಾಕಷ್ಟು ದೊಡ್ಡ ದೊಡ್ಡ ಕಂಪನಿಗಳು ಈ ರೀತಿಯಾಗಿ ನಮ್ಮ ಪತ್ರಿಕೆಗಳನ್ನು ಪ್ರಕಟಿಸಿಕೊಳ್ಳಲು ಪುಕ್ಕಟೆಯಾಗಿ ತಮ್ಮ ಗಣಕದಲ್ಲಿ ಸ್ಥಳ ಕೊಡುತ್ತಾರೆ. ಹೀಗಾಗಿ ಈಗಾಗಲೇ 'ಬರಹ'ವನ್ನು ಉಪಯೋಗಿಸಿಕೊಂಡು ಮೂರು ನಾಲ್ಕು ಕನ್ನಡ ಪತ್ರಿಕೆಗಳು ಅಂತರ್‌ಜಾಲದಲ್ಲಿ ತಲೆ ಎತ್ತಿವೆ. ನಿಮ್ಮ ಕುತೂಹಲಕ್ಕಾಗಿ ಅವುಗಳ ವಿಳಾಸಗಳನ್ನು ಇಲ್ಲಿ ಕೊಡಲಾಗಿದೆ.

http:\\i.am\srujana ('ಸೃಜನ' ಪತ್ರಿಕೆ)
http:\\members.tripod.com\~karnataka_patra\index.html (ಕರ್ನಾಟಕ ಪತ್ರ)
http:\\www.geocities.com\athens\academy\9576\index.html (ಪಂಡಿತ ಪುಟ)

ಮುಂಬರುವ ದಿನಗಳಲ್ಲಿ 'ಬರಹ'ದಿಂದಾಗಿ ಅಂತರ್‌ಜಾಲದಲ್ಲಿ ಇನ್ನೂ ಹೆಚ್ಚು ಹೆಚ್ಚು ಕನ್ನಡ ಪತ್ರಿಕೆಗಳು ಬರುವುದು ಶತ ಸತ್ಯ. ಹಾಗಾದರೆ ನೀವೂ ನಿಮ್ಮ ಒಂದು ಸ್ವಂತ ಕನ್ನಡ ಪತ್ರಿಕೆಯನ್ನು ಯಾವುದೇ ಖರ್ಚಿಲ್ಲದೇ ಅಂತರ್‌ಜಾಲದಲ್ಲಿ ಪ್ರಕಟಿಸುವ ಆಸಕ್ತಿ ತೋರಿಸುತ್ತೀರಲ್ಲವೆ?

### ಎಲೆಕ್ಟ್ರಾನಿಕ್ ಅಂಚೆ (e-mail)

ಇಂದು ಜನರು ತಮ್ಮ ದಿನ ನಿತ್ಯದ ವ್ಯವಹಾರದ ಮಾಹಿತಿ ವಿನಿಮಯಕ್ಕಾಗಿ ಎಲೆಕ್ಟ್ರಾನಿಕ್ ಅಂಚೆಯನ್ನು ಹೇರಳವಾಗಿ ಬಳಸುತ್ತಿದ್ದಾರೆ. ಎಲೆಕ್ಟ್ರಾನಿಕ್ ಅಂಚೆ ಅತ್ಯಂತ ಕಡಿಮೆ ವೆಚ್ಚದ್ದು ಎಂಬುದು ಒಂದು ಕಾರಣವಾದರೆ, ಅದು ತಲುಪುವ ವೇಗ, ಸೇರಬೇಕಾದವರಿಗೆ ಸೇರುವ ನಿಖರತೆ, ಬರೆದ ಪತ್ರ ಸರಿಯಾದವರಿಗೆ ತಲುಪುವವರೆಗೆ ಯಾರೂ ಆ ಮಾಹಿತಿಯನ್ನು ಕದ್ದು ಓದಲಾರದಂತಹ ಸುಭದ್ರತೆ ಮತ್ತಿತರ ಕಾರಣಗಳಾಗಿವೆ. ಇದು ಕೇವಲ ಕಛೇರಿಗಳಿಗೆ ಮಾತ್ರ ಸೀಮಿತವಾಗಿರದೆ, ಇಂದು ಹೊರ ದೇಶದಲ್ಲಿ ನೆಲೆಸಿರುವ ತಮ್ಮ ಮಕ್ಕಳೊಡನೆ ಎಲ್ಲಾ ತಂದೆ ತಾಯಿಗಳು ತಮ್ಮ ಪತ್ರ ವಿನಿಮಯ ಮಾಡಿಕೊಳ್ಳಲು ಎಲೆಕ್ಟ್ರಾನಿಕ್ ಅಂಚೆಯನ್ನು ಬಳಸುತ್ತಿದ್ದಾರೆ.

ಈ ರೀತಿಯಾಗಿ ಎಲೆಕ್ಟ್ರಾನಿಕ್ ಅಂಚೆ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗುತ್ತಿರುವಾಗ, ಮಗನೊಬ್ಬ ತಾಯಿಗೆ ಬರೆದ ಪತ್ರ ಅಥವಾ ಗೆಳೆಯನೊಬ್ಬ ತನ್ನ ಗೆಳತಿಗೆ ಬರೆದ ಪತ್ರ ಇಂಗ್ಲಿಷಿನಲ್ಲಿದ್ದರೆ ಪಾಯಸದಲ್ಲಿ ನೊಣ ಸಿಕ್ಕಂತಾಗುವುದಿಲ್ಲವೆ? ನಮ್ಮ ಭಾವನೆಗಳನ್ನು ವ್ಯಕ್ತಪಡಿಸಿಕೊಳ್ಳಲು ನಮ್ಮ ಮಾತೃಭಾಷೆಯಿಂದ ಮಾತ್ರ ಸಾಧ್ಯ.

'ಬರಹ' ಕನ್ನಡದಲ್ಲಿ ಎಲೆಕ್ಟ್ರಾನಿಕ್ ಅಂಚೆಯನ್ನು ಕಳುಹಿಸಲು ಸಹಾಯ ಮಾಡುತ್ತದೆ. ನೀವು ಪತ್ರವನ್ನು 'ಬರಹ'ವನ್ನು ಉಪಯೋಗಿಸಿ ಬರೆದು, ಈ ಪತ್ರವನ್ನು 'ಬರಹ'ದಿಂದಲೇ ಸುಲಭವಾಗಿ ಎಲೆಕ್ಟ್ರಾನಿಕ್ ಅಂಚೆಯಾಗಿ ಕಳುಹಿಸಬಹುದಾಗಿದೆ. (ಹೀಗೆ ಕಳುಹಿಸಲು ನಿಮ್ಮ ಗಣಕ ಯಂತ್ರದಲ್ಲಿ ಎಲೆಕ್ಟ್ರಾನಿಕ್ ಅಂಚೆ ಕಳುಹಿಸುವ ಸೌಲಭ್ಯವಿರಲೇ ಬೇಕು, ಇಲ್ಲದಿದ್ದರೆ ಸಾಧ್ಯವಿಲ್ಲ.) ಅಂಚೆಯನ್ನು ಪಡೆದ ವ್ಯಕ್ತಿ 'ಬರಹ'ದ ಮೂಲಕ ಈ ಅಂಚೆಯನ್ನು 'ಬರಹ'ದ ಮೂಲಕ ಕನ್ನಡದ ಅಕ್ಷರಗಳಲ್ಲಿ ಓದಬಹುದಾಗಿದೆ.

ಈ ರೀತಿಯ ಅಂಚೆಯನ್ನು ಎರಡು ವಿಧಗಳಲ್ಲಿ ಕಳುಹಿಸಬಹುದು.

#### ಮೊದಲನೆಯ ವಿಧಾನ

ನಾವು ಕನ್ನಡದ ಅಕ್ಷರಗಳನ್ನು ಮೂಡಿಸುತ್ತಿದ್ದರೂ ಇಂಗ್ಲಿಷಿನ ಅಕ್ಷರಗಳಲ್ಲಿ ಬರೆಯುತ್ತಿರುತ್ತೇವಲ್ಲವೆ? ಈ ರೀತಿಯಾಗಿ ನಿಮ್ಮ ಕನ್ನಡ ಲೇಖನವು ಇಂಗ್ಲಿಷ್ ಅಕ್ಷರಗಳಲ್ಲಿ ಇರುವ ('ಕಾಂಗ್ಲಿಷ್') ಕಡತವನ್ನು (ಫೈಲ್) ಕಳುಹಿಸಬಹುದು. ಪತ್ರ ತಲುಪಿದ ವ್ಯಕ್ತಿ 'ಬರಹ'ದ ಮೂಲಕ ನಿಮ್ಮ ಅಂಚೆಯನ್ನು ಕನ್ನಡದಲ್ಲಿ ಓದ ಬಹುದು.

#### ಎರಡನೆಯ ವಿಧಾನ

'ಬರಹ'ದಲ್ಲಿ ನಿಮ್ಮ ಲೇಖನವನ್ನು ಅಂತರ್‌ಜಾಲದ HTML ಭಾಷೆಯಾಗಿ ಪರಿವರ್ತಿಸುವ ಸಾಧ್ಯತೆಯಿದೆಯೆಂದು ಹೇಳಿದೆಯಲ್ಲವೆ? ಈ ರೀತಿಯಾಗಿ HTML ಆಗಿ ಪರಿವರ್ತಿಸಿದ ಕಡತವನ್ನು ಅಂಚೆಯಲ್ಲಿ

### 'ಬರಹ'ದ ಬ್ರಹ್ಮ ಶೇಷಾದ್ರಿ ವಾಸು

ಕನ್ನಡಿಗರಿಗೆ ಅತ್ಯಮೂಲ್ಯ ಕಾಣಿಕೆಯಾದ ಈ 'ಬರಹ' ಲಘುವರವನ್ನು ರಚಿಸಿದ ಶೇಷಾದ್ರಿವಾಸು ಬೆಂಗಳೂರಿನವರು. 7ನೇಯ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿ, ಪಿ.ಯು.ಸಿ.ಯಲ್ಲಿ 6ನೇಯ ರ‍್ಯಾಂಕ್ ಗಳಿಸಿ ರಾಜ್ಯ ಸರಕಾರದಿಂದ ಸನ್ಮಾನಿತರಾಗಿದ್ದಾರೆ. ಅನಂತರ ಬೆಂಗಳೂರು ವಿಶ್ವವಿದ್ಯಾನಿಲಯದ ವಿಶ್ವೇಶ್ವರಯ್ಯ ತಾಂತ್ರಿಕ ಕಾಲೇಜಿನಿಂದ ಎಲೆಕ್ಟ್ರಾನಿಕ್ ವಿಭಾಗದಲ್ಲಿ ಪ್ರಥಮ ರ‍್ಯಾಂಕ್‌ನಲ್ಲಿ ತೇರ್ಗಡೆ ಹೊಂದಿ (1990), ಮುಂದೆ ಭಾರತೀಯ ವಿಜ್ಞಾನ ಮಂದಿರದಲ್ಲಿ ಎಂ.ಇ. ಪದವಿಯನ್ನು ಪಡೆದಿದ್ದಾರೆ. ಬೆಂಗಳೂರು ಹಾಗೂ ಜರ್ಮನಿಯಲ್ಲಿ ವಿವಿಧ ಹುದ್ದೆಗಳಲ್ಲಿ ಗಣಕ ತಂತ್ರಜ್ಞರಾಗಿ ಸೇವೆ ಸಲ್ಲಿಸಿದ ಅವರು ಈಗ ನ್ಯೂಯಾರ್ಕಿನ ಸಿಟಿ ಬ್ಯಾಂಕಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



"ಗಣಕದಲ್ಲಿ ಕನ್ನಡದ ಬಳಕೆ ಸುಲಭ ಆಗಬೇಕು, ಮತ್ತು ಹೆಚ್ಚಾಗಬೇಕು. ಅಂತರ್‌ಜಾಲದಲ್ಲಿ ಕನ್ನಡದಲ್ಲಿ ಲೇಖನಗಳು, ಪತ್ರಿಕೆಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಳ್ಳಬೇಕು. ಎಲೆಕ್ಟ್ರಾನಿಕ್ ಅಂಚೆಯಲ್ಲಿ ಕನ್ನಡದಲ್ಲಿ ವಿಚಾರ ವಿನಿಮಯ ಆಗಬೇಕು. ಮನೆಗಳಲ್ಲಿ, ಕಛೇರಿಗಳಲ್ಲಿ ಗಣಕ ಹೊಂದಿರುವ ಕನ್ನಡ ಜನ ಕನ್ನಡದಲ್ಲಿ ದಾಖಲೆಗಳನ್ನು ತಯಾರಿಸಲು ಅನುಕೂಲವಾಗಬೇಕು. ಗಣಕಗಳು ಅಸ್ತಿತ್ವಕ್ಕೆ ಬಂದು ಹಲವಾರು ವರ್ಷಗಳೇ ಕಳೆದರೂ, ಕನ್ನಡದಲ್ಲಿ ಗಣಕ ಮುದ್ರಣದ ಹೊರತಾಗಿ ಬೇರೆ ಲಘುವರಗಳು ಅಪರೂಪ. ಕನ್ನಡ ಲಘುವರಗಳು ಕೇವಲ ಕನ್ನಡದ ಅಕ್ಷರಗಳು (ಫಾಂಟ್ಸ್), ಪದ ಸಂಸ್ಕರಣೆಯ (ವರ್ಡ್ ಪ್ರೊಸಸಿಂಗ್) ಕಾರ್ಯಕ್ಕೆ ಸೀಮಿತವಾಗಬಾರದು. ಕನ್ನಡ ಲಘುವರ ತಜ್ಞರು ಕನ್ನಡ ಗಣಕ ಮುದ್ರಣದ ಯೋಚನೆಯನ್ನು ಮರೆತು ಇನ್ನೂ ಮುಂದೆ ಸಾಗಬೇಕು. ಕನ್ನಡದ ಇನ್ನಿತರ ಅಗತ್ಯಗಳಿಗೆ ಹೊಸ ಹೊಸ ರೀತಿಯ ಲಘುವರಗಳನ್ನು ತಯಾರಿಸುವಂತಾಗಬೇಕು. ಹೀಗಾಗಿ, ಮೂಲಭೂತವಾದ ಕನ್ನಡ ಗಣಕ ಮುದ್ರಣದ ಬೇಡಿಕೆಗಳಿಗೆ ಇತಿಶ್ರೀ ಹಾಡುವ ಉದ್ದೇಶದಿಂದ ನಾನು 'ಬರಹ' ಲಘುವರವನ್ನು ಎಲ್ಲರಿಗಾಗಿ ಉಚಿತವಾಗಿ ಹಂಚುತ್ತಿದ್ದೇನೆ" ಎಂದು ಹೇಳಿಕೊಂಡಿರುವುದು ಅವರ ಕನ್ನಡದ ಅಭಿಮಾನಕ್ಕೆ ಸಾಕ್ಷಿಯಾಗಿದೆ.

'ಬರಹ'ದ ಮೂಲಕವಾಗಿ ಕಳುಹಿಸಬಹುದಾಗಿದೆ. ಇದನ್ನು ಅಂಚೆಯನ್ನು ಪಡೆಯುವ ವ್ಯಕ್ತಿ HTML ಭಾಷೆಯನ್ನು ಅರ್ಥ ಮಾಡಿಕೊಳ್ಳಬಲ್ಲ ಅಂಚೆ ಸೌಲಭ್ಯವಿರುವ ಲಘುವರವನ್ನು ಉಪಯೋಗಿಸುತ್ತಿದ್ದರೆ (ಉದಾಹರಣೆಗೆ ಅಂತರ್‌ಜಾಲದಲ್ಲಿರುವ ಅಂಚೆ ಕಛೇರಿಗಳಾದ hot mail ಮತ್ತು rocket mail) ನೇರವಾಗಿ ನಿಮ್ಮ ಪತ್ರವನ್ನು ಕನ್ನಡದಲ್ಲಿಯೇ ('ಬರಹ'ವನ್ನು ಉಪಯೋಗಿಸದೆ) ಓದಬಹುದು.

## 'ಬರಹ'ದ ನಂತರ ಮುಂದೇನು?

ಈಗ 'ಬರಹ'ದ 1.1 ಆವೃತ್ತಿ ನಮಗೆ ಲಭ್ಯವಿದೆ. ಕನ್ನಡಿಗರ ಮಧ್ಯದಲ್ಲಿ ಇದು ಅತ್ಯಂತ ಜನಪ್ರಿಯವಾದ ಲಘುವರ. ಭಾರತದ ಇತರ ಭಾಷೆಯ ಜನರು ''ನಮ್ಮ ಭಾಷೆಯಲ್ಲೂ ಇಂತಹದೊಂದು ಸುಂದರವಾದ ಲಘುವರ ಇದ್ದಿದ್ದರೆ ಎಷ್ಟೊಂದು ಚೆನ್ನಾಗಿರುತ್ತಿತ್ತು'' ಎಂದು ಅಸೂಯೆ ಬೆರೆತ ಸಂತಸದಿಂದ ಹೇಳುತ್ತಿದ್ದಾರೆಂದ ಮೇಲೆ ಈ ಲಘುವರದ ಪ್ರಸಿದ್ಧಿಯನ್ನು ಲೆಕ್ಕ ಹಾಕಿ.

ಆದರೆ 'ಬರಹ 1.1.'ರಲ್ಲೂ ಕೆಲವು ಇತಿ-ಮಿತಿಗಳಿವೆ. 'ಬರಹ'ದಿಂದ ನೇರವಾಗಿ ಕನ್ನಡದ ಅಕ್ಷರಗಳನ್ನು ವಿಂಡೋಸ್‌ನ ಇತರ ಲಘುವರಗಳಲ್ಲಿ ಮೂಡಿಸಲಾಗುವುದಿಲ್ಲ. ಉದಾಹರಣೆಗೆ microsoft ನವರ Ms-Wordನಲ್ಲಿ ನೇರವಾಗಿ ಬರೆಯಲಾಗುವುದಿಲ್ಲ. ಜೊತೆಗೆ ಪೇಜ್ ಮೇಕರ್ ಸೌಲಭ್ಯವೂ ಇದರಲ್ಲಿಲ್ಲ.

ಆದರೆ ಸದ್ಯದಲ್ಲಿಯೇ ಶೇಷಾದ್ರಿವಾಸುರವರು ತಮ್ಮ 'ಬರಹ 2.0'ರ ಆವೃತ್ತಿಯನ್ನು ಹೊರತರಲಿದ್ದಾರೆ. ಇದರಲ್ಲಿ 'ಬರಹ 1.1'ರಲ್ಲಿದ್ದ ಎಲ್ಲಾ ಇತಿ-ಮಿತಿಗಳಿಗೆ ಇತಿಶ್ರೀ ಹಾಡಲಾಗಿದೆ. ಅದರ ಜೊತೆಗೆ 'ಬರಹ'ದಲ್ಲಿ ನಮ್ಮ ಇತರ ಸಹೋದರ ಭಾಷೆಗಳಾದ ತೆಲುಗು, ದೇವನಾಗರಿ, ಮಲೆಯಾಳಂ ಮುಂತಾದ ಭಾಷೆಗಳಲ್ಲೂ ಇದನ್ನು ಉಪಯೋಗಿಸುವಂತೆ ರಚಿಸುತ್ತಿದ್ದಾರೆ. ಇಷ್ಟೇ ಅಲ್ಲದೆ, 'ಮಾತು-ಕತೆ' ಎಂಬ ಒಂದು ಸುಂದರ ಲಘುವರವನ್ನು ಹೊರತರುತ್ತಿದ್ದಾರೆ. ಈ ಲಘುವರವನ್ನು ಉಪಯೋಗಿಸಿಕೊಂಡು ನಾವು ಮೂರು ನಾಲ್ಕು ಜನ ಒಟ್ಟಿಗೆ ಸೇರಿಕೊಂಡು ಕನ್ನಡದಲ್ಲಿ 'ಹರಟೆ' (ಚ್ಯಾಟ್) ಹೊಡೆಯಬಹುದು. ಇದರಲ್ಲಿ ಅಕ್ಷರಗಳ ಜೊತೆಗೆ ಚಿತ್ರ, ಸಂಗೀತ, ಕೈಬರಹವನ್ನೂ ಬಳಸಬಹುದು.

## 'ಬರಹ' – ಉಚಿತವಾಗಿ ಲಭ್ಯ

ಕನ್ನಡಿಗರಿಗೆ ಗಣಕದಲ್ಲಿ ಇಷ್ಟೊಂದೆಲ್ಲಾ ಸಹಾಯ ಮಾಡುವ ಈ ಲಘುವರ ಎಲ್ಲರಿಗೂ ಉಚಿತವಾಗಿ ಲಭ್ಯ. ಅಂತರ್‌ಜಾಲದಲ್ಲಿ ಶೇಷಾದ್ರಿವಾಸುರವರ ಪುಟ (home page) ದಲ್ಲಿ ಇದನ್ನು ಪಡೆಯಬಹುದಾಗಿದೆ. ಅದರ ವಿಳಾಸ - http:\\members.tripod. com \~sheshadrivasu\baraha,html. ಆ ಪುಟದಲ್ಲಿ ಈ ಲಘುವರವನ್ನು ನಿಮ್ಮ ಗಣಕದಲ್ಲಿ ಹೇಗೆ ಅಳವಡಿಸಿಕೊಳ್ಳಬಹುದೆಂಬ ವಿವರವಾದ ಮಾಹಿತಿಯಿದೆ.

ಬೆಂಗಳೂರಿನಲ್ಲಿ ಇದನ್ನು ಶೇಷಾದ್ರಿವಾಸುರವರ ತಂದೆಯಿಂದ ಪಡೆದುಕೊಳ್ಳಬಹುದು. ಅವರ ವಿಳಾಸ-

**ಕೆ.ಟಿ.ಚಂದ್ರಶೇಖರ್,**

57, ಐ.ಟಿ.ಐ. ಬಡಾವಣೆ, ವಿದ್ಯಾಪೀಠ, ಬನಶಂಕರಿ 3ನೇ ಹಂತ, ಬೆಂಗಳೂರು - 560 085.

ಶೇಷಾದ್ರಿವಾಸುರನ್ನು ನೇರವಾಗಿ ಎಲೆಕ್ಟ್ರಾನಿಕ್ ಅಂಚೆಯಲ್ಲಿ ಸಂಪರ್ಕಿಸಬಹುದು. ಅವರ ವಿಳಾಸ-

baraha@writeme.com

ಈ ಲಘುವರವನ್ನು ಉಪಯೋಗಿಸಿಕೊಂಡು ಅದರ ಲಾಭವನ್ನು ನೀವು ಪಡೆಯುವಂತಾದರೆ, ನಿಮ್ಮ ಸ್ವಂತ ಪ್ರೇರಣೆಯಿಂದ ಯಥಾಶಕ್ತಿ 'ಅ.ನ.ಕೃ' ಪ್ರತಿಷ್ಠಾನಕ್ಕೆ ಧನಸಹಾಯ ಮಾಡಬಹುದಾಗಿದೆ. ನಿಮ್ಮ ಈ ಧನವನ್ನು ಕನ್ನಡ ಸಾಹಿತ್ಯಕ ಚಟುವಟಿಕೆಗಳಿಗೆ ವಿನಿಯೋಗಿಸಲಾಗುತ್ತದೆ. ನಿಮ್ಮ ಚೆಕ್, ಡ್ರಾಫ್ಟ್‌ಗಳನ್ನು ಈ ಕೆಳಕಂಡ ಖಾತೆಯ ಹೆಸರಿಗೆ ಬರೆಯಬೇಕು.

**ಅನಕೃ ಪ್ರತಿಷ್ಠಾನ**

ಖಾತೆ ಸಂಖ್ಯೆ 7270, ಕರ್ನಾಟಕ ಬ್ಯಾಂಕ್, ಹೊಸಕೆರೆ ಹಳ್ಳಿ ಶಾಖೆ, ಬೆಂಗಳೂರು - 560 085.

ಈಗ ವಿಶ್ವದಲ್ಲಿ 'ಬರಹ'ವನ್ನು



### ಗಣಕದಲ್ಲಿ ನೇರವಾಗಿ ಸೃಜನಶೀಲವಾಗಿ ಬರೆಯಲಾಗುವುದಿಲ್ಲವೆ?

ಇದೊಂದು ವಿಶೇಷ ವಿಚಾರ. ಇತ್ತೀಚೆಗೆ ನನ್ನ ಜೊತೆ ಮಾತನಾಡಿದ ಪ್ರಖ್ಯಾತ ಕತೆಗಾರರೊಬ್ಬರು ''ನೇರವಾಗಿ ಗಣಕದಲ್ಲಿ ಬರೆಯುವಾಗ ಸೃಜನಶೀಲವಾಗಿ ಯೋಚಿಸಲಾಗುವುದಿಲ್ಲ. ನಮ್ಮ ಹಳೆಯ ಆಯುಧಗಳಾದ ಪೆನ್ನು, ಪೇಪರಿನಲ್ಲಿಯೇ ನಾವು ಮೊದಲು ಬರೆದು ಅನಂತರ ಅದನ್ನು ಬೇಕಾದರೆ ಗಣಕಕ್ಕೆ ವರ್ಗಾಯಿಸ ಬಹುದು'' ಎಂದು ಹೇಳಿದರು.

ಆದರೆ ಇದು ಕೇವಲ ಹೊಸತನದ ಮುಜುಗರ, ಅಷ್ಟೇ! ಈಗಾಗಲೇ ಇಂಗ್ಲೀಷಿನ ಎಲ್ಲಾ ಪ್ರಖ್ಯಾತ ಲೇಖಕರು ನೇರವಾಗಿ ಗಣಕದಲ್ಲಿಯೇ ಬರೆಯುತ್ತಿದ್ದಾರೆ. ಅದೇ ರೀತಿ ಕನ್ನಡಿಗರೂ ಗಣಕವನ್ನು ಅಭ್ಯಾಸ ಮಾಡಿಕೊಂಡ ನಂತರ ಕೆಲವೇ ದಿನಗಳಲ್ಲಿ ಅದರ ಲಾಭವನ್ನು ಪಡೆದುಕೊಳ್ಳಬಹುದು. ಖಂಡಿತವಾಗಿಯೂ ಗಣಕಯಂತ್ರ ನಮ್ಮ ಸೃಜನಶೀಲತೆಯ ಶಕ್ತಿಗೆ ಕುಂದು ತರಲಾರದು!

ಉಪಯೋಗಿಸುತ್ತಿರುವವರ ಸಂಖ್ಯೆ ಸುಮಾರು 5000ಕ್ಕೂ ಹೆಚ್ಚಿದೆ. ಆದರೆ ವಿಚಿತ್ರವೆಂದರೆ ಕೇವಲ 5 ಜನರು ಮಾತ್ರ ಈವರೆಗೆ ತಮ್ಮ ಸ್ವಂತ ಪ್ರೇರಣೆಯಿಂದ ಅನಕೃ ಪ್ರತಿಷ್ಠಾನಕ್ಕೆ ಧನಸಹಾಯ ಮಾಡಿದ್ದಾರೆ!

### 'ಬರಹ'ದ ಅರ್ಪಣೆ

ಶೇಷಾದ್ರಿವಾಸುರವರು ತಾವು ರಚಿಸಿದ ಈ ಅತ್ಯಮೂಲ್ಯವಾದ ಕನ್ನಡ ಲಘುವರವನ್ನು ಕನ್ನಡದ ಹಿರಿಯ ಸಾಹಿತಿಗಳಾದ ಅ.ನ.ಕೃಷ್ಣರಾಯರಿಗೆ ಈ ರೀತಿಯಾಗಿ ಅರ್ಪಿಸಿದ್ದಾರೆ.

**''ಅರ್ಧ ಶತಮಾನ**
**ಕನ್ನಡ ನಾಡು-ನುಡಿಗೆ**
**ನಿಷ್ಠೆಯಿಂದ ಸೇವೆ ಸಲ್ಲಿಸಿದ**
**'ಕನ್ನಡ ಕಾದಂಬರಿಯುಗ ಪ್ರವರ್ತಕ'**
**'ಕ್ರಾಂತಿಕಾರಿ ಸಾಹಿತಿ'**
**'ಕನ್ನಡದ ರಕ್ಷಾಮಣಿ'**
**'ಕನ್ನಡ ಕುಲರಸಿಕ'**
**'ಹಲವು ಕಾಳಗಗಳ ಕಲಿ'**
**'ಧೀರ ನಿಷ್ಕಪಟ ಕನ್ನಡಿಗ'**
**'ಅ.ನ.ಕೃಷ್ಣರಾಯರಿಗೆ''**

ಸಾಹಿತ್ಯವನ್ನೇ ತಮ್ಮ ಉಸಿರಾಗಿಸಿಕೊಂಡು, ಕನ್ನಡಕ್ಕಾಗಿ ಹೋರಾಡಿದ ಅ.ನ.ಕೃಷ್ಣರಾಯ ರಿಗೆ ಈ ಲಘುವರವನ್ನು ಅರ್ಪಿಸಿದ್ದು ನಿಜಕ್ಕೂ ಸಾರ್ಥಕವೆನ್ನಿಸುತ್ತದೆ.

### ಬರೀ 90 ಸಂಜೆಗಳು!

ಸಾವಿರಾರು ಕನ್ನಡಿಗರಿಗೆ ಉಪಯೋಗವಾಗಿರುವ ಈ 'ಬರಹ' ಲಘುವರದ ರಚನೆಗೆ ಶೇಷಾದ್ರಿವಾಸು ವ್ಯಯಿಸಿರುವ ಸಮಯವೆಷ್ಟು ಗೊತ್ತೆ? ಕೇವಲ 90 ಸಂಜೆಗಳು! ಅದೂ ಕಛೇರಿಯಲ್ಲಿ ಕೆಲಸ ಮಾಡಿ ಸುಸ್ತಾಗಿ ಮನೆಗೆ ಬಂದ ನಂತರ ಆಸಕ್ತಿಯಿಂದ ಮಾಡಿದ ಕೆಲಸ!

ಇಂದು ಲಕ್ಷಾಂತರ ಕನ್ನಡಿಗರು ಗಣಕ ತಂತ್ರಜ್ಞರಾಗಿ ಭಾರತ ಮತ್ತು ವಿಶ್ವದ ಎಲ್ಲೆಡೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರೆಲ್ಲಾ ಶೇಷಾದ್ರಿ ವಾಸುರವರ ಕನ್ನಡದ ಅಭಿಮಾನವನ್ನು ಮಾದರಿಯಾಗಿ ಇಟ್ಟುಕೊಂಡು ತಮ್ಮ ಕೈಲಾದ ಲಘುವರಗಳನ್ನು ರಚಿಸಿದರೆ, ಕೆಲವೇ ದಿನಗಳಲ್ಲಿ ಗಣಕವನ್ನು ಕನ್ನಡಿಗರು ಸುಲಲಿತವಾಗಿ ಉಪಯೋಗಿಸಲು ಸಾಧ್ಯ. ಆದರೆ ಈ ಮಟ್ಟದ ಕನ್ನಡಾಭಿಮಾನ, ಆಸಕ್ತಿ, ಉತ್ಸಾಹ ನಮ್ಮ ಎಲ್ಲಾ ಗಣಕ ತಂತ್ರಜ್ಞರಲ್ಲಿ ನಿರೀಕ್ಷಿಸಬಹುದೆ? ■

## ಡ್ರೈ ಚಿಕನ್

**ಬೇಕಾಗುವ ಸಾಮಗ್ರಿಗಳು:**

1/2 ಕೆ.ಜಿ. ಚಿಕನ್ (ಬೋನ್ ಲೆಸ್), 1 ಟೀ ಸ್ಪೂನ್ ಅಲ್ಲಾ ಬೆಳ್ಳುಳ್ಳಿ ಪೇಸ್ಟ್, 3 ಏಲಕ್ಕಿ 2 ಲವಂಗ, 2-3 ದಾಲ್ಚಿನ್ನಿ(ಚಕ್ಕೆ), 3-4 ಮೆಣಸು, 2 ತತ್ತಿ, ಗರಂ ಮಸಾಲೆ 1 ಟೀ ಸ್ಪೂನ್.



**ಮಾಡುವ ವಿಧಾನ:**

ಚಿಕನ್‌ನ್ನು ಅರ್ಧ ಪ್ರಮಾಣದಲ್ಲಿ ಬೇಯಿಸಿ (ಕುಕ್ಕರಿನಲ್ಲಿ). ಬೇಯಿಸಿದ ಚಿಕನ್‌ನಲ್ಲಿ ನೀರು ಸೋಸಿ, ಚಿಕನ್ನಿಗೆ ಮೇಲೆ ತಿಳಿಸಿದ ಎಲ್ಲಾ ಪದಾರ್ಥಗಳನ್ನು ಪೌಡರ್‌ಮಾಡಿ ಹಾಕಿ. ಗರಂಮಸಾಲೆ, ತತ್ತಿ ಸೇರಿಸಿ ಕಲಸಿ. ಅರ್ಧ ಘಂಟೆ ನೆನೆಸಿದ ನಂತರ ಎಣ್ಣೆಯಲ್ಲಿ ಕರಿಯಿರಿ. ಬಿಸಿ ಇರುವಾಗಲೇ ಕೊತ್ತಂಬರಿಯಿಂದ ಅಲಂಕರಿಸಿ ಬಡಿಸಿ. ಚಿಕನ್ನಿನ ಸೋಸಿದ ನೀರಿನಲ್ಲಿ ಮೇಲೆ ಹೇಳಿದ ಎಲ್ಲಾ ಮಸಾಲೆ ಪೌಡರ್ ಹಾಕಿ ಕುದಿಸಿ ಸೂಪ್ ಸಹ ಮಾಡಬಹುದು.

**- ರೇಣುಕಾ ಎಸ್.ಚವ್ಹಾಣ್**, ಗಂಗಾವತಿ

## ಬಾಳೆ ಹಣ್ಣಿನ ದೋಸೆ

**ಬೇಕಾಗುವ ಸಾಮಗ್ರಿಗಳು:**

3 ಬಾಳೆಹಣ್ಣು, 1/2 ಹೋಳು ತೆಂಗಿನಕಾಯಿ, 1 ನಿಂಬೆಹಣ್ಣಿನ ಗಾತ್ರದ ಬೆಲ್ಲ, 15 ಟೇಬಲ್ ಚಮಚ ಗೋಧಿ ಹಿಟ್ಟು, 10 ಟೀ ಚಮಚ ಸಣ್ಣ ರವೆ, 1 ಟೀ ಚಮಚ ಏಲಕ್ಕಿ ಪುಡಿ, 2-4 ಚಮಚ ತುಪ್ಪ, 1/2 ಟೀ ಚಮಚ ಬೇಕಿಂಗ್ ಪೌಡರ್, 1 ಚಿಟಿಕೆ ಅಡಿಗೆ ಸೋಡಾ, 2 ಚಿಟಿಕೆ ಉಪ್ಪು.



**ಮಾಡುವ ವಿಧಾನ:**

ಗೋಧಿ ಹಿಟ್ಟನ್ನು ತುಪ್ಪದಲ್ಲಿ ಹುರಿಯಿರಿ. ಬಾಳೆ ಹಣ್ಣಿನ ಹೋಳನ್ನು ಮೊಸರಿನಲ್ಲಿ ನುಣ್ಣಗೆ ರುಬ್ಬಿ, ಪಾತ್ರೆಗೆ ನೀರನ್ನು ಹಾಕಿ ಬಾಳೇ ಹಣ್ಣಿನ ರಸ, ಗೋಧಿ ಹಿಟ್ಟು, ರವೆ, ಏಲಕ್ಕಿ ಪುಡಿ, ಕಾಯಿತುರಿ, ಅಡಿಗೆ ಸೋಡಾ ಹಾಕಿ ಕಲಸಿ. ಹಿಟ್ಟು ಗಟ್ಟಿ ಎನಿಸಿದರೆ ಮತ್ತೊಂದು ಬಟ್ಟಲು ನೀರನ್ನು ಹಾಕಿ. ಕಾದ ಹೆಂಚಿನ ಮೇಲೆ ದೋಸೆ ಬೇಯಿಸಿದರೆ ಅದು ಗರಿಗರಿಯಾಗಿರುತ್ತದೆ.

**- ಪರಶುರಾಮ ಮ. ಓಲೇಕಾರ, ಹೊಸಕಟ್ಟಿ**

## ಟೊಮ್ಯಾಟೊ ಗೊಜ್ಜು

**ಬೇಕಾಗುವ ಸಾಮಗ್ರಿಗಳು:**

1/2 ಕೆ.ಜಿ. ಟೊಮ್ಯಾಟೊ, 1/8 ಕೆ.ಜಿ. ಶೇಂಗಾ (ಕಡಲೆಬೀಜ), ಹಸಿಮೆಣಸಿನಕಾಯಿ, ಕೊತ್ತಂಬರಿ, ಕೊಬ್ಬರಿ, ಸಾಸಿವೆ, ಬೆಳ್ಳುಳ್ಳಿ, ಈರುಳ್ಳಿ.

**ಮಾಡುವ ವಿಧಾನ:**

ಮೊದಲು ಟೊಮ್ಯಾಟೊಗಳನ್ನು ಸಣ್ಣ ತುಂಡುಗಳಾಗಿ ಕತ್ತರಿಸಬೇಕು. ನಂತರ ಒಂದು ಪಾತ್ರೆಯಲ್ಲಿ ಹಾಕಿ ಎಣ್ಣೆಯಲ್ಲಿ ಬೇಯಿಸಬೇಕು. ಬೇಯಿಸಿದ ನಂತರ ಹಸಿಮೆಣಸಿನಕಾಯಿ, ಕೊತ್ತಂಬರಿ, ಕೊಬ್ಬರಿ, ಕಡಲೆಬೀಜ, ಬೆಳ್ಳುಳ್ಳಿ ಇವೆಲ್ಲವನ್ನು ಮಿಕ್ಸರ್‌ನಲ್ಲಿ ಹಾಕಿ ರುಬ್ಬಿಕೊಂಡಿರಬೇಕು. ಆಮೇಲೆ ಒಗ್ಗರಣೆಗೆ ಈರುಳ್ಳಿ, ಸಾಸಿವೆ, ಎಣ್ಣೆಯೊಂದಿಗೆ ಟೊಮ್ಯಾಟೊ ತುಂಡುಗಳು ಮತ್ತು ರುಬ್ಬಿಕೊಂಡಿರುವ ಮಸಾಲೆಯನ್ನು ಸೇರಿಸಿ ಒಗ್ಗರಣೆ ಹಾಕಿದರೆ ತಿನ್ನಲು ರುಚಿಯಾಗಿರುತ್ತದೆ. ಚಪಾತಿ ಮತ್ತು ಪೂರಿಯೊಂದಿಗೆ ಇದನ್ನು ತಿಂದರೆ ವಾಹ್! ಎಷ್ಟೊಂದು ರುಚಿ.



**-ರಾಜೇಶ್ವರಿ ಶಿ. ಸೊನ್ನದ, ಗುಳೇದಗುಡ್ಡ**

## ಗೋಧಿ ಹಿಟ್ಟಿನ ಬಿಸ್ಕತ್

**ಬೇಕಾಗುವ ಸಾಮಗ್ರಿಗಳು:**

3 ಕಪ್ ಗೋಧಿ ಹಿಟ್ಟು, 1/2 ಕಪ್ ಅಕ್ಕಿ ಹಿಟ್ಟು, 1 ಕಪ್ ತುಪ್ಪ, 1 ಕಪ್ ಸಕ್ಕರೆ ಪುಡಿ, ಕರಿಯಲು ಎಣ್ಣೆ.

**ಮಾಡುವ ವಿಧಾನ:**

ಗೋಧಿ ಹಿಟ್ಟನ್ನು ಹಸಿ ವಾಸನೆ ಹೋಗುವ ತನಕ ಹುರಿದುಕೊಳ್ಳಿ. ನಂತರ ಒಂದು ಪಾತ್ರೆಯಲ್ಲಿ ತುಪ್ಪವನ್ನು ಹಾಕಿ, ಕರಗಿದ ನಂತರ ಸಕ್ಕರೆ ಪುಡಿ ಹಾಕಬೇಕು. ಅದನ್ನು ಕೆಳಗಿಟ್ಟು ಕೊಳ್ಳಿ, ಗೋಧಿ ಹಿಟ್ಟು, ಅಕ್ಕಿ ಹಿಟ್ಟನ್ನು ಕರಗಿದ ತುಪ್ಪದ ಜೊತೆಗೆ ಸೇರಿಸಿ ಅದನ್ನು ಚಪಾತಿ ಹಿಟ್ಟಿನ ಹದಕ್ಕೆ ತನ್ನಿ. 5 ನಿಮಿಷ ನೆನೆಯಲು ಬಿಡಿ ನಂತರ ಚಪಾತಿಯ ರೀತಿ ಒತ್ತಿಕೊಳ್ಳಿ, ನಮಗೆ ಬೇಕಾದ ರೀತಿಯಲ್ಲಿ ಕತ್ತರಿಸಿ ಎಣ್ಣೆ ಅಥವಾ ಡಾಲ್ಡಾ (ವನಸ್ಪತಿ) ದಲ್ಲಿ ಕರಿಯಬೇಕು. ಇದನ್ನು ಎರಡು ವಾರ ಇಟ್ಟರೂ ಕೆಡುವುದಿಲ್ಲ.



**-ಎ. ಎಲ್. ಸರಿತ, ಭಾರತೀನಗರ**

## ನುಗ್ಗೆ ಸೊಪ್ಪಿನ ಬಜ್ಜಿ

**ಬೇಕಾಗುವ ಸಾಮಗ್ರಿಗಳು:**

20 ದಂಟು ನುಗ್ಗೆ ಸೊಪ್ಪು, 1/2 ಗಿಟುಕು ತೆಂಗಿನ ತುರಿ, 2 ಚಮಚ ತೆಂಗಿನ ಎಣ್ಣೆ, 2 ಟೊಮ್ಯಾಟೊ, 1 ಈರುಳ್ಳಿ, 1 ಟೀ ಚಮಚ ಸಾಸಿವೆ, 4 ಎಸಳು ಬೆಳ್ಳುಳ್ಳಿ, 5 ಒಣಮೆಣಸು, 2 ಕಪ್ ನೀರು, ರುಚಿಗೆ ತಕ್ಕಷ್ಟು ಉಪ್ಪು.



**ಮಾಡುವ ವಿಧಾನ :**

ಒಂದು ಪಾತ್ರೆಯಲ್ಲಿ ಎಣ್ಣೆ ಬಿಸಿಮಾಡಿ ಮೆಣಸು ಮತ್ತು ಬೆಳ್ಳುಳ್ಳಿ ಹಾಕಿ. ಅದು ಕೆಂಪಾದಾಗ ಸಾಸಿವೆ ಹಾಕಿ. ಸಾಸಿವೆ ಸಿಡಿದ ನಂತರ ಟೊಮ್ಯಾಟೊ ಮತ್ತು ಈರುಳ್ಳಿಯನ್ನು ಸಣ್ಣಗೆ ಹೆಚ್ಚಿ ಹಾಕಿ. ಅದು ಬಾಡಿದ ನಂತರ 2 ಕಪ್ ನೀರು ಹಾಕಿ, ಅದಕ್ಕೆ ದಂಟಿನಿಂದ ಸೊಪ್ಪನ್ನು ತೆಗೆದು ಸೇರಿಸಿ. ನೀರು ಇಂಗುತ್ತಾ ಬರುವಾಗ ತೆಂಗಿನತುರಿ ಹಾಕಿ, ನಂತರ ಮಗುಚಿ ಕೆಳಗಿಳಿಸಿ. ಒಮ್ಮೆ ಮಾಡಿ ನೋಡಿ ಊಟದ ಜೊತೆಗೆ ಬಹಳ ರುಚಿಯಾಗಿರುತ್ತದೆ.

**-ವಸಂತಿ ಆರ್. ಶೆಟ್ಟಿ, ಮಲಾಡಿ**

ನಗು ಮನುಷ್ಯನ ಸಹಜ ಸ್ವಭಾವ. ನಗುವುದು ಮಾನವೀಯತೆಯ ಧರ್ಮ! ನಗೆ ನೈಸರ್ಗಿಕ ಸಂಪತ್ತು. ಅದರ ಶಕ್ತಿ ಚಿರನೂತನ ಮತ್ತು ಸಚೇತನ.

ಮನದ ದುಗುಡವನ್ನು ನೀಗಲು, ಬೇಸರ ಕಳೆಯಲು, ಮಾನಸಿಕ-ದೈಹಿಕ ಬೆಳವಣಿಗೆಗೆ ನೆರವಾಗಲು ಭಗವಂತನು ಮಾನವನಿಗೆ ಕೊಟ್ಟಿರುವ ಪುಕಟ್ಟೆ ಔಷಧಿಯೆಂದರೆ 'ನಗೆ'.

ವೈದ್ಯಶಾಸ್ತ್ರದ ಪ್ರಕಾರ ನಗುವೊಂದು ಆಂಗಿಕ ವ್ಯಾಯಾಮ; ಆರೋಗ್ಯಕ್ಕೆ ಸಹಕಾರಿ. ಜೀವನದಲ್ಲಿ ಲವಲವಿಕೆಯುಂಟಾಗಲು, ಜೀವನದ ಬಗ್ಗೆ ಆಸ್ಥೆ ತಳೆಯಲು ಹಾಸ್ಯವು ಅತ್ಯಂತ ಅವಶ್ಯಕ. ಜೀವನವೆಂಬ ಹಲಸಿನ ಹಣ್ಣಿನ ತೊಳೆಗಳನ್ನು ಸುಲಭವಾಗಿ ಬಿಡಿಸಲು ಹಾಸ್ಯವೆಂಬ ಜಿಡ್ಡು ಬೇಕೇ ಬೇಕು. ಹಾಸ್ಯದ ಚಟಾಕಿ ಹರಿದಾಗ ಗಂಭೀರ ವಾತಾವರಣ ತಿಳಿಯಾಗುತ್ತದೆ. ಹಾಸ್ಯ ಚಟಾಕಿಯ ಸವಿ ಹೇಗಿರುತ್ತದೆಂಬುದು ಈ ಮುಂದಿನ ಚುಟುಕದಿಂದ ತಿಳಿಯಬಹುದು.

ಗಂಡ-ಹೆಂಡತಿ ಒಂದೇ ಸಮನೆ ಕಾದಾಡುತ್ತಿದ್ದರು. ಇದನ್ನು ನೋಡಿದ ಪಕ್ಕದ ಮನೆಯಾಕಿ ಸಲಿಗೆಯಿಂದ ಗೆಳತಿಯ ಗಂಡನಿಗೆ ನುಡಿದಳು. 'ನಾನೇ ನಿಮ್ಮ ಹೆಂಡತಿಯಾಗಿದ್ದರೆ, ಕುಡಿಯುವ ಕಾಫಿಯಲ್ಲಿ ವಿಷ ಹಾಕಿ ಬಿಡುತ್ತಿದ್ದೆ, ಅವನು ಸಾವಧಾನದಿಂದಲೇ ಉತ್ತರಿಸಿದ:

■ ಟಿ.ವಿ.ವೆಂಕಟರಮಣಯ್ಯ

# ಬಾಳಿನಲ್ಲಿ ಹಾಸ್ಯ



'ನಾನೇ ನಿಮ್ಮ ಗಂಡನಾಗಿದ್ದರೆ ಸಂತೋಷ ದಿಂದ ಕುಡಿದುಬಿಡುತ್ತಿದ್ದೆ!'

ಅವಳ ಬಾಯಿ ಕಟ್ಟಿತು. ಮನಸ್ಸಿನಲ್ಲಿಯೇ ಶಪಿಸುತ್ತಿದ್ದಳು. ಈ ಬಗೆಯ ಹಾಸ್ಯದ ಮಾತಿನ ಚುರುಕು ಜಾಸ್ತಿಯೆಂದು ಬೇರೆ ಹೇಳಬೇಕಾಗಿಲ್ಲ. ನಗೆ ಹನಿ ಹೂಬಾಣವಾದರೆ, ಹಾಸ್ಯದ ಚಟಾಕಿ ರಾಮಬಾಣದಂತೆ.

## ವಿಡಂಬನೆ

ಲೋಕದ ಡೊಂಕನ್ನು ತಿದ್ದುವುದೇ ವಿಡಂಬನೆಯ ಗುರಿ. ವಿಡಂಬಕ ಉಪದೇಶ ಮಾಡಲು ಹೊರಡುವುದಿಲ್ಲ. ಬದಲಾಗಿ ತಪ್ಪಿತಸ್ಥರನ್ನು ತಿದ್ದಲು ನಗೆಬಾಣಗಳನ್ನು ಉಪಯೋಗಿಸುತ್ತಾನೆ. ವಿಡಂಬಕ ಒಬ್ಬ ವೈದ್ಯನಂತೆ. ವಿಡಂಬನೆಯ ಬತ್ತಳಿಕೆಯಲ್ಲಿ ಪರಿಹಾಸ, ಅಪಹಾಸ್ಯ, ಮೂದಲಿಕೆ, ನಿಂದೆ, ಹುಚ್ಚು ಹಾಸ್ಯ, ವಿಕಟಹಾಸ್ಯ, ಚತುರೋಕ್ತಿ, ಗೇಲಿ, ವಕ್ರೋಕ್ತಿ, ವ್ಯಂಗ್ಯೋಕ್ತಿ ಇತ್ಯಾದಿ ಹಲವಾರು ಮೊನಚಾದ ನಗೆಬಾಣಗಳಿವೆ.

ಪರಿಹಾಸವು ಹೂವಿನಂತೆ ಮಧುರ ಮನೋಹರವಾಗಿದ್ದರೆ, ಅಪಹಾಸ್ಯವು ವಜ್ರದಂತೆ ಕಠೋರವಾಗಿದೆ. ಪರಿಹಾಸ ನಮ್ಮನ್ನು ಕಾಯುತ್ತದೆ; ಅಪಹಾಸ್ಯ ಕೊಲ್ಲುತ್ತದೆ. ವಿಡಂಬನೆಯ ಚಕ್ರದಲ್ಲಿ ಹೆಚ್ಚು ಮೃದುವಾಗಿ, ಮನೋಹರವಾಗಿ ಶೋಭಿಸುವ ಹಾಸ್ಯವಿಧಾನವೇ ಪರಿಹಾಸ.

ಸಾಮಾನ್ಯವಾಗಿ ಸಿಟ್ಟು ಸ್ವಾಭಿಮಾನಗಳೊಡನೆ ತುಸು ವಿನೋದ ಬೆರೆತಾಗ ಅಪಹಾಸ್ಯ ಸಿದ್ಧವಾಗುತ್ತದೆ. ಅಪಹಾಸ್ಯದಲ್ಲಿ ಎದ್ದು ಕಾಣುವುದು ಚುಚ್ಚು ಮಾತು.

ಮೂದಲಿಕೆಯಲ್ಲಿ ನಿಂದೆ ನೇರವಾಗಿ ಬರದೆ, ವೈಚಿತ್ರ್ಯದ ಸೋಗು ಹಾಕಿಕೊಂಡು ಕುಣಿಯುತ್ತದೆ. ಉದಾ: ನಾಟಕ ಕಂಪನಿಯೊಂದು ಹೊರರಾಜ್ಯಕ್ಕೆ ಪ್ರಯಾಣ ಬೆಳೆಸಿತ್ತು. ಆದಾಯ ಇಲ್ಲದೆ, ಕಂಪನಿ ನೌಕರರ ಹೊಟ್ಟೆಬಟ್ಟೆಗೆ ಬಹಳ ಕಷ್ಟವಾಯಿತು. ಆದರೂ ಕಂಪನಿ ಮಾಲೀಕ ಧೈರ್ಯ ಕಳೆದುಕೊಳ್ಳಲಿಲ್ಲ. 'ಸಂಪೂರ್ಣ ರಾಮಾಯಣ' ದಲ್ಲಿ ಕಂಪನಿಯ ಮಾಲೀಕನೇ ಶ್ರೀರಾಮಚಂದ್ರರ ಪಾತ್ರ ವಹಿಸುತ್ತಿದ್ದ. ಅವನು ವೇಷ ಧರಿಸಿಕೊಂಡು ರಂಗಮಧ್ಯದಲ್ಲಿ ನಿಂತಾಗ, ಆಂಜನೇಯನ ಪ್ರವೇಶವಾಯಿತು. ಅವನು ಜಿಗಿಯುತ್ತ ಬಂದು ರಾಮನ ಪಾದಾರವಿಂದಗಳಿಗೆ ಎರಗಿದನು. ಆಗ ರಾಮನು 'ವತ್ಸಾ, ನಿನ್ನ ಭಕ್ತಿಗೆ ಮೆಚ್ಚಿದ್ದೇನೆ; ಬೇಕಾದುದನ್ನು ಕೇಳು' ಎಂದಾಗ ಒಮ್ಮೆಲೇ ಆಂಜನೇಯನ ಪಾತ್ರಧಾರಿ ವ್ಯಕ್ತಿ ಹೇಳಿದ:

'ಸ್ವಾಮಿ, ಬಾಕಿ ಇರುವ ಮೂರು ತಿಂಗಳ ಸಂಬಳ ಕೊಟ್ಟುಬಿಡಿ, ನಿಮ್ಮ ಕಂಪೆನಿಗೆ ಕೈ ಮುಗಿಯುತ್ತೇನೆ!'

## ಚತುರೋಕ್ತಿ

ಸೂಕ್ಷ್ಮ ಬುದ್ಧಿಯನ್ನು ಪ್ರದರ್ಶಿಸುವ ಚಮತ್ಕಾರದ ನುಡಿಯೇ ಚತುರೋಕ್ತಿ. ಹಾಸ್ಯ ಮೂರ್ತಿ ಟಿ.ಪಿ. ಕೈಲಾಸಂ ಅವರು matter of money ಎಂದು ಹೇಳಿ ಆಮೇಲೆ ಅದೇ Matrimony ಎಂದಾಗ ಎಷ್ಟು ಜನ ನಕ್ಕಿದ್ದಿಲ್ಲ. ಚತುರೋಕ್ತಿಕಾರನ ಮಾತು ವ್ಯಂಗ್ಯ, ಧ್ವನಿ ಚಕ್ರ, ಈ ಮಾತಿನ ಮೋಡಿಯು ಎದುರಾಳಿಯನ್ನು ಕೆಳಕ್ಕೆ ತುಳಿಯುತ್ತದೆ.

ಒಮ್ಮೆ ಒಬ್ಬ ವಿದ್ಯಾರ್ಥಿ ಗುರುವಿನೊಡನೆ ಕೋಪಗೊಂಡು 'ನಿಮ್ಮ ಮನೆ ಹಾಳಾಗಿ ಹೋಗಲಿ' ಎಂದ, ಆಗ ಗುರು ಹೇಳಿದರು 'ಹಾಗೆಯೇ ಆಗಲಿ, ಅದು ಬಾಡಿಗೆ ಮನೆ'.

ಒಬ್ಬ ಕಾಲೇಜಿನ ಮೇಡಂ ತನ್ನ ವಿದ್ಯಾರ್ಥಿನಿಯರೊಂದಿಗೆ ಜೋಗ್ ಜಲಪಾತ ನೋಡಲು ಹೋಗಿದ್ದರು. ಜಲಪಾತವನ್ನು ವರ್ಣಿಸುತ್ತಾ ಮಾರ್ಗದರ್ಶಿ ನುಡಿದ:

'ಇದು ಎಷ್ಟು ಎತ್ತರದಿಂದ ಬೀಳುತ್ತದೆ ಎಂದರೆ, ನೀವು ಎಲ್ಲರೂ ಒಂದು ನಿಮಿಷ ಮಾತಾಡದೆ ಇದ್ದರೆ ಅದರ ಶಬ್ದ ನಿಮಗೆ ಕೇಳಿಸುತ್ತದೆ!'

ಸುಪ್ರಸಿದ್ಧ ನಾಟಕಕಾರ ಶೆರಿಡನ್ ಬ್ರಿಟಿಷ್ ಪಾರ್ಲಿಮೆಂಟ್ ಸದಸ್ಯನಾಗಿದ್ದ. ಅವನು ಒಮ್ಮೆ ಪಾರ್ಲಿಮೆಂಟಿನಲ್ಲಿ ಭಾಷಣ ಮಾಡುತ್ತಾ, ' ಈ ಸಭೆಯಲ್ಲಿನ ಅರ್ಧ ಜನ ಕತ್ತೆಗಳು' ಎಂದ. ಸಭೆಯಲ್ಲಿ ಕೋಲಾಹಲವುಂಟಾಯಿತು. ಅವನು ತನ್ನ ಮಾತನ್ನು ಹಿಂತೆಗೆದುಕೊಳ್ಳಬೇಕೆಂದು ಸಭಾಸದಸ್ಯರು ಆಗ್ರಹಪಡಿಸಿದರು. ಆಗ ಶೆರಿಡನ್ ಶಾಂತ ಸ್ವರದಲ್ಲಿ,

'ಸದಸ್ಯರ ಕ್ಷಮೆ ಕೋರುತ್ತೇನೆ, ಈ ಸಭೆಯ ಅರ್ಧದಷ್ಟು ಜನ ಕತ್ತೆಗಳಲ್ಲ' ಎಂದನು. ಶೆರಿಡನ್ ಆಡಿದುದು ಚತುರೋಕ್ತಿಯಾಗಿತ್ತು.

## ವಕ್ರೋಕ್ತಿ

ವೈಚಿತ್ರ್ಯಪೂರ್ಣವಾದ ವಕ್ರೋಕ್ತಿ ನಗೆಯ ಹುತ್ತ. 'ಆ ಮಹಾರಾಯನನ್ನು ಎಬ್ಬಿಸಬೇಕಾದರೆ ನಾಲ್ಕು ಜನ ಬೇಕು' ಎಂದಾಗ- ಎಷ್ಟು ಜನ ಕೂಗಿದರೂ ಅವನು ಏಳುವುದಿಲ್ಲ ಎನ್ನುವುದು ಮೇಲಿನ ಅರ್ಥವಾದರೆ, ಅದೊಂದು ಹೆಣ-ಹೊರುವುದಕ್ಕೆ ನಾಲ್ಕು ಆಳು ಬೇಕು ಎನ್ನುವುದು ಅದರ ಆಳಕ್ಕಿಳಿದಾಗ ಹೊಳೆಯುವ ಅರ್ಥ.

ಒಂದು ಮಠದ ಸ್ವಾಮಿಗೆ ಕಂಡವರ ಕಡೆಯಿಂದ ಕಾಲಿಗೆ ನಮಸ್ಕರಿಸಿಕೊಳ್ಳುವ ಚಟ. ಪ್ರತಿನಿತ್ಯ ನೂರಾರು ಸಲ ಬಗ್ಗಿ ಬಾಗಿ ಬೇಸತ್ತ ಅವರ ಶಿಷ್ಯ ಒಮ್ಮೆ ಮಠವನ್ನೇ ಬಿಟ್ಟು ಹೋದ. ಆದರೆ ಸ್ವಲ್ಪ ಸಮಯದಲ್ಲೇ ಹಿಂತಿರುಗಿ ಬಂದ. ಹಿಂದಿರುಗಿದ ಶಿಷ್ಯ ಗುರುವಿನ ಕಾಲನ್ನು ಹಿಡಿದು ತಪ್ಪಾಯಿತು ಎಂದ.

ಆಗ ಆ ಸ್ವಾಮಿ 'ನನ್ನ ಕಾಲು ಹಿಡಿಯದಿದ್ದರೆ ನಿನಗೆ ಗತಿ ಎಲ್ಲಿ?' ಎಂದ.

ಶಿಷ್ಯ ತಡಮಾಡದೆ ಉತ್ತರಿಸಿದ : 'ಸಮಯ ಬಂದರೆ ಕತ್ತೆಯ ಕಾಲನ್ನಾದರೂ ಹಿಡಿಯಬೇಕು!'.

ಹಾಸ್ಯ, ಕಾಲ, ವ್ಯಕ್ತಿ, ಸನ್ನಿವೇಶಗಳಿಗೆ ಅನುಗುಣವಾಗಿ ಅನೇಕ ರೂಪ ಧರಿಸಿ ನಿಂತಿದೆ. ಅದರ ಅನಂತ ಲೀಲೆಗಳನ್ನು ಕುರಿತು ಡಾ. ದ. ರಾ. ಬೇಂದ್ರೆ ಹೀಗೆ ಹೇಳಿದ್ದಾರೆ:

'ಮುಗುಳು ನಗೆಯು ಹುಡುಗರ ಹುಟ್ಟುಗುಣ; ಹರೆಯದವರ ಸಿಂಗಾರ; ಮುಕ್ತರ ಸಿದ್ಧಿ, ರಸಿಕರ ಸಾಧನೆ; ದೇವನ ಕುರುಹು; ಹೂ ನಗೆಯು ಸರಸದ ಮುಗುಳು; ಸಾಹಿತ್ಯ ಪ್ರಾಣ, ವಾದ ವಿನೋದದ ಜೀವಾಳ; ನಗೆಯಾಟವು ವೀರರ ಶಸ್ತ್ರ, ವಾದಿಗಳ ಅಸ್ತ್ರ, ಪ್ರತಿಷ್ಠಿತರ ಶಾಸ್ತ್ರ; ಬಿರುಸು ನಗೆಯು ಧೂರ್ತರ ಕೈದು; ಕಲೆದವರ ನಗೆಯು ಹುಡುಗರ ಹುಡುಗಾಟ, ಹುಚ್ಚರ ಹಣೇ ಬರಹ. ನಗದೆ ನಗಿಸುವುದು ಚತುರ ರೀತಿ; ನಕ್ಕು ನಗಿಸುವುದು ವಿದೂಷಕನ ಪರಿಪಾಠ. ರಸಿಕರ ಹಾಸ್ಯ ವಿನೋದದಲ್ಲಿ ಮಿಂಚಿನ ಸಂಚಾರ ಇರುವುದು. ತಿಳಿಯುವವರಿಗೆ ಬುದ್ಧಿ ಸಂಸ್ಕಾರ ಬೇಕು. ಒಬ್ಬರ ಹುಚ್ಚುತನ ನೋಡಿ ನಕ್ಕು, ಇನ್ನೊಬ್ಬರು ಜಾಣರಾಗಬಹುದಾಗಿದೆ. ಇದೇ ನಗೆಯ ನಡತೆ, ಹಾಸ್ಯದ ಗುರಿ.'

ಒಬ್ಬ ಮನುಷ್ಯನು ನಗುವ ರೀತಿ, ಅವನಲ್ಲಿ ನಗುವನ್ನು ಪ್ರಚೋದಿಸುವ ವಸ್ತು, ಅವನ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ನಿರ್ಮಲ ಮನಸ್ಸಿನಿಂದ ತಿಳಿಹಾಸ್ಯದಲ್ಲಿ ಭಾಗವಹಿಸುವುದರಿಂದ ಅಂತರ್ಯದ ಕೊಳೆ ತೊಳೆದು ಹೋಗುತ್ತದೆ. ಹೊಸ ಲವಲವಿಕೆ ಮೂಡುತ್ತದೆ.

ಹಾಸ್ಯವಿಲ್ಲದ ಬಾಳು ದೇವರಿಲ್ಲದ ದೇಗುಲದಂತೆ; ದೀಪ್ತಿಯಿಲ್ಲದ ದೀವಿಗೆಯಂತೆ. ಕಪ್ಪು ಮೋಡ ತುಂಬಿದ ಜೀವನಾಕಾಶದಲ್ಲಿ ಹಾಸ್ಯವು ಬೆಳ್ಳಿಯ ಬೆಳಕು ಬೆಳಗಿದಂತೆ.

ನಗೆಯ ಶಕ್ತಿ ಅದ್ಭುತ. ನಗುತ್ತಿದ್ದರೆ ಮನದ ದುಃಖ ನರಳುತ್ತದೆ. ಬೇಸರ ತೊಲಗುತ್ತದೆ. ಆಹ್ಲಾದ ಹಿಂದಿರುಗುತ್ತದೆ; ದುಗುಡ ವಿರಳವಾಗುತ್ತದೆ; ಹೊಸದೊಂದು ಚೇತನ ಅರಳುತ್ತದೆ. ಅಂತಹ ನಗು ಯಾರಿಗೆ ಬೇಡ? ■






■ ಸುಧಾ ಶರ್ಮಾ

'ಬಂದದ್ದೆಲ್ಲ ಬರಲಿ ಗೋವಿಂದನ ದಯೆಯೊಂದಿರಲಿ' ಎಂದು ನಂಬುವ ನಮ್ಮ ಜನ ಯಾವತ್ತಿಗೂ ಅವಘಡಗಳನ್ನೆದುರಿಸಲು, ಆಪತ್ತಿಗೆ ಸಿದ್ಧವಾಗಲು ಅದನ್ನು ಕಲ್ಪಿಸಿಕೊಂಡು ಮುಂಜಾಗರೂಕರಾಗಲು ಸಜ್ಜಾಗಿರಲಿಲ್ಲ. ಹಾಗೆ ನೋಡಿದ್ದರೆ ಅಂತಹ ಸಂದರ್ಭವೂ ಅವರಿಗೆ ಬಂದಿರಲಿಲ್ಲ. ಆಗ ಕಾಡುವ ಖಾಯಿಲೆಯಾಗಲಿ, ಧಾವಂತದ ಬದುಕಿನಿಂದ ಹುಟ್ಟಿದ ಒತ್ತಡ, ವಿಭಕ್ತ ಕುಟುಂಬದ ಒಂಟಿತನಗಳು ಇರಲಿಲ್ಲ. ಹಣದ ಮೌಲ್ಯಕ್ಕಿಂತ ಬದುಕಿನ ತಾತ್ವಿಕ ಮೌಲ್ಯಗಳು ಹೆಚ್ಚು ಎಂದು ನಂಬಿದ ಕಾಲವಾಗಿತ್ತು. ಇಷ್ಟಾದರೂ ಅವರು ನಾಳೆ ಮಕ್ಕಳಿಗೆ, ಮೊಮ್ಮಕ್ಕಳಿಗೆಂದು ಆಸ್ತಿ, ಮನೆ, ಒಡವೆ, ಬಂಗಾರ ಎಂದು ಮಾಡಲು ಮರೆಯುತ್ತಿರಲಿಲ್ಲ. ಮುಪ್ಪಿನಲ್ಲಿ ತಾನು ಪರರಿಗೆ ಹೊರೆಯಾಗಬಾರದೆಂಬ ಇಂಗಿತ ಇದ್ದೇ ಇರುತ್ತಿತ್ತು.

ಆದರೀಗ ಕಾಲ ಬದಲಾಗಿದೆ. ಮಧ್ಯಮ ಮೇಲ್ಮಧ್ಯಮ ವರ್ಗದವರ ದುಡಿಮೆ ಕೂಡಾ ಹೊಟ್ಟೆಗೆ, ಬಟ್ಟೆಗೆ ಉಳಿದದ್ದು ಅದೂ ಇದು ಕಂತಿನಲ್ಲಿ ಕೊಂಡಿದ್ದಕ್ಕೆ ಕಟ್ಟಲು ಆಗುತ್ತಿದೆ. 'ಕೊಳ್ಳುಬಾಕ' ಸಂಸ್ಕೃತಿಯಲ್ಲಿ ಈಗ ತೃಪ್ತಿ ಎಂಬುದೆ ಇಲ್ಲ. ಶ್ರೀಮಂತ ವರ್ಗದ ಬ್ರಾಂಡ್ ಹುಚ್ಚು, ಶ್ರೀಮಂತರಾಗಲು ತಹತಹಿಸುವ ಮಧ್ಯಮವರ್ಗದವರ ಪ್ರಯತ್ನದ ವ್ಯರ್ಥ ಕಸರತ್ತು ಜೀವನವನ್ನು ದುಡಿಯುವ ಯಂತ್ರದಂತೆ ಅಕ್ಷರಶಃ ಗಾಣದೆತ್ತುಗಳಂತೆ ಮಾಡಿದೆ. ಹಗಲೆನ್ನುವುದು ಬಸ್, ಟ್ರೇನು, ಆಫೀಸು, ಕ್ಯಾರಿಯರ್‌ಗಳಲ್ಲೇ ಕಳೆದುಹೋಗುತ್ತಿದೆ. ಈ ಎಲ್ಲದರ ಮಧ್ಯೆ ನಾಳೆಗಾಗಿ, ನಾಳಿನ ಭವಿಷ್ಯಕ್ಕಾಗಿ ಸಂತೃಪ್ತಿಯ ಜೀವನಕ್ಕಾಗಿ ತಹತಹಿಸುವ ವರ್ಗವಿದೆ. ಆ ಜನರು ಇವತ್ತನ್ನು, ನಾಳೆಯನ್ನು ಅದರಾಚೆಗಿನ ದಿನಗಳನ್ನೂ, ಏರಿಳಿತದ ಸಂದರ್ಭವನ್ನು ಎದುರಿಸಲು ಯಾವಾಗಲೂ ಸಜ್ಜಾಗಿರುತ್ತಾರೆ. ಹಾಗಾದರೆ ಅವರು ಮಾಡುವುದೇನು. ಅದೇ ಉಳಿತಾಯ.

## ಉಳಿತಾಯ ಎಂದರೇನು?

ವೆಚ್ಚದ ಕಡಿತವೆ ಉಳಿತಾಯ. ಅನಗತ್ಯ ವೆಚ್ಚಕ್ಕೆ, ಅಗತ್ಯವಿರದ ಸಂಗತಿಗಳಿಗೆ ಕಡಿವಾಣ ಹಾಕಬೇಕು. ಉದಾಹರಣೆಗೆ ಹೇಳಬೇಕೆಂದರೆ ಒಂದು ಸಂಸಾರಕ್ಕೆ ತಿಂಗಳಿಗೆ ಒಟ್ಟು ಖರ್ಚು 4000 ರೂ ಎಂದಾದರೆ, ಅದನ್ನು 3500ರೂ ಗಿಳಿಸುವುದು ಸಾಧ್ಯವೆ ಎಂದು ಯೋಚಿಸಿ ತೀರ್ಮಾನಿಸಿದರೆ ಅದೇ ಲಾಭ.

ತಿಂಗಳಿಗೆ 500ರೂ. ಉಳಿಸಿದರೆ ವರ್ಷಕ್ಕೆ 6000ರೂ, ಇದನ್ನು ಯಾವುದೇ ಬ್ಯಾಂಕ್‌ನಲ್ಲಿ 41/ ವರ್ಷಕ್ಕೆ ಠೇವಣಿಯಾಗಿಟ್ಟರೆ 12000 ರೂ. ಅದನ್ನು ಮತ್ತೆ 4½ ವರ್ಷಗಳ ನಂತರ ತೆಗೆದರೆ 24000 ರೂ ಪ್ರತಿ ವರ್ಷವೂ ಹೀಗೆ ಇಡುತ್ತಾ ಬಂದರೆ, ಪ್ರತಿ ತಿಂಗಳು ನಾವು ಉಳಿಸುವ 500 ರೂ, ವರ್ಷಕ್ಕೆ 6000 ರೂ ಆಗಿ ಹತ್ತು ವರ್ಷಗಳ ನಂತರ 25 ಸಾವಿರವಾಗುತ್ತದೆ. ಪ್ರತಿ ವರ್ಷವೂ ಹೀಗೆ ಇಡುತ್ತ ಬಂದರೆ, ಮುಂದಿನ ಹತ್ತು ವರ್ಷಗಳ ನಂತರ ದೊರೆಯುವ ಹಣ.. ನೀವೇ ಕೂತು ಯೋಚಿಸಿ.

## ಉಳಿತಾಯ ಮಾಡುವುದು ಹೇಗೆ?

ಉಳಿತಾಯ ಮಾಡುವುದೆಂದರೆ ಅಗತ್ಯಗಳನ್ನು ಪೂರೈಸಿಕೊಳ್ಳದೆ ಇರೋದಲ್ಲ. ಅಗತ್ಯಗಳ ಪೂರೈಕೆಯಾಗಿಯೂ ಉಳಿತಾಯ ಮಿಗತೆಯಾಗಿರುತ್ತೆ.

ಆಟೋದಲ್ಲಿ ಓಡಾಡೋ ಬದಲು ಬಸ್ ಸೌಕರ್ಯವಿದ್ದರೆ ಅದರಲ್ಲಿ ಹೋಗಬಹುದು. ತರಕಾರಿ, ಹಣ್ಣು ಹಾಲು ಹಾಳಾಗದಂತೆ ನೋಡಿಕೊಳ್ಳುವುದು. ಬಳಸದೆ ಎಸೆಯುವ ಅಭ್ಯಾಸ ಇರಬಾರದು. ಸಿಗರೇಟ್, ಬೀಡಿ, ಕುಡಿತ, ಹೊಟೆಲ್ ತಿಂಡಿ-ಊಟ ಇತ್ಯಾದಿಗಳನ್ನು ಸಾಧ್ಯವಾದಷ್ಟು ಬಿಡಲು ಇಲ್ಲವೆ ಕಡಿಮೆ ಮಾಡಲು ಪ್ರಯತ್ನಿಸಿ (ಆರೋಗ್ಯದ ದೃಷ್ಟಿಯಿಂದಲೂ ಇದು ಅಗತ್ಯ).

ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳುವ ಅಭ್ಯಾಸ, ಪ್ರತಿಷ್ಠೆಯನ್ನು ಎದುರಿಗಿಟ್ಟುಕೊಂಡು ಬದುಕದೆ ಇರೋದು. ಉಡುಗೊರೆ, ಬೋನಸ್ ವ್ಯಾಪಾರ, ಕೃಷಿಗಳಲ್ಲಾಗುವ ಹೆಚ್ಚಿನ ಲಾಭಗಳನ್ನು ನಂದಲ್ಲ ಎಂದು ತೆಗೆದಿಟ್ಟು ಬಿಡಿ. ನಮಗೆ ಗೊತ್ತಿಲ್ಲದೇನೆ ಇವೆಲ್ಲ ಉಳಿತಾಯ ಪ್ರವೃತಿ ನಮ್ಮ ದೈನಂದಿನ ಬದುಕಿನ ಒಂದು ಭಾಗವಾಗಿ ಬಿಡುತ್ತದೆ. ಇದರ ಪ್ರಯೋಜನದ ಸವಿಯನ್ನು ಕಷ್ಟದ ಸಂದರ್ಭಗಳಲ್ಲಿ ದುಡಿಯಲಾರದ ಸ್ಥಿತಿಯಲ್ಲಿ ಅನಾರೋಗ್ಯದ ಕಾಲದಲ್ಲಿ ಅನುಭವಿಸಬಹುದು.

ಹಣ ಉಳಿಸಿದಷ್ಟೇ ಜಾಣ್ಮೆ ಇರೋದು ಅದನ್ನು ಮತ್ತೆ ದುಡಿಸುವುದರಲ್ಲಿ. ಹಣ ವೃದ್ಧಿಯಾಗುವ ನಿಟ್ಟಿನಲ್ಲಿ ಅದನ್ನು ಪುನರ್ ತೊಡಗಿಸುವುದರಲ್ಲಿ. ಹಾಗೆ ತೊಡಗಿಸುವುದೇ ಬಂಡವಾಳ ಹೂಡಿಕೆಯಾಗುತ್ತದೆ. ಹಣವನ್ನು ಹಣಗಳಿಸುವುದಕ್ಕಾಗಿಯೇ ಮರು ವಿನಿಯೋಗಿಸುವ ಈ ಹೂಡಿಕೆಗೆ ಹಲವಾರು ಹಾದಿಗಳಿವೆ. ■

## ಕ್ವಿಜ್-19ರ ಬಹುಮಾನ ವಿಜೇತರು

**ವಿ.ವಿನಯ್**
S/o ಎಸ್.ವಿಶ್ವನಾಥ್
ಇ1/362, ಆಫೀಸರ್ಸ್ ಕ್ವಾರ್ಟರ್ಸ್,
ಪೇಪರ್ ಟೌನ್,
ಭದ್ರಾವತಿ - 577 302
ಶಿವಮೊಗ್ಗ ಜಿಲ್ಲೆ.

**ಶಾರದಾ ಬೇಗಾರ**
ಅಂಚೆ: ಮುಕ್ಕಾಂ - ಜಂಬಲದಿನ್ನಿ
ತಾಲೂಕು - ಹುನಗುಂದ
ಜಿಲ್ಲೆ: ಬಾಗಲಕೋಟೆ - 587 154

**ಕೈ.ರಾ.ಸುಬ್ಬರಾವ್**
ಕೈತೋಟ
ಸಸರವಳ್ಳಿ ಅಂಚೆ
ಸಾಗರ (ತಾ) ಶಿವಮೊಗ್ಗ(ಜಿ)

**ಎಂ.ವಿಶ್ವನಾಥ**
c/o ಎ.ದ್ಯಾಮಪ್ಪ (ಕೆ.ಇ.ಬಿ)
ಹರಪನಹಳ್ಳಿ (ಅಂಚೆ)
ದಾವಣಗೆರೆ ಜಿಲ್ಲೆ
583 131

**ಲಕ್ಷ್ಮಣ ದುಂಡಪ್ಪ, ದಿನ್ನಿ**
ಪೊ: ನಾಗಠಾಣ
ತಾ: ವಿಜಾಪುರ
586 161

ಈ ಐದು ಜನ ಬಹುಮಾನ ವಿಜೇತರಿಗೆ ತಲಾ 100 ರೂ. ಮೌಲ್ಯದ ಪುಸ್ತಕಗಳನ್ನು ಬಹುಮಾನವಾಗಿ ನೀಡಲಾಗುವುದು.

## ಕ್ವಿಜ್ - 19ರ ಸರಿಯುತ್ತರ

1. ಮಾರ್ಚ್ ತಿಂಗಳಲ್ಲಿ
2. ಬಿ.ವಿ.ರಾಮನ್
3. ಬ್ಯಾಂಕಾಕ್
4. ಸದ್ದಾಂ ಹುಸೇನ್
5. ದೇ.ಜವರೇಗೌಡ

### ಸೂಚನೆಗಳು

- ಕೆಳಗೆ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು. ಐದು ಜನ ಬಹುಮಾನ ವಿಜೇತರಿಗೆ ತಲಾ 100 ರೂ. ಮೌಲ್ಯದ ಪುಸ್ತಕಗಳನ್ನು ಬಹುಮಾನವಾಗಿ ನೀಡಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ **15 - 2 - 1999**

ವಿಜೇತರಿಗೆ 500 ರೂ. ಮೌಲ್ಯದ ಬಹುಮಾನ

ಪ್ರವೇಶ ಪತ್ರ

# ಕ್ವಿಜ್ - 20

ಹೆಸರು..........................................

ವಿಳಾಸ..........................................

..........................................

..........................................

ಪಿನ್ ಕೋಡ್......................... ದೂರವಾಣಿ.........................

1. 'ಬಿಸಿಲ ಬದುಕು' ಜನವರಿ 1999 ಸಂಚಿಕೆಯಲ್ಲಿ 'ಮಾಹಿತಿಯ ಮಂತ್ರದಂಡ: ಇಂಟರ್‌ನೆಟ್' ಲೇಖನ ಬರೆದವರು ಯಾರು?
   ..........................................
2. ರಾಜ್ಯ ಜನತಾದಳದ ಹೊಸ ಅಧ್ಯಕ್ಷರು ಯಾರು?
   ..........................................
3. ತರಳಬಾಳು ಹುಣ್ಣಿಮೆ ಮಹೋತ್ಸವ ಈ ಬಾರಿ ಯಾವ ಊರಿನಲ್ಲಿ ನಡೆಯಿತು?
   ..........................................
4. ಮೈಕ್ ಟೈಸನ್ ಯಾವ ಕ್ರೀಡೆಯಲ್ಲಿ ಪ್ರಸಿದ್ಧರು?
   ..........................................
5. LIC ಇದರ ವಿಸ್ತೃತ ರೂಪವೇನು?
   ..........................................

ಪ್ರವೇಶ ಪತ್ರವನ್ನು 15.2.99ರೊಳಗೆ ಕಳುಹಿಸಬೇಕಾದ ವಿಳಾಸ :
ಸಂಪಾದಕರು, **ಬಿಸಿಲ ಬದುಕು**, ಅಂಚೆ ಪೆಟ್ಟಿಗೆ 7951,
ಬಸವೇಶ್ವರನಗರ, ಬೆಂಗಳೂರು-79.

■ ಎಂ. ಎಸ್. ಮೂರ್ತಿ

'ವಿನ್ಯಾಸ', ನಂ. 132, 1ನೇ ಮಹಡಿ, ಗಾಂಧಿ ಬಜಾರ್ ಸರ್ಕಲ್, ಬಸವನಗುಡಿ, ಬೆಂಗಳೂರು-4

# 'ಬದುಕ' ಬಲ್ಲವರ ನೆನಪು

**ಮೊ**ನ್ನೆ ನಮ್ಮ ತೋಟದ ಕೆಲಸಗಾರ ಹುಲ್ಲು ಸವರುವ ಕತ್ತಿ, ಹುಲ್ಲು ಸವರುವಾಗ ನೆಲದಲ್ಲಿನ ಕಲ್ಲುಗಳಿಗೆ ತಾಗಿ ಮಂಡಾಗಿದೆ ಎಂದ. ತುಂಬಾ ಹಳತಾದ ಆ ಕತ್ತಿಯನ್ನು ಬಂಡೆಯ ಮೇಲೆ ಮಸೆದು ಹರಿತಗೊಳಿಸುವ ಸ್ಥಿತಿಯಲ್ಲಿರಲಿಲ್ಲ. ಆಗ ತಕ್ಷಣ ನನಗೆ ನೆನಪಾಗಿದ್ದು ನಮ್ಮ ಅಜ್ಜಿಯ ಊರಿನ ವಾಜಗೇರಿ.

ನಾನು ತುಂಬಾ ಚಿಕ್ಕವನಿದ್ದಾಗ ಕನಕಪುರ ಹತ್ತಿರದ ನಮ್ಮ ಅಜ್ಜಿಯ ಊರಿಗೆ ಬೇಸಿಗೆ ರಜೆಗೆ ಹೋಗುತ್ತಿದ್ದೆವು. ಆ ಊರೊಳಗೆ ಹಲವು ಕೇರಿಗಳಿದ್ದವು. ಅವುಗಳಲ್ಲಿ 'ವಾಜಗೇರಿ' ಮತ್ತು 'ಕುಂಬಾರಗೇರಿ' ಎಂಬ ಎರಡು ಕೇರಿಗಳು ನನಗೆ ಒಂದು ಹೊಸ ಲೋಕವೆಂಬಂತೆ ಕಾಣುತ್ತಿದ್ದವು. ನಾನು ನನ್ನ ತಮ್ಮ ಊರಿಗೆ ಹೋದರೆ ನಮ್ಮ ಹೊಲ, ತೋಟಗಳಲ್ಲಿ ಸುತ್ತುತ್ತಿದ್ದೆವು. ಅಲ್ಲಿ ಹೂವು,ಹಣ್ಣುಗಳು ಗಿಡದಲ್ಲೆ ಕಾಣುವ ನೋಟಕ್ಕೆ ಬೆರಗಾಗುತ್ತಿದ್ದೆವು. ಯಾಕೆಂದರೆ ಬದನೆಯಾಗಲಿ, ಟೋಮ್ಯಾಟೊವಾಗಲಿ ಬುಟ್ಟಿಗಳಲ್ಲಿ, ಗಾಡಿಗಳಲ್ಲಿ ಮಾತ್ರ ನಾವು ನೋಡಿದ್ದೆವು. ಅವು ಬೆಳೆಯುವ ಕ್ರಮ ತಿಳಿಯುವ ಅವಕಾಶ ಅಲ್ಲಿಯವರೆಗೂ ನಮಗೆ ಒದಗಿರಲಿಲ್ಲ. ಗಿಡಗಳ ಕೆಳಗೆ, ಆಕರ್ಷಕವಾದ ಬಣ್ಣಗಳಲ್ಲಿ ಹೊಳೆಯುತ್ತಾ ನೇತಾಡುತ್ತಿದ್ದ ಹಣ್ಣು, ತರಕಾರಿಗಳು ಬೆಳೆಯುವ ಗುಟ್ಟು ನಮಗೆ ತಿಳಿದು ನಾವು ಕಂಡದ್ದು ಅದ್ಭುತ ಜ್ಞಾನವೆಂಬಂತೆ ಹೆಮ್ಮೆ ಪಡುತ್ತಿದ್ದೆವು. ಇಲ್ಲಿ 'ಗುಟ್ಟು' ಎಂದದ್ದಕ್ಕೆ ಕಾರಣವಿದೆ. ಮೊದ ಮೊದಲು ನಾವು ಹಳ್ಳಿಗೆ ಹೋದಾಗ ಅಲ್ಲಿನ ಹುಡುಗರು ನಮ್ಮನ್ನು ಸಿಟಿಯಿಂದ ಬಂದವರೆಂದು ವಿಶೇಷವಾಗಿ ಕಾಣುತ್ತಿದ್ದರು. ಕ್ರಮೇಣ ನಮ್ಮೊಂದಿಗೆ ಸಲಿಗೆಗೊಂಡು ಗಿಡ, ಮರಗಳ ಬಗ್ಗೆ ನಮಗಿದ್ದ ಜ್ಞಾನವನ್ನು ಪರೀಕ್ಷಿಸಿ ಕೀಟಲೆ ಮಾಡುತ್ತಿದ್ದರು.

ಅವರೊಂದಿಗೆ ಹೊಲಗದ್ದೆಗಳನ್ನು ಸುತ್ತುವಾಗ ಕಡಲೆಕಾಯಿ ಬೆಳೆಯುವುದು ಈ ಮರದಲ್ಲೇ ಎಂದು ಹುಣಸೇಮರವನ್ನು, ಭತ್ತ ಬೆಳೆಯುವುದು ಈ ಬಳ್ಳಿಯಲ್ಲಿ ಎಂದು ಯಾವುದೋ ಬಳ್ಳಿ ತೋರುವುದು. ಸಾಸಿವೆ ಗಿಡ ತೋರಿಸಿ ರಾಗಿ ಎಂದು ರಾಗಿ ಗಿಡ ತೋರಿಸಿ ಸಾಸಿವೆ ಗಿಡ ಎಂದು ನಮ್ಮನ್ನು ಗೊಂದಲಗೊಳಿಸಿ ಛೇಡಿಸುತ್ತಾ ನಗುತ್ತಿದ್ದರು.

ನಮಗೆ ಆ ಬಗ್ಗೆ ಅನುಮಾನವಾಗಿ ಈ ಬಗ್ಗೆ ನಿಜ ತಿಳಿಯಲೇಬೇಕೆಂಬ ಹಠದಿಂದ ಅಜ್ಜಿ, ತಾತನೊಂದಿಗೆ ಹೋದಾಗ ಎಲ್ಲ ವಿವರಗಳನ್ನು ಬಹಳ ಕೂಲಂಕಷ ತಿಳಿದೆವು. ಈಗಲೂ ಆ ನೆನಪಿನಿಂದ ನನ್ನ ಮಗನಿಗೆ 'ಕಡಲೆ ಕಾಯಿ' ಗಿಡ ಹೇಗಿರುತ್ತದೆ ಎಂಬುದನ್ನು ವಿವರಿಸುತ್ತೇನೆ.

ಅನಂತರದಲ್ಲಿ ನಮ್ಮ ಸುತ್ತಾಟದ ಮುಖ್ಯ ಘಟ್ಟ ಎಂದರೆ ಊರಿನ ವಾಜಗೇರಿ ಮತ್ತು ಕುಂಬಾರಗೇರಿ ಎನ್ನುವ ಬಡಾವಣೆ. ಊರಿನಲ್ಲಿ ಕಾಲಿಟ್ಟರೆ ನಮಗೆ ನೆನಪಾಗುತ್ತಿದ್ದುದು ಈ ಕೇರಿಗಳು. ಈ ಎರಡೂ ಕೇರಿಗಳಿಗೂ ಒಂದಲ್ಲಾ ಒಂದು ದಿನ ನಮ್ಮ ಹಾಜರಿ ಇರುತ್ತಿತ್ತು.

ವಾಜಗೇರಿಯಲ್ಲಿ ಮನೆಗಳ ಮುಂದೆ ದೊಡ್ಡ ಬಲೆಯಂತಹ ನಿಗಿನಿಗಿ ಕೆಂಡದ ಹೊಂಡ ವಿರುತ್ತಿತ್ತು. ಚರ್ಮದ ಚೀಲದ ತಿದಿ ಒತ್ತಲು ನಮ್ಮ ವಯಸ್ಸಿನ ಹುಡುಗನೋ ಅವನ ಅಮ್ಮನೋ ಇರುತ್ತಿದ್ದರು. ಅಲ್ಲಿಂದ ಬಂದ ಗಾಳಿ ಸ್ವಲ್ಪ ದೂರದಲ್ಲಿನ ಒಲೆಯ ಕೆಂಡಗಳನ್ನು ಕೆಂಪಗೆ ಹೊಳೆಸುತ್ತಿದ್ದವು. ಈ ಕೆಂಪಗಿನ ಕೆಂಡಗಳ ಮಧ್ಯೆ ಬಂದು ದಪ್ಪಕೆಂಡದಂತ ಕಬ್ಬಿಣದ ಕುಡುಗೋಲನ್ನೋ, ನೇಗಿಲ ಗಳವನ್ನೋ ಚಿಮಟದಿಂದ ತೆಗೆದು ಕಬ್ಬಿಣದ ಮೇಲಿಟ್ಟು ಬಡಿಯುತ್ತಿದ್ದ ವಾಜರವನು. ಅನಂತರ ಆ ಕಬ್ಬಿಣವನ್ನು ನೀರಿನಲ್ಲಿ ಮುಳುಗಿಸುತ್ತಿದ್ದ. ಆಗ 'ಸುಯ್' ಎಂದು ಶಬ್ದ ಬರುತ್ತಿತ್ತು. ಆ ಘಟನೆ ನನ್ನ ತಮ್ಮನಿಗೆ ಮತ್ತು ಇತರ ಸಣ್ಣಮಕ್ಕಳಿಗೆ ಬಹಳ ಇಷ್ಟವಾಗುತ್ತಿತ್ತು. ಈ ವಾಜಗೇರಿ ಒಂದು ಫರ್ಲಾಂಗು ಇರುವುದಕ್ಕೆ ಮುಂಚೆ ಅವರು ಕಬ್ಬಿಣ ಬಡಿಯುತ್ತಿದ್ದ ಠಣ, ಠಣ, ಶಬ್ದ ಲಯಬದ್ಧವಾಗಿ ಕೇಳುತ್ತಿತ್ತು. ಇಪ್ಪತ್ತು ಮೂವತ್ತು ಮನೆಗಳಿದ್ದ ಈ ಊರಿನ ನಂತರ ಸಣ್ಣ ಶಬ್ದ ಮಾಡುತ್ತ ಪರಸುತಿಯಲ್ಲಿ ಸಣ್ಣ ಅಗ್ಗಿಷ್ಟಿಕೆ ಮುಂದೆ ಊದುಗೊಳವೆ ಹಿಡಿದ ಆಚಾರಿಗಳಿರುತ್ತಿದ್ದರು. ಅವರೆಲ್ಲ ಚಿನ್ನದ ಕೆಲಸ ಮಾಡುತ್ತಿದ್ದರು. ಇಲ್ಲಿ ನಮಗೆ ಅಂಥಾ ಆಕರ್ಷಣೆ ಇರಲಿಲ್ಲ.

ಮುಂಜಾನೆ ಬಂದು ಈ ವಾಜಗೇರಿಯ ಮಾಯಾಲೋಕ ನೋಡುತ್ತಾ ನಿಂತರೆ ಅಜ್ಜ ಬಂದು ಊಟಕ್ಕೆ ಎಳೆದೊಯ್ಯ ಬೇಕಿತ್ತು. ಊಟ ಮುಗಿಸಿ ಮತ್ತೆ ನಮ್ಮ ಭೇಟಿ ಕುಂಬಾರಗೇರಿಗೆ. ಹತ್ತು ಹದಿನೈದು ಮನೆಗಳಿದ್ದ ಈ ಕೇರಿ ನಿಶ್ಯಬ್ದವಾಗಿ ನಡೆಯುತ್ತಿದ್ದ ಮಣ್ಣಿನ ಸೃಷ್ಟಿಲೋಕ. ಒಂದು ಗಾಡಿ ಚಕ್ರದ ಮಧ್ಯದಲ್ಲಿ ಒಂದು ಮುದ್ದೆ ಕೆಂಪು ಮಣ್ಣು ಇರಿಸಿ ಎರಡೇ ಕೈಗಳಲ್ಲಿ ರೂಪುಗೊಳ್ಳುತ್ತಿದ್ದವು. ಈ ಪ್ರಕ್ರಿಯೆ ಇಂದಿಗೂ ನನಗೆ ಆಶ್ಚರ್ಯ. ನಾವೆಲ್ಲ ತಿಗರಿ ತಿರುಗುವುದನ್ನು ನೋಡುತ್ತಾ ನಿಂತರೆ ಅಲ್ಲಿನ ಮಕ್ಕಳು ನಮ್ಮನ್ನೇ ನೋಡುತ್ತಿದ್ದರು. ಆ ಮಕ್ಕಳಿಗೆ ಮಣ್ಣು ಮಡಿಕೆಯಾಗುವ ಬಗ್ಗೆ ಆಸಕ್ತಿ ಇಲ್ಲವೆಂಬಂತೆ ಮಣ್ಣು ಹದ ಮಾಡುವ ಕೆಲಸ ತಮ್ಮ ಕರ್ಮ ಎನ್ನುವಂತೆ ಯಾಂತ್ರಿಕವಾಗಿ ಮಾಡುತ್ತಿದ್ದರು. ದಿನವೂ ನಮ್ಮನ್ನು ನೋಡಿ, ನೋಡಿ ನಮ್ಮ ಬಗ್ಗೆಯೂ ನಿರಾಸಕ್ತಿಗೊಂಡು ಬಿಟ್ಟಿದ್ದರು.

ನಮ್ಮ ತೋಟದ ಕೆಲಸದವನಿಗೆ ಕುಲುಮೆಗೆ ಕೊಟ್ಟು ಆ ಕತ್ತಿ ತಟ್ಟಿಸು ಎಂದೆ, ಕುಲುಮೆ ಬಹಳ ದೂರವಿದೆ ಎಂದ. ಇದು ಹಳ್ಳಿಯಲ್ಲವಾ? ಇಲ್ಲೊಂದು ಕುಲುಮೆ ಇರಲೇಬೇಕಲ್ಲ ಯಾಕಿಲ್ಲ? ಎಂದುಕೊಂಡೆ. ಅಲ್ಲಿಂದ ಐದಾರು ಕಿ.ಮೀ. ದೂರದಲ್ಲಿ ನಾನು ನೋಡಿದ್ದ ಏಕಾಂಗಿ ಕುಲುಮೆಯ ಗುರುತು ಹೇಳಿ ಮನೆದಾರಿ ಹಿಡಿದೆ. ಬೆಂಗಳೂರಿನ ದಾರಿಯಲ್ಲಿ ಬರುವಾಗ ಈ ನಗರದಲ್ಲಿ ಕಂಪ್ಯೂಟರ್‌ನಿಂದ ಮಾತ್ರ ನಮ್ಮ ಬದುಕು ಊರ್ಜಿತವಾಗಬಲ್ಲದೆಂಬ ಭ್ರಮೆಯಿಂದ ಸೃಷ್ಟಿಯಾಗುವ ನಿರುದ್ಯೋಗಿಗಳ ಬಗ್ಗೆ ಯೋಚಿಸಿದೆ. ಬೆಂಗಳೂರಿನ ಹೊರಗೆ ಒಂದು ಕುಲುಮೆ ಇಟ್ಟರೆ ಈವತ್ತಿನ ಕಂಪ್ಯೂಟರು ಪೈಪೋಟಿ ಇಲ್ಲದೆ ಬಿಡುವಿಲ್ಲದ ಉದ್ಯೋಗಿಯಾಗುವ ಸಾಧ್ಯತೆ ಬಗ್ಗೆ ನಮಗೆ ಅರಿವಿಲ್ಲ. ಆ ಅರಿವು ನಮಗೆ ಆದರೆ ನಮ್ಮ ಜನಪದ ಉದ್ಯೋಗ ಉಳಿದು ಜನರು ಬದುಕ ಬಲ್ಲರು. ■



# ಹೃದಯದ ಮಾತು!

**ಪಶ್ಚಿಮದೇಶಗಳಿಗೆ ಹೋಲಿಸಿದರೆ ಭಾರತೀಯರಲ್ಲಿ ರಕ್ತನಾಳಗಳು ಕಟ್ಟಿಕೊಳ್ಳುವ ಪ್ರಮಾಣ ಮೂರು ಪಟ್ಟು ಹೆಚ್ಚು. ಸಣ್ಣ ವಯಸ್ಸಿನಲ್ಲೇ ಭಾರತೀಯರು ಹೃದಯರೋಗಕ್ಕೆ ತುತ್ತಾಗುತ್ತಾರೆ. ಅವರಲ್ಲಿ ಹೃದಯ ರೋಗ ಬಲು ವೇಗವಾಗಿ ಬೆಳೆದು, ಸಾವಿಗೆ ಕಾರಣವಾಗುತ್ತದೆ.**

■ **ಮಾಧವ ಐತಾಳ್**

'ಕಟುಕ, ಹೃದಯವಿಲ್ಲದವ' ಅನ್ನಿಸಿಕೊಳ್ಳುವುದು ಒಳ್ಳೆಯ ಸ್ಥಿತಿಯಲ್ಲ. ಹೃದಯವಿಲ್ಲದೆ ಇರುವುದು ಸಾಧ್ಯವೇ ಇಲ್ಲ. ಆದರೆ ಎಡಭಾಗದಲ್ಲಿರಬೇಕಾದ ಹೃದಯ ಬಲಭಾಗದಲ್ಲಿ ಇರಬಹುದು. ಹೃದಯದಲ್ಲಿ ಮನುಷ್ಯನನ್ನು ಮನುಷ್ಯನನ್ನಾಗಿಸುವ ಭಾವನೆಗಳಿಲ್ಲದಿರಬಹುದು, ಅಷ್ಟೆ. ನಿಜವಾದ ಅರ್ಥದಲ್ಲಿ ಹೃದಯ ಭಾವನೆಗಳ ಮೂಲವಲ್ಲ. ಮಧ್ಯ ಮೆದುಳು ಮನುಷ್ಯನಲ್ಲಿನ ನವರಸಗಳ ಮೂಲ.

ಮನುಷ್ಯನ ಹೃದಯದ 'ಲಬ್‌ಡಬ್' ಆತನ ದೈಹಿಕ ಇರುವಿಕೆಗೆ ಕಾರಣ. ಈ ಹೃದಯ ಕೂಡಾ ರೋಗಾತೀತವಲ್ಲ. ಹುಟ್ಟನಿಂದ ಅಥವಾ ವಂಶವಾಹಿಗಳ ದೋಷದಿಂದ ಇಲ್ಲವೇ ಮನುಷ್ಯ ತನ್ನ ಅಭ್ಯಾಸಗಳಿಂದ ಹೃದಯರೋಗಕ್ಕೆ ತುತ್ತಾಗುತ್ತಾನೆ.

ಸುಮಾರು ಒಂದು ಬಿಲಿಯನ್ ಜನಸಂಖ್ಯೆಯನ್ನುಳ್ಳ ಈ ದೇಶದಲ್ಲಿ ಪ್ರತಿವರ್ಷ 1.3. ದಶಲಕ್ಷ ಹೃದಯ ಶಸ್ತ್ರ ಚಿಕಿತ್ಸೆಗಳು ನಡೆಯಬೇಕಿತ್ತು. ಆದರೆ ಇಲ್ಲಿ ನಡೆಯುತ್ತಿರುವುದು ಕೇವಲ 80,000 ಶಸ್ತ್ರ ಚಿಕಿತ್ಸೆ ಮಾತ್ರ. ಎಲ್ಲದಕ್ಕೂ ನಾವು, ನಮ್ಮದು ಬಡದೇಶವೆಂದು ಕಾರಣ ಕೊಡುತ್ತೇವೆ. ಆದರೆ ಅಮೆರಿಕಾ ಮತ್ತು ಬ್ರಿಟನ್ ಸರ್ಕಾರಗಳೇ ಸಾಮಾನ್ಯ ಜನರಿಗೆ ಉನ್ನತ ತಂತ್ರಜ್ಞಾನದ ಆರೋಗ್ಯ ರಕ್ಷಣೆ ಸೇವೆಗಳನ್ನು ಒದಗಿಸುವಲ್ಲಿ ವಿಫಲವಾಗಿವೆ. ಸತ್ಯವೇನೆಂದರೆ ಪ್ರಪಂಚದ ಯಾವುದೇ ಭಾಗದಲ್ಲಿ ಆಗಲಿ, ಜನರಿಗೆ ಆರೋಗ್ಯ ರಕ್ಷಣಾ ಸೇವೆ ನೀಡಲು ಸಾಧ್ಯವಾಗುವುದು ಕಾಳಜಿ ಹೊತ್ತ ಜನರಿಂದ ಸಂಘಟನೆಗಳಿಂದ ಮಾತ್ರ.

## ಹೃದಯ ರೋಗ

ಪಶ್ಚಿಮದೇಶಗಳಿಗೆ ಹೋಲಿಸಿದರೆ ಭಾರತೀಯರಲ್ಲಿ ರಕ್ತನಾಳಗಳು ಕಟ್ಟಿಕೊಳ್ಳುವ ಪ್ರಮಾಣ ಮೂರು ಪಟ್ಟು ಹೆಚ್ಚು. ಸಣ್ಣ ವಯಸ್ಸಿನಲ್ಲೇ ಭಾರತೀಯರು ಹೃದಯರೋಗಕ್ಕೆ ತುತ್ತಾಗುತ್ತಾರೆ. ಅವರಲ್ಲಿ ಹೃದಯ ರೋಗ ಬಲು ವೇಗವಾಗಿ ಬೆಳೆದು, ಸಾವಿಗೆ ಕಾರಣವಾಗುತ್ತದೆ.

ಭಾರತದಲ್ಲಿ ತೆರೆದ ಹೃದಯದ ಶಸ್ತ್ರ ಚಿಕಿತ್ಸೆ ತುಂಬಾ ದುಬಾರಿಯಾಗಿದ್ದು, ಆಪರೇಷನ್ ಒಂದಕ್ಕೆ ಕನಿಷ್ಠ 1.5 ಲಕ್ಷ ರೂ. ತಗಲುತ್ತದೆ. ಇದನ್ನು ಶ್ರೀಮಂತರು ಮಾತ್ರ ಭರಿಸಬಲ್ಲವರಾಗಿದ್ದು, ಉಳಿದವರು ನೋವಿನ, ನಿಧಾನವಾದ ಸಾವಿಗೆ ಬಲಿಯಾಗುತ್ತಾರೆ.

ಆರೋಗ್ಯವಂತ ಮನುಷ್ಯನಲ್ಲಿ ಮಲಿನರಕ್ತವು ದೇಹದ ಮೇಲ್ಭಾಗದಿಂದ ಉಚ್ಚ ಅಭಿಧಮನಿಯ ಮೂಲಕ, ಕೆಳಭಾಗದಿಂದ ನೀಚ ಅಭಿಧಮನಿ ಮೂಲಕ ಬಲಹೃತ್ಕರ್ಣ ಸೇರುತ್ತದೆ. ಬಲ ಹೃತ್ಕರ್ಣದಿಂದ ರಕ್ತ ಹೃತ್ಕುಕ್ಷಿಗೆ ಹೋಗಿ, ಅಲ್ಲಿಂದ ಶ್ವಾಸಕೋಶದ ಅಪಧಮನಿ ಮೂಲಕ ಶ್ವಾಸಕೋಶ ತಲುಪುತ್ತದೆ. ಇಲ್ಲಿಂದ ಹೊರ ಬರುವ ಶುದ್ಧ ರಕ್ತವು ಶ್ವಾಸಕೋಶದ ಅಭಿಧಮನಿಗಳ ಮೂಲಕ ಎಡಹೃತ್ಕರ್ಣ ಸೇರುತ್ತದೆ. ಶುದ್ಧರಕ್ತದ ಮುಂದಿನ ನಿಲ್ದಾಣ ಎಡಹೃತ್ಕುಕ್ಷಿ. ಇಲ್ಲಿಂದ ಶುದ್ಧ ರಕ್ತವು ಮಹಾಅಪಧಮನಿಗಳ ಮೂಲಕ ದೇಹದ ವಿವಿಧ ಭಾಗಗಳಿಗೆ ಪೂರೈಸಲ್ಪಡುತ್ತದೆ. ಹೃತ್ಕುಕ್ಷಿ ಮತ್ತು ಹೃತ್ಕರ್ಣಗಳ ನಡುವೆ, ಬಲಹೃತ್ಕುಕ್ಷಿ, ಶ್ವಾಸಕೋಶದ ಅಪಧಮನಿ ಹಾಗೂ ಎಡ ಹೃತ್ಕುಕ್ಷಿ ಮತ್ತು ಮಂಕಾ ಅಪಧಮನಿಗಳ ನಡುವೆ ರಕ್ತದ

ಸಂಚಾರವನ್ನು ನಿಯಂತ್ರಿಸಲು 'ಬಿರಡೆ' ಇರುತ್ತದೆ. ಇಷ್ಟೊಂದು ಸಂಕೀರ್ಣವಾದ ಈ ಹಿಡಿಯ ಗಲದ ಅಂಗಕ್ಕೆ ಅನೇಕ ಸಮಸ್ಯೆಗಳಿರುವುದು ಸಹಜವೇ.

ದೊಡ್ಡವರಿಗೆ ಬರುವ ಅನೇಕ ಹೃದಯ ರೋಗಗಳಲ್ಲಿ ಎರಡರ ಬಗ್ಗೆ ಉಲ್ಲೇಖ ಸೂಕ್ತ. ಒಂದು ರ್‍ಯುಮಾಟಿಕ್ ಹೃದಯರೋಗ. ಇದು ಕೀಲುಗಳನ್ನು ಹಿಚುಕಿ, ಹೃದಯವನ್ನು ಕಚ್ಚುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಬಹುಪಾಲು ನಿರ್ಮೂಲನವಾಗಿರುವ ಇದು ಸಣ್ಣ ವಯಸ್ಸಿನವರನ್ನು ಕಾಡುತ್ತದೆ, ಕೊಲ್ಲುತ್ತದೆ. ಇನ್ನೊಂದು ಇಷ್ಕಿಮಿಕ್ ಹೃದಯ ರೋಗ. ಹೃದಯದ ರಕ್ತನಾಳಗಳು ಕಟ್ಟಿಕೊಳ್ಳುವ ಪ್ರಮಾಣ ಅಮೆರಿಕಾ ಯುರೋಪಿಯನ್ನರಿಗೆ ಹೋಲಿಸಿದಲ್ಲಿ ಭಾರತೀಯರಲ್ಲಿ 4 ಪಟ್ಟು ಹೆಚ್ಚು. ಮನುಕುಲದ ಭಾರೀ ದೊಡ್ಡ ಶತ್ರುವಾದ ಇದು, ವರ್ಷಕ್ಕೆ ಕನಿಷ್ಠ 5 ರಿಂದ 7 ಲಕ್ಷ ಜನರನ್ನು ಕೊಲ್ಲುತ್ತದೆ. ದೇಶದ ಶೇ. 85ರಷ್ಟು ಜನರಿಗೆ ಹೃದಯ ಕಸಿ ಶಸ್ತ್ರಚಿಕಿತ್ಸೆಯ ವೆಚ್ಚವನ್ನು ಭರಿಸುವುದು ಸಾಧ್ಯವಿಲ್ಲದಿರುವುದು ಹಾಗೂ ಭಾರತದಲ್ಲಿ ಸಕ್ಕರೆ ಕಾಯಿಲೆಯಿಂದ ನರಳುವವರ ಸಂಖ್ಯೆ ಹೆಚ್ಚಾಗಿರುವುದರಿಂದ ಸಾವಿನ ಪ್ರಮಾಣ ಹೆಚ್ಚಿದೆ. ಸಕ್ಕರೆ ಕಾಯಿಲೆ ಹೃದಯ ರೋಗಿಗಳ ಶುಶ್ರೂಷೆ ಮೇಲೆ ವಿಪರಿಣಾಮ ಬೀರುತ್ತದೆ.

ಅತೀ ಧೂಮಪಾನ, ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣದ ಹೆಚ್ಚಳ, ಕಡಿಮೆ ಪ್ರಮಾಣದಲ್ಲಿ ವಿಟಮಿನ್ ಸಿ ಮತ್ತು ಇ ಸೇವನೆ, ಸಕ್ಕರೆ ಕಾಯಿಲೆ, ರಕ್ತ ಹೆಪ್ಪುಗಟ್ಟಿಸುವ ಅಂಶ (ಫ್ಯಾಕ್ಟರ್ 7)ದ ಕೊರತೆ, ರಕ್ತದ ಒತ್ತಡ ಇವೆಲ್ಲ ಹೃದಯರೋಗಕ್ಕೆ ಕಾರಣವಾಗುವ ಅಂಶಗಳಾಗಿವೆ.

## ಮಕ್ಕಳ ಹೃದಯರೋಗ

ಸೆಕೆಂಡ್ ಒಂದಕ್ಕೆ 1.6 ಮಕ್ಕಳು ಹುಟ್ಟುವ ಈ ದೇಶದಲ್ಲಿ ಅವುಗಳ ಹೃದಯ ರೋಗದ ಇಲಾಜಿಗೆ ಎಷ್ಟು ಜನ ಹಣ ತೆರಬಲ್ಲರು? ದುಃಖದ ಆದರೆ ಸತ್ಯ ಸಂಗತಿಯೆಂದರೆ ಮಕ್ಕಳ ಹೃದಯ ಚಿಕಿತ್ಸೆಗೆ ವೆಚ್ಚ ಮಾಡುವುದಕ್ಕಿಂತ ಇನ್ನೊಂದು ಮಗು ಹುಟ್ಟಿಸುವುದು ಕಡಿಮೆ ವೆಚ್ಚದ ದಂಧೆ.

ಪ್ರಪಂಚದಲ್ಲಿ ಹುಟ್ಟುವ 140 ಮಕ್ಕಳಲ್ಲಿ, 1 ಮಗು ಹೃದಯರೋಗದೊಂದಿಗೆ ಹುಟ್ಟುತ್ತದೆ. ಭಾರತದಲ್ಲಿ ವರ್ಷಕ್ಕೆ 1.5 ಲಕ್ಷ ಮಕ್ಕಳು, ಹೃದಯ ರೋಗದೊಂದಿಗೆ ಹುಟ್ಟಿದರೆ, ಶಸ್ತ್ರ ಚಿಕಿತ್ಸೆ ಕಾಣುವುದು ಕೇವಲ 2000 ಮಾತ್ರ. ಬೆಂಗಳೂರಿನಲ್ಲಿ ಪ್ರತಿ ವರ್ಷ 15000 ಮಕ್ಕಳು ಹೃದಯ ದೋಷದೊಂದಿಗೆ ಹುಟ್ಟಿ, ಬಹುಪಾಲು ಮಕ್ಕಳು ಸಾಯುತ್ತವೆ. 25 ರಾಜ್ಯಗಳಲ್ಲಿ 4 ರಲ್ಲಿ ಮಾತ್ರ ಮಕ್ಕಳ ಚಿಕಿತ್ಸೆಗೆ ಬೇಕಾದ ಸೌಲಭ್ಯಗಳು ಲಭ್ಯವಿದ್ದು, ಉಳಿದ 21 ರಾಜ್ಯಗಳು ಈ ನಾಲ್ಕು ರಾಜ್ಯಗಳನ್ನು ಅವಲಂಬಿಸಬೇಕಾಗಿದೆ. ಮಕ್ಕಳ ಶಸ್ತ್ರಚಿಕಿತ್ಸೆಗೆ ತಗಲುವ ವೆಚ್ಚ ದೊಡ್ಡವರ ಶಸ್ತ್ರಚಿಕಿತ್ಸೆಗೆ ಹೋಲಿಸಿದರೆ ದುಬಾರಿ. ಅನಭಿವೃದ್ಧಿ ಪ್ರದೇಶಗಳಲ್ಲಿ ಶಸ್ತ್ರಚಿಕಿತ್ಸೆಯ ನಂತರದ ಶುಶ್ರೂಷೆ ಅಲಭ್ಯವಿದೆ. ಇದಲ್ಲದೆ ರೋಗಗ್ರಸ್ತ ಮಕ್ಕಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವುದು ಕಷ್ಟ. ಇಡೀ ಪ್ರಪಂಚದಲ್ಲಿ 100ಕ್ಕೂ ಕಡಿಮೆ ಮಕ್ಕಳ ಶಸ್ತ್ರ ಚಿಕಿತ್ಸೆ ಮಾಡಬಲ್ಲ ತಜ್ಞರಿದ್ದಾರೆ. ಬಡತನದೊಂದಿಗೆ ಅಜ್ಞಾನವೂ ಇರುವುದರಿಂದ, 'ನಿಮ್ಮ ಮಗುವಿನ ಹೃದಯದಲ್ಲಿ ರಂಧ್ರವಿದೆ, ಬೆಳೆದಂತೆ ಅದು ಮುಚ್ಚಿ ಹೋಗುತ್ತದೆ' ಎನ್ನುವ ಸಾಮಾನ್ಯ ವೈದ್ಯನ ಉಪದೇಶದಿಂದಾಗಿ, 2ನೇ ಮಹಾಯುದ್ಧದ ಬಾಂಬ್ ಸ್ಫೋಟದಿಂದ ಸತ್ತವರ ಸಂಖ್ಯೆಗಿಂತ ಹೆಚ್ಚು ಮಕ್ಕಳನ್ನು ಹೃದಯರೋಗ ಕೊಂದಿದೆ, ಕೊಲ್ಲುತ್ತಲೂ ಇದೆ.

**ಮಕ್ಕಳ ಹೃದಯಚಿಕಿತ್ಸೆಯಲ್ಲಿ ಕೆಲವು ವಿಶಿಷ್ಟ ಅಪರೂಪದ ಪ್ರಸಂಗಗಳಿವೆ. ಅವುಗಳೆಂದರೆ.**

ತಾಯಿಯ ಭ್ರೂಣದಲ್ಲಿ ಮಗು ಬೆಳೆಯುತ್ತಿದ್ದಾಗ, ಅನೇಕ ಬಗೆಯ ಕೋಶಗಳಿಂದ ಹೃದಯದ ವಿವಿಧ ಭಾಗಗಳು ಬೆಳೆದು, ನಂತರ ಕೂಡಿಕೊಂಡು ಸಾಮಾನ್ಯ ಹೃದಯವಾಗುತ್ತದೆ. ಆದರೆ ಅಪಧಮನಿಯಿಂದ ರಕ್ತ ಹರಿಯುವ ಸಂಪೂರ್ಣ ವೈಪರೀತ್ಯದಲ್ಲಿ (total anomalous pulmonary venous drainage) ಶ್ವಾಸಕೋಶದಿಂದ ಶುದ್ಧ ರಕ್ತವನ್ನು ಹೃದಯಕ್ಕೆ ಸುರಿಯುವ ಎಡಹೃತ್ಕರ್ಣವು ಹೃದಯದೊಡನೆ ಕೂಡಿಕೊಳ್ಳದೆ ಬೇರೆ ಭಾಗವಾಗಿ ಉಳಿದಿರುತ್ತದೆ. ಅದು ಆಗಾಗ್ಗೆ ಸಂಕುಚನಗೊಂಡು, ಅತೀ ಹೆಚ್ಚು ಒತ್ತಡವನ್ನು ಶ್ವಾಸಕೋಶದ ಮೇಲೆ ಹೇರುತ್ತದೆ. ರಕ್ತವನ್ನು ವೈಪರೀತ್ಯವುಳ್ಳ ರಕ್ತನಾಳಗಳ ಮೂಲಕ ಶ್ವಾಸಕೋಶಕ್ಕೆ ಸುರಿಯುವುದರಿಂದ, ಮಗು ತನ್ನದೇ ಸ್ರಾವಗಳಲ್ಲಿ ಮುಳುಗಿ ಹೋಗುವಂತೆ ಮಾಡುತ್ತದೆ. ಶಸ್ತ್ರ ಚಿಕಿತ್ಸೆಯಿಲ್ಲದೆ ಮಕ್ಕಳು ಕೆಲವು

## ಮಣಿಪಾಲ್ ಹೃದಯ ಪ್ರತಿಷ್ಠಾನ (MHF)

ಹೈಟೆಕ್ ಆಸ್ಪತ್ರೆಗಳೆಂದರೆ, ಅವು ವಿಧಿಸುವ ವೆಚ್ಚದ ಬಿಲ್ ನೋಡಿದರೆ, ಗಟ್ಟಿ ಹೃದಯವೇ ಒಡೆದುಹೋಗುತ್ತದೆ. ಆದರೆ ಹೈಟೆಕ್ ಆಸ್ಪತ್ರೆಗಳು ದುಬಾರಿಯಾಗಿರಬೇಕೆಂದಿಲ್ಲ. ಶ್ರೀಮಂತರಿಗೆ ಕಟ್ಟಿಸಿದ ಆಸ್ಪತ್ರೆಯಲ್ಲಿ ಅರ್ಧ ಭಾಗ ಬಡವರಿಗೆ ಮೀಸಲಿಟ್ಟು ಸಮಸ್ಯೆಯನ್ನು ಪರಿಹರಿಸಬಹುದು.

ಮಣಿಪಾಲ್ ಹೃದಯ ಪ್ರತಿಷ್ಠಾನ ಒಂದು ಸಾಮಾಜಿಕ ಕ್ಷೇಮ ಸಂಸ್ಥೆ, ಸೇವೆಯ ದೃಷ್ಟಿಯನ್ನು ಇರಿಸಿಕೊಂಡಿರುವಂತದ್ದು. ಪ್ರಾರಂಭವಾದ 9 ತಿಂಗಳಿನಲ್ಲಿ 10000 ಶಸ್ತ್ರ ಚಿಕಿತ್ಸೆಗಳನ್ನು ಇಲ್ಲಿ ಮಾಡಲಾಗಿದ್ದು, ಅದರಲ್ಲಿ 3000 ಮಕ್ಕಳು ಸೇರಿವೆ. ದೊಡ್ಡವರ ಶಸ್ತ್ರಚಿಕಿತ್ಸೆಗೆ ರೂ. 65,000 ಹಾಗೂ ಮಕ್ಕಳ ಶಸ್ತ್ರಚಿಕಿತ್ಸೆಗೆ ರೂ. 55,000 ಸಂಗ್ರಹಿಸುತ್ತಾರೆ. (ಇದರಲ್ಲಿ ಆಪರೇಷನ್ ನಂತರ ಔಷಧ ವೆಚ್ಚವೂ ಸೇರಿದೆ) ಮೇಲಿನ ಶಸ್ತ್ರಚಿಕಿತ್ಸೆಗಳ ಸಂಖ್ಯೆ ಪ್ರಪಂಚದಲ್ಲೇ ದೊಡ್ಡದು. ಸದ್ಯಕ್ಕೆ ದಿನವೊಂದಕ್ಕೆ ನಡೆಯುವ 10 ಶಸ್ತ್ರಚಿಕಿತ್ಸೆಯಲ್ಲಿ 4 ಮಕ್ಕಳ ಶಸ್ತ್ರ ಚಿಕಿತ್ಸೆ ಆಗಿದ್ದು, ಇದನ್ನು ದಿನವಹಿ 25 ಶಸ್ತ್ರಚಿಕಿತ್ಸೆಗೆ ಏರಿಸಲು ಪ್ರಯತ್ನಗಳು ನಡೆಯುತ್ತಿವೆ. ಏಪ್ರಿಲ್ 98ರಲ್ಲಿ ಕರ್ನಾಟಕದಲ್ಲಿಯೇ ಮೊದಲ ಬಾರಿಗೆ ಅದಲಿ ಬದಲಿ ಹೃತ್ಕುಕ್ಷಿ (TGA) ಶಸ್ತ್ರಚಿಕಿತ್ಸೆಯನ್ನು ಯಶಸ್ವಿಯಾಗಿ ಮಾಡಲಾಗಿದೆ. ಐಸಿಐಸಿಐನ ನೆರವಿನಿಂದ 5 ಶಸ್ತ್ರಚಿಕಿತ್ಸಾ ಥಿಯೇಟರ್‌ಗಳನ್ನು, ಮಕ್ಕಳ ಶಸ್ತ್ರಚಿಕಿತ್ಸೆಗೆ ಅನುವಾಗುವಂತೆ 25 ಐಸಿಯು ಹಾಸಿಗೆಗಳನ್ನು ಸ್ಥಾಪಿಸುವ ಪ್ರಯತ್ನ ನಡೆದಿದೆ. 7.5 ಕೋಟಿ ರೂ.ನ ಈ ಜಂಟಿಯೋಜನೆ ಪ್ರಪಂಚದಲ್ಲೇ ದೊಡ್ಡದು.

ಇಷ್ಟಲ್ಲದೆ, ವಿವಿಧ ಯೋಜನೆಗಳ ಮೂಲಕ ತಿಂಗಳಿಗೆ 2000/- ರೂ.ಗಿಂತ ಕಡಿಮೆ ಸಂಬಳ ತೆಗೆದುಕೊಳ್ಳುವವರಿಗೂ ಶಸ್ತ್ರಚಿಕಿತ್ಸೆಯ ಸೌಲಭ್ಯ ಒದಗಿಸುವುದು. ವೈದ್ಯರ ಹೃದಯ ಕ್ಲಬ್ ಯೋಜನೆಯಲ್ಲಿ 65000 ರೂ. ವೆಚ್ಚದಲ್ಲಿ ಶಸ್ತ್ರ ಚಿಕಿತ್ಸೆ. ಇದನ್ನು ಶಿಕ್ಷಕರು ಹಾಗೂ ಇತರ ಸಂಬಳದ ನೌಕರರಿಗೂ ವಿಸ್ತರಿಸುವ ಯೋಜನೆ ಇದೆ. ಕ್ರಿ.ಶ. 2003ರ ಹೊತ್ತಿಗೆ ಕರ್ನಾಟಕವು ಮಕ್ಕಳ ಹೃದಯ ರೋಗದಿಂದ ಮುಕ್ತವಾಗುವಂತೆ ಮಾಡಲು, ಮಾಹಿತಿ ಸಂಗ್ರಹಿಸಿ, ಯೋಜನೆ ಸಿದ್ಧಗೊಳಿಸಲಾಗುತ್ತಿದೆ. ಕರ್ನಾಟಕದ ಪೊಲೀಸರಿಗೆ ತಿಂಗಳೊಂದಕ್ಕೆ 2 ಸಿಗರೇಟ್ ಪೊಟ್ಟಣದ ವೆಚ್ಚದಲ್ಲಿ ಹೃದಯ ರಕ್ಷಣೆ ಯೋಜನೆಯನ್ನು ರೂಪಿಸಲಾಗಿದೆ.

ಎಂ.ಎಚ್.ಎಫ್‌ನ ಬತ್ತಳಿಕೆಯಲ್ಲಿ ಇನ್ನೂ ಅನೇಕ ಬಾಣಗಳಿವೆ!

ದಿನ ಕೂಡಾ ಬದುಕುವುದಿಲ್ಲ.

**ಅದಲಿ ಬದಲಿ ಹೃತ್ಕುಕ್ಷಿ** (Transposition of Great Arteries)

ಈ ವೈಪರೀತ್ಯದಲ್ಲಿ ಎಡಹೃತ್ಕುಕ್ಷಿ ಬಲಭಾಗದಲ್ಲೂ, ಬಲಹೃತ್ಕುಕ್ಷಿ ಎಡಭಾಗದಲ್ಲೂ ಇರುತ್ತದೆ. ದೇಹದ ಕೆಳಭಾಗದಿಂದ ರಕ್ತ ತರುವ ನೀಚ ಅಭಿಧಮನಿ ಯಕೃತ್ತಿನ ಕೆಳಭಾಗದಲ್ಲಿ ಅಪೂರ್ಣವಾಗಿ, ಅಝಿಗೋಸ್ ಅಭಿಧಮನಿಯೆಂಬ ಬೇರೆ ದಾರಿಯ ಮೂಲಕ ಹೃದಯ ತಲುಪುತ್ತದೆ. ಶುದ್ಧ ಮತ್ತು ಅಶುದ್ಧ ರಕ್ತದ ಮಿಶ್ರಣವಾಗುವಂತೆ ಹೃದಯದಲ್ಲಿ ರಂಧ್ರವೊಂದಿಲ್ಲದೆ ಹೋದರೆ, ಈ ದೋಷವನ್ನುಳ್ಳ ಮಕ್ಕಳು ಹುಟ್ಟಿದ ಕೆಲದಿನದಲ್ಲೇ ಸಾಯುತ್ತವೆ.

ಈ ವೈಪರೀತ್ಯವನ್ನು ಗುಣಪಡಿಸುವುದು ಹಲವು ದಶಕಗಳ ಕಾಲ ನಿಗೂಢವಾಗಿಯೇ ಉಳಿದಿತ್ತು. ಡಾ. ಜಾಡೀನ್ ಮೊದಲ ಶಸ್ತ್ರ ಚಿಕಿತ್ಸೆ ಮಾಡಿದ ನಂತರ ಅದನ್ನು ಈಗ ಮಾದರಿಯಾಗಿ ಬಳಸಿಕೊಳ್ಳಲಾಗುತ್ತಿದೆ. ತುಂಬಾ ಕ್ಲಿಷ್ಟವಾದ ಈ ಶಸ್ತ್ರಚಿಕಿತ್ಸೆಯನ್ನು ಪ್ರಪಂಚದಾದ್ಯಂತ ಕೇವಲ 50 ಆಸ್ಪತ್ರೆಗಳಲ್ಲಿ ಮಾತ್ರ ಮಾಡಲಾಗುತ್ತದೆ. ಇಲ್ಲಿಯ ತನಕ 2000 ಮಕ್ಕಳ ಮೇಲೆ ಯಶಸ್ವಿಯಾಗಿ ಈ ಶಸ್ತ್ರ ಚಿಕಿತ್ಸೆ ನಡೆದಿದೆ.

**ಎರಡು ಜಂಟಿ ದೋಷಗಳು**

(ಡೆಟ್ರಾಲಜಿ ಆಫ್ ಫ್ಯಾಲೋ ಮತ್ತು ಹೆಮೋಫಿಲಿಯಾ) ಡೆಟ್ರಾಲಜಿ ಆಫ್ ಪ್ಯಾಲೋ ಇರುವ ಮಗುವಿಗೆ ನೀಲಿ ಮಗು ಎನ್ನುತ್ತಾರೆ. ಹೆಮೋಫಿಲಿಯಾ ಎನ್ನುವುದು ರಷ್ಯಾದ ಝಾರ್ ಒಬ್ಬನ ಹೆಸರು. ಹೆಮೋಫಿಲಿಯಾ ಇದ್ದವನಿಗೆ ಗಾಯವಾದಲ್ಲಿ ರಕ್ತ ಸುರಿಯುವುದು ನಿಲ್ಲುವುದಿಲ್ಲ, ಕೆಲವೊಮ್ಮೆ ರಕ್ತ ನಿಲ್ಲದೆ ರೋಗಿ ಸಾಯಬಹುದು ಕೂಡಾ. ಫ್ಯಾಕ್ಟರ್ 7ರ ಅವಿಷ್ಕಾರದ ನಂತರ ಈ ದೋಷವುಳ್ಳವರು ಬದುಕುವಂತಾಗಿದೆ. ಫ್ಯಾಕ್ಟರ್ 7ನ್ನು ರಕ್ತದಿಂದ ವಿಶ್ಲೇಷಿಸಿ, ತಿಂಗಳುಗಟ್ಟಲೆ ಶೇಖರಿಸಿಡಬಹುದು. ಯಾವುದೇ ಗಾಯವಾದಲ್ಲಿ, ರೋಗಿಗೆ ರಕ್ತ ಪೂರಣದ ಮೂಲಕ ರೋಗಿಯ ಶರೀರಕ್ಕೆ ಸೇರಿಸಬಹುದು. ತುಂಬಾ ದುಬಾರಿಯಾದ ಇದನ್ನು ಹೆಮೋಫಿಲಿಯಾ ಸೊಸೈಟ ಕಡಿಮೆ ಬೆಲೆಯಲ್ಲಿ ಪೂರೈಸುತ್ತದೆ.

ಮೇಲಿನ ಜಂಟಿದೋಷಗಳಿರುವ 4 ಮಕ್ಕಳಿಗೆ ಮಾತ್ರ ಇಲ್ಲಿಯತನಕ ಯಶಸ್ವಿಯಾಗಿ ಶಸ್ತ್ರ ಚಿಕಿತ್ಸೆ ಮಾಡಲಾಗಿದೆ.

**ಏನು ಮಾಡಬೇಕು?**

ಸೃಷ್ಟಿಯ ಸುಂದರ ಹೂವುಗಳಾದ ಮಕ್ಕಳನ್ನು ಹೃದಯರೋಗದಿಂದ ಬದುಕಿಸಲು ಮುಖ್ಯವಾಗಿ ನಮ್ಮ ದೃಷ್ಟಿಕೋನ ಬದಲಾಗಬೇಕು. ವಂಶವಾಹಿಗಳ ದೋಷದಿಂದ ಮಕ್ಕಳು ಹುಟ್ಟುವ ಮೊದಲೇ ಜೆನೆಟಿಕ್ ಕೌನ್ಸಲಿಂಗ್ ಅನ್ನು ತಂದೆ ತಾಯಿ ಪಡಕೊಳ್ಳಬೇಕು. ಯೂನಿಸೆಫ್ ಮಕ್ಕಳ ಹೃದಯರೋಗವನ್ನು ಒಂದು ಸಮಸ್ಯೆ ಎಂದು ಪರಿಗಣಿಸಿಲ್ಲ. ಇದನ್ನು ಬದಲಾಯಿಸಲು ಒತ್ತಡ ಹೇರಬೇಕು. ಮಕ್ಕಳ ಹೃದಯ ಶಸ್ತ್ರಚಿಕಿತ್ಸೆಯನ್ನು ನಡೆಸುವ ಆಸ್ಪತ್ರೆಗಳಿಗೆ ಸರ್ಕಾರವು ವಿಶೇಷ ಸವಲತ್ತು ನೀಡಬೇಕು. ರಾಷ್ಟ್ರಮಟ್ಟದಲ್ಲಿ ಹಾಗು ರಾಜ್ಯಮಟ್ಟದಲ್ಲಿ ಮಕ್ಕಳ ಹೃದಯರೋಗ ಕುರಿತು ಮಾಹಿತಿ ಸಂಗ್ರಹಿಸಿ, ಡೇಟಾಬೇಸ್ ಸೃಷ್ಟಿಸಿ, ಅದಕ್ಕನುಗುಣವಾಗಿ ಕಾರ್ಯನೀತಿಯೊಂದನ್ನು ರೂಪಿಸಬೇಕು. ಪ್ರಧಾನಿಗಳ ನಿಧಿ (PM FUND) ಹಾಗು ಸರ್ಕಾರದ ವಿಶೇಷ ನಿಧಿಗಳ ಮೂಲಕ ಪೋಷಕರಿಗೆ ಧನಸಹಾಯ ಮಾಡಬೇಕು. ಕಲ್ಕತ್ತಾದಲ್ಲಿ 3 ಮಹಿಳೆಯರು ನಡೆಸುತ್ತಿರುವ ಸೊಸೈಟಿ ಫಾರ್ ಇಂಡಿಯನ್ ಚಿಲ್ಡ್ರನ್ಸ್ ವೆಲ್‌ಫೇರ್ 200 ಮಕ್ಕಳ ಶಸ್ತ್ರಚಿಕಿತ್ಸೆಗೆ ಹಣ ಸಂಗ್ರಹಿಸಿ ನೆರವು ನೀಡಿದೆ. ಇದನ್ನು ರೋಟರಿ, ಲಯನ್ ಸಂಸ್ಥೆಗಳು ಮಾಡಬೇಕು. ಮಕ್ಕಳಿಗೆ ಸಹಾಯ ಮಾಡಲೇಬೇಕೆನ್ನುವ ಆಸ್ಪತ್ರೆಗೆ ಹಣವನ್ನು ಹೊಂದಿಸುವುದು ಕಷ್ಟವಲ್ಲ. ದೃಢ ನಿರ್ಧಾರವಿರಬೇಕು, ಅಷ್ಟೆ.

ಭಾರತಕ್ಕೆ ಕನಿಷ್ಟ 100 ಮಕ್ಕಳ ಹೃದಯ ರೋಗದ ಆಸ್ಪತ್ರೆಗಳ ಅವಶ್ಯಕತೆ ಇದೆ. ಹೃದಯ ರೋಗಿ (ದೊಡ್ಡವರು ಅಥವಾ ಮಕ್ಕಳು) ಒಮ್ಮೆಗೇ ಸಾಯುವುದಿಲ್ಲ. ಅವರನ್ನು ಮತ್ತೆ ಮತ್ತೆ ಆಸ್ಪತ್ರೆಗೆ ಸೇರಿಸಬೇಕಾಗುತ್ತದೆ. ಔಷಧಗಳಿಗೆ ಹಣ ಸುರಿಯಬೇಕಾಗುತ್ತದೆ. ಶಸ್ತ್ರ ಚಿಕಿತ್ಸೆ ತಡೆಯಲು ಇದು ಸೂಕ್ತ ದಾರಿಯಲ್ಲ, ಇದು ಸಾವನ್ನು ತಪ್ಪಿಸುವುದಿಲ್ಲ. ಶಸ್ತ್ರ ಚಿಕಿತ್ಸೆ ಅನಿವಾರ್ಯವೆಂದಲ್ಲಿ, ಅದನ್ನು ಮಾಡಿಸುವುದು ಸೂಕ್ತ.

ಬದುಕನ್ನು ಪ್ರೀತಿಸುವ ಮನುಷ್ಯನಿಗೆ ಸಾವು ಅನಪೇಕ್ಷಣೀಯ, ಆದರೆ ಸಾವು ಅನಿವಾರ್ಯ. ಅದನ್ನು ಸರಿಯಾದ ರೀತಿ ಎದುರಿಸಬೇಕು. ಪ್ರೀತಿಸು, ಜೀವಿಸು. ■

## ನಗೆ ಹನಿ

ರೀ....... ನಿಮ್ಮ ಮಗ ಕ್ರಿಕೆಟ್ ಆಡ್ತಿರುವಾಗ ನಮ್ಮ ಮನೆ ಕಿಟಕಿ ಗಾಜುಗಳನ್ನೆಲ್ಲಾ ಒಡೆದು ಚೂರು ಚೂರು ಮಾಡಿದ್ದಾನೆ.

ಅಯ್ಯೋ ಪಾಪ ಏನು ಮಾಡೋದು ಅವನು 'ಸ್ವಲ್ಪ' ಹುಚ್ಚನಿದ್ದಾನೆ.

ಹಾಗಾದರೆ ಆತ ನಿಮ್ಮ ಮನೆ ಕಿಟಕಿ ಗಾಜುಗಳನ್ನು ಒಡೆದಿಲ್ಲವಲ್ಲಾ!

ನನ್ನ ಮಗ 'ಅಷ್ಟೊಂದು' ಹುಚ್ಚ ಇಲ್ಲಾರಿ.

-ರಾಜಶ್ರೀ ವಿನಾಯಕ ಗುಮಾಸ್ತೆ, ಕೊಪ್ಪಳ.





# ವಯಸ್ಕರಿಗಾಗಿ

■ ಡಾ. ವಸುಂಧರಾ ಭೂಪತಿ

## ತೂಕ ಎಷ್ಟಿರಬೇಕು?



ನಾನು 55 ವರ್ಷದ ವಿವಾಹಿತ ಮಹಿಳೆ. ನಾನು ಹೆಚ್ಚು ದಪ್ಪವೂ ಇಲ್ಲ, ತೆಳುವೂ ಇಲ್ಲ. ನನ್ನ ತೂಕ 45 ಕೆ.ಜಿ. ನಾನು ಕೃಷಿ ಕೆಲಸ ಮಾಡುತ್ತೇನೆ. ಆರೋಗ್ಯವಂತ ಮಹಿಳೆ ಎನಿಸಬೇಕಾದರೆ 55ನೇ ವಯಸ್ಸಿನಲ್ಲಿ ತೂಕ ಎಷ್ಟಿರಬೇಕು? ತೂಕ ಹೆಚ್ಚಿದ್ದರೆ ಏನು ಮಾಡಬೇಕು, ಕಡಿಮೆ ಇದ್ದರೆ ಏನು ಮಾಡಬೇಕು?

-ಸೀತಾ, ಬೆಂಗಳೂರು

ಸಲಹೆ

**ತೂಕ ಹೆಚ್ಚಿರಲಿ, ಕಡಿಮೆ ಇರಲಿ ಆರೋಗ್ಯವಂತರಾಗಿರುವುದು ಬಹಳ ಮುಖ್ಯ. ನಿಮ್ಮ ಎತ್ತರದ ಬಗ್ಗೆ ತಿಳಿಸಿಲ್ಲ. ಎತ್ತರದ ಹಾಗೂ ವಯಸ್ಸಿಗೆ ಅನುಗುಣವಾಗಿ ಎಷ್ಟಿರಬೇಕೆಂದು ತಿಳಿಸಬಹುದಿತ್ತು. ಯಾವುದೇ ಕಾಯಿಲೆಗಳಿಲ್ಲದೇ ಸಮಯಕ್ಕೆ ಸರಿಯಾಗಿ ಆಹಾರ ಸೇವನೆ, ನಿದ್ರೆ, ಚಟುವಟಿಕೆಯ ಜೀವನ ಮತ್ತು ಮಾನಸಿಕ ನೆಮ್ಮದಿಯಿದ್ದರೆ ಸಾಕು.**

## ಯಾರ ಮಗು?



ನಾನು 20 ವರ್ಷದ ಯುವಕ. ನನ್ನ ಚಿಕ್ಕಮ್ಮನಿಗೆ ಮದುವೆಯಾಗಿ 10 ವರ್ಷಗಳಾದರೂ ಮಕ್ಕಳಾಗಲಿಲ್ಲ. ಅವಳಿಗೆ ಈಗ 33 ವರ್ಷ. ಅವಳು, ನಾನು ಬೇಡವೆಂದರೂ ನನ್ನ ಜೊತೆ ಬಲವಂತದಿಂದ ಲೈಂಗಿಕ ಸಂಪರ್ಕ ಬೆಳೆಸಿದಳು. ನನ್ನ ಜೊತೆ ಸಂಪರ್ಕ ಬೆಳೆಸಿದ ಒಂದೇ ವರ್ಷದಲ್ಲಿ ಅವಳು ಗರ್ಭಿಣಿಯಾದಳು. ಈಗ ಗಂಡು ಮಗುವಿಗೆ ಜನ್ಮ ನೀಡಿದ್ದಾಳೆ. ಮಗು ನೋಡಲು ನನ್ನ ಹಾಗೇ ಇದೆ. ಇದು ಅವಳ ಗಂಡನದೋ, ನನ್ನದೋ? ಇದರಿಂದ ನನಗೆ ಏನಾದರೂ ತೊಂದರೆ ಇದೆಯೋ?

- ವೈ.ಬಿ., ಊರು ಬೇಡ.

ಸಲಹೆ

**ನಿಮ್ಮ ಚಿಕ್ಕಮ್ಮ ನಿಮ್ಮೊಂದಿಗೆ ಲೈಂಗಿಕ ಸಂಪರ್ಕ ಹೊಂದಿದ್ದು ಬಹಳ ದೊಡ್ಡ ತಪ್ಪು. ಆ ಮಗು ನಿಮ್ಮದೋ, ಆಕೆಯ ಗಂಡನದೋ ಎಂಬ ಯೋಚನೆ ಸಲ್ಲದು. ನೀವು ಈಗಿನಿಂದಲೇ ಸಂಪರ್ಕ ತೊರೆದರೆ ನಿಮಗೆ ಯಾವ ವಿಧದ ತೊಂದರೆಯೂ ಉಂಟಾಗುವುದಿಲ್ಲ. ಸಂಬಂಧ ಮುಂದುವರೆಸಿದರೆ ಮಾತ್ರ ಖಂಡಿತ ಎಲ್ಲ ರೀತಿಯ ತೊಂದರೆಗಳು ಉಂಟಾಗುತ್ತದೆ.**

## ಭಾರ ಸ್ತನಗಳು



ನಾನು 21 ವರ್ಷದ ವಿವಾಹಿತ ಹುಡುಗಿ. ನನ್ನ ಸಮಸ್ಯೆ ಏನೆಂದರೆ ನನ್ನ ಸ್ತನಗಳು ದೊಡ್ಡವಿವೆ. ದಿನಾಲೂ ಬ್ರಾ ಉಪಯೋಗಿಸುತ್ತಿದ್ದೇನೆ. ಆದರೂ ಎದೆ ಭಾರವಾಗುತ್ತದೆ. ಅವುಗಳನ್ನು ಸಣ್ಣಗೆ ಮಾಡಿಕೊಳ್ಳಲು ಏನು ಮಾಡಬೇಕು?

-ಹೆಸರು, ಊರು ಬೇಡ.





ಸಲಹೆ

**ಬೆಂಗಳೂರಿನಲ್ಲಿರುವ ಮಣಿಪಾಲ, ಮಲ್ಯದಂತಹ ಕೆಲವು ಹೈಟೆಕ್ ಆಸ್ಪತ್ರೆಗಳಲ್ಲಿ ತಜ್ಞ ವೈದ್ಯರು ಶಸ್ತ್ರಚಿಕಿತ್ಸೆಯ ಮೂಲಕ ಕೊಬ್ಬಿನಂಶ ತೆಗೆದು ಸ್ತನಗಳನ್ನ ಚಿಕ್ಕದಾಗಿಸುತ್ತಾರೆ. ಆದರೆ ಅದು ಬಹಳ ದುಬಾರಿ ಶಸ್ತ್ರ ಚಿಕಿತ್ಸೆ. ನೀವು ಸ್ತನಗಳ ಗಾತ್ರದ ಬಗ್ಗೆ ಚಿಂತಿಸದೇ ಇದ್ದರೆ ಅದಕ್ಕಿಂತ ಚಿಕಿತ್ಸೆ ಬೇರೊಂದಿಲ್ಲ.**

## ಸ್ತನಗಳಲ್ಲಿ ಗಡ್ಡೆ

ನಾನು 17 ವರ್ಷದ ಯುವತಿ. ಪಿ.ಯು.ಸಿ. ಓದುತ್ತಿದ್ದೇನೆ. ಸುಮಾರು 5 ವರ್ಷಗಳಿಂದ ನನ್ನ



ಎರಡೂ ಸ್ತನಗಳು ಗಟ್ಟಿಯಾಗಿವೆ. ಬಲಗಡೆ ಸ್ತನದಲ್ಲಿ ಗಡ್ಡೆ ಇದೆ. ಇನ್ನುಳಿದ ಭಾಗವನ್ನು ಹಿಚುಕಿದರೆ ಬಿಲ್ಲೆ ಥರ ಬಾಗುತ್ತದೆ. ಆಸ್ಪತ್ರೆಯಲ್ಲಿ ತೋರಿಸಿದರೆ ಸ್ತನದ ಗಡ್ಡೆಯನ್ನು ಆಪರೇಷನ್ ಮಾಡಬೇಕು ಎಂದು ಹೇಳುತ್ತಾರೆ. ಅಲ್ಲದೆ ಭಾರ ಎತ್ತದಿರಲು, ಸ್ಪಂಜ್‌ನ ಬ್ರಾ ಧರಿಸಲು ಸಲಹೆ ನೀಡಿದರು. ಕೆಲವು ಮಾತ್ರೆಗಳನ್ನು ನೀಡಿದ್ದಾರೆ. ಬಲಸ್ತನದ ಗಡ್ಡೆಯಲ್ಲಿ ಆಗಾಗ ಸ್ವಲ್ಪ ನೋವು ಕಾಣಿಸುತ್ತದೆ. ಪುಸ್ತಕವೊಂದರಲ್ಲಿ ಓದಿದಂತೆ ಇದು ಸ್ತನ ಕ್ಯಾನ್ಸರ್ ಇರಬಹುದೇ? ಇದಕ್ಕೆ ಆಪರೇಷನ್ ಒಂದೇ ಪರಿಹಾರವೇ? ಮಾತ್ರೆ ಮೂಲಕ ಕರಗಿಸಲು ಸಾಧ್ಯವಿಲ್ಲವೇ? ನನ್ನ ಜೀವನ ನೀವು ಕೊಡುವ ಸಲಹೆಯ ಮೇಲೆ ನಿಂತಿದೆ.

-ಹೆಸರು, ಊರು ಬೇಡ.

ಸಲಹೆ

**ಸ್ತನದಲ್ಲಿನ ಗಡ್ಡೆಗೆ ಶಸ್ತ್ರಚಿಕಿತ್ಸೆಯೇ ಮದ್ದು. ಮಾತ್ರೆಗಳ ಮೂಲಕ ಕರಗಿಸಲು ಖಂಡಿತ ಸಾಧ್ಯವಿಲ್ಲ. ಈಗಲೇ ನೀವು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು ಒಳ್ಳೆಯದು. ಇನ್ನು ಕ್ಯಾನ್ಸರ್ ಇದೆಯೋ ಇಲ್ಲವೋ ಎಂಬುದು 'ಬಯಾಪ್ಸಿ' ಮಾಡಿದ ನಂತರವೇ ತಿಳಿಯುತ್ತದೆ. ಕ್ಯಾನ್ಸರಿನದೇ ಎಂದು ಚಿಂತಿಸಬೇಕಾದುದಿಲ್ಲ. ಕ್ಯಾನ್ಸರ್ ಇಲ್ಲದೆಯೂ ಗಡ್ಡೆ ಉಂಟಾಗುವ ಸಾಧ್ಯತೆ ಇರುತ್ತದೆ.**

## ಗಂಡು ದೇವದಾಸಿಯರಿಂದ ಏಡ್ಸ್?



ನಾನು ನನ್ನ ಮೊದಲ ಲೈಂಗಿಕ ಸಂಪರ್ಕವನ್ನು ಗಂಡು ದೇವದಾಸಿಯೊಂದಿಗೆ ಮಾಡಿದ್ದೇನೆ. ಆಗ ನನ್ನ ಜನನಾಂಗದಲ್ಲಿ ಗುಳ್ಳೆಗಳು ಕಾಣಿಸಿಕೊಂಡವು. ಚರ್ಮರೋಗ ತಜ್ಞರ ಉಪಚಾರದಿಂದ ಅವು ವಾಸಿಯಾದವು. ಈಗ ನನ್ನ ಬಲ ಭಾಗದ ವೃಷಣ ಊದಿದೆ. ಇದು ಏಡ್ಸ್ ಲಕ್ಷಣವೇ? ನಾನು ಒಂದೇ ಒಂದು ಬಾರಿ ಗಂಡು ದೇವದಾಸಿಯೊಂದಿಗೆ ಸಮಾಗಮ ಮಾಡಿದ್ದರೂ ಏಡ್ಸ್ ಬಂದಿರುವ ಸಾಧ್ಯತೆಯಿದೆಯೇ?

- ಎಕ್ಸ್.ವೈ.ಜೆಡ್., ಹೊಸಪೇಟೆ

ಸಲಹೆ

**ವೃಷಣ ಊದಿರುವುದು ಏಡ್ಸ್‌ನ ಲಕ್ಷಣವಲ್ಲ. ಅದಕ್ಕೆ ಬೇರೆ ಕಾರಣಗಳಿರಬಹುದು. ನೀವು ಒಂದು ಬಾರಿ ವೈದ್ಯರನ್ನು ಸಂಪರ್ಕಿಸಿ ಚಿಕಿತ್ಸೆ ಪಡೆದುಕೊಳ್ಳಿ.**

ಒಂದೇ ಬಾರಿ ಸಮಾಗಮ ಮಾಡಿದ್ದರೂ ಆ ಗಂಡು ದೇವದಾಸಿಗೆ ಹೆಚ್.ಐ.ವಿ. ಏಡ್ಸ್ ಸೋಂಕು ತಗುಲಿದ್ದರೆ ಅದು ನಿಮಗೂ ತಗುಲಿರುವ ಸಾಧ್ಯತೆ ಇರುತ್ತದೆ. ಯಾವುದಕ್ಕೂ ಒಂದು ಬಾರಿ ರಕ್ತ ಪರೀಕ್ಷೆ ಮಾಡಿಸಿ ಹೆಚ್.ಐ.ವಿ. ಸೋಂಕು ತಗುಲಿದೆಯೇ ಇಲ್ಲವೋ ದೃಢ ಪಡಿಸಿಕೊಳ್ಳಿ, ನೆಗೆಟಿವ್ ಬಂದರೆ ಮತ್ತೆ ಒಂದು ತಿಂಗಳು ಬಿಟ್ಟು ಪುನಃ ರಕ್ತ ಪರೀಕ್ಷೆ ಮಾಡಿಸಿ. ಆಗಲೂ ನೆಗೆಟಿವ್ ಬಂದರೆ ನಿಮಗೆ ಸೋಂಕು ತಗಲಿಲ್ಲ ಎನ್ನುವುದು ಖಚಿತವಾಗುತ್ತದೆ. ಇನ್ನು ಮುಂದೆಯಾದರೂ ಸೋಂಕು ತಗುಲದಂತೆ ಎಚ್ಚರವಹಿಸಿ.

## ಭೀಕರ ಕಾಯಿಲೆ!



ಹಸ್ತ ಮೈಥುನದ ನಂತರ ಹೊರಬರುವ ವೀರ್ಯದಲ್ಲಿ ಸಾಸಿವೆ ಕಾಳಿನಷ್ಟು ಗಟ್ಟಿ ಕಣಗಳು ಇರುತ್ತವೆ. ನನಗೆ ಯಾವುದಾದರೂ ಭೀಕರ ಕಾಯಿಲೆ ಬಂದಿರಬಹುದು ಎಂಬ ಅನುಮಾನ ಶುರುವಾಗಿದೆ. ಪರಿಹಾರ ಸೂಚಿಸಿ.

-ರಾಜು, ಚಿಕ್ಕಬಳ್ಳಾಪುರ.

*ಸಲಹೆ*

ಸಾಮಾನ್ಯವಾಗಿ ವೀರ್ಯದೊಡನೆ ಅಂತಹ ಯಾವುದೇ ಗಟ್ಟಿಕಣಗಳು ಬರುವುದಿಲ್ಲ. ನೀವು ಒಂದು ಬಾರಿ ವೈದ್ಯರನ್ನು ಭೇಟಿಯಾಗಿ ವೀರ್ಯ ಪರೀಕ್ಷೆ ಮಾಡಿಸುವುದೊಳ್ಳೆಯದು.

## ಮೊಲೆ ಹಾಲಿನ ಬಯಕೆ



ನಾನು ಒಬ್ಬ ಉಪಾಧ್ಯಾಯಿನಿ. ನಮ್ಮದು ಅಂತರ್ಜಾತಿಯ ಪ್ರೇಮ ವಿವಾಹ. ನನ್ನ ಗಂಡ ವ್ಯಾಪಾರ ಮಾಡುತ್ತಾರೆ. ಅವರು ನನ್ನನ್ನು ತುಂಬಾ ಪ್ರೀತಿಸುತ್ತಾರೆ. ಆದರೆ ಮದುವೆಯಾಗಿ 5 ವರ್ಷಗಳಾದರೂ ನಮಗೆ ಮಕ್ಕಳಾಗಿಲ್ಲ. ಅವರು ಒಬ್ಬ ಅನಾಥ. ತಂದೆ-ತಾಯಿಯರ ಪ್ರೀತಿಯನ್ನು ಅವರು ಅನುಭವಿಸಿಯೆ ಇಲ್ಲ. ತಾನು ತಾಯಿ ಹಾಲು ಕುಡಿದಿಲ್ಲ ಎಂದು ಹೇಳಿ ಅಳುತ್ತಾರೆ. ಜತೆಗೆ ಮಕ್ಕಳಿಲ್ಲದ ಕೊರಗು ಬೇರೆ. ಅವರು ತುಂಬಾ ಸೆಕ್ಸಿ. ಅವರು ಪ್ರತಿ ದಿನ ಕೊಡುವ 'ಕಿಸ್'ಗಳಿಗೆ ಲೆಕ್ಕವಿಲ್ಲ. ರಾತ್ರಿ ಬ್ಲೌಸ್ ಇಲ್ಲದೆ ಬ್ರಾ ಮೇಲೆ ಮಲಗಲು ಹೇಳುತ್ತಾರೆ. ತಾಯಿ ಮಗುವಿಗೆ ಹಾಲು ಕುಡಿಸುವಂತೆ ನನಗೆ ಎದೆ ಹಾಲು ಕುಡಿಸು ಎಂದು ಕಾಡುತ್ತಾರೆ. ಏನು ಮಾಡಲಿ?

- ಶಿಕ್ಷಕಿ, ಧಾರವಾಡ.

*ಸಲಹೆ*

ನಿಮಗೆ ಮಕ್ಕಳಾಗದಿರುವುದಕ್ಕೆ ಕಾರಣ ಏನೆಂಬುದನ್ನು ತಿಳಿದುಕೊಳ್ಳಲು ಪ್ರಸೂತಿ ಹಾಗು ಸ್ತ್ರೀರೋಗ ತಜ್ಞ (ಗೈನಕಾಲಜಿಸ್ಟ್) ಬಳಿ ಪರೀಕ್ಷಿಸಿ ಚಿಕಿತ್ಸೆ ಪಡೆದುಕೊಳ್ಳಿ. ಚಿಕಿತ್ಸೆಗೆ ದಂಪತಿಗಳಿಬ್ಬರೂ ಹೋಗಬೇಕು. ನಿಮ್ಮ ಪತಿಗೆ ತಾವು ಅನಾಥ ಎಂದು ಕೊರಗುವುದನ್ನು ಬಿಟ್ಟುಬಿಡಲು ಹೇಳಿ. ಈಗ ಜೊತೆಯಾಗಿ ನೀವು ಇದ್ದೀರಲ್ಲ. ಸೆಕ್ಸ್‌ನಲ್ಲಿ ಅವರ ಇಷ್ಟದಂತೆ ನೀವು ಸಹಕರಿಸಿ. ಅವರಿಗೆ ಮಾನಸಿಕ ನೆಮ್ಮದಿ ಇಲ್ಲದೇ 'ಖಿನ್ನತೆ' ಆವರಿಸಿದ್ದರೆ ಒಂದು ಬಾರಿ ಮನಶಾಸ್ತ್ರಜ್ಞರ ಬಳಿ ಕರೆದೊಯ್ದು ಸಲಹೆ ಪಡೆಯಿರಿ. ಅದೆಲ್ಲಕ್ಕಿಂತ ನಿಮಗೊಂದು ಮಗುವಾದರೆ, ಮಗುವಿನ ಲಾಲನೆ ಪಾಲನೆಯಲ್ಲಿ ಅವರ ಕೊರಗು ಖಂಡಿತ ಮರೆಯಾಗುತ್ತದೆ.

## ಕುಡಿತದಿಂದ ಏಡ್ಸ್ ಬರುವುದೇ?



ಲೈಂಗಿಕ ಸಂಪರ್ಕದಿಂದ ಏಡ್ಸ್ ಬರುತ್ತದೆಂದು ತಿಳಿಸಿದ್ದೀರಿ. ಕುಡಿತ, ಬೀಡಿ-ಸಿಗರೇಟು ಸೇವನೆಯಿಂದಲೂ ಏಡ್ಸ್ ಬರುತ್ತದೆಯೇ? ದಯವಿಟ್ಟು ತಿಳಿಸಿ.

-ಹೆಸರು ಬೇಡ, ಊರುಬೇಡ.

*ಸಲಹೆ*

ಕುಡಿತ, ಬೀಡಿ- ಸಿಗರೇಟು ಸೇವನೆಯಿಂದ ಏಡ್ಸ್ ಬರುವುದಿಲ್ಲ ನಿಜ. ಆದರೆ ಕುಡಿತದ ಚಟಕ್ಕೊಳಗಾದ ಮನುಷ್ಯ ಭ್ರಮಾಧೀನನಾಗಿ ಲೈಂಗಿಕ ಸಂಪರ್ಕಕ್ಕೆ ಹಾತೊರೆಯುತ್ತಾನೆ. ಹಾಗಾಗಿ ವೇಶ್ಯೆಯರ ಸಂಪರ್ಕ ಮಾಡುತ್ತಾನೆ. ಅದರಿಂದ ಏಡ್ಸ್ ಬರಬಹುದು.

## ಎದೆಯ ಮೇಲೆ ಕೂದಲು



ನಾನು 18 ವರ್ಷದ ಯುವತಿ. ಕಳೆದ 4 ವರ್ಷಗಳಿಂದ ನನ್ನ ಎರಡೂ ಎದೆಗಳ ಮೇಲೆ ಕೂದಲು ಬೆಳೆಯುತ್ತಿದೆ. ನಾನು ಅವುಗಳನ್ನು ಪ್ಲಕ್ಕರ್‌ನಿಂದ ತೆಗೆಯುತ್ತೇನೆ. ಆದರೆ ಅವು ಮತ್ತೆ ಮತ್ತೆ ಬೆಳೆಯುತ್ತವೆ. ಈ ತೊಂದರೆ ನಿವಾರಣೆ ಮಾಡುವ ಮಾರ್ಗವನ್ನು ಸೂಚಿಸಿರಿ. ನಿಮ್ಮ ಈ ಅಂಕಣದಿಂದ ಹೇಳಿಕೊಳ್ಳದೆ ಕೊರಗುತ್ತಿದ್ದ ನನ್ನಂತಹ ಎಷ್ಟೋ ಜನರಿಗೆ ಉಪಕಾರವಾಗುತ್ತಿದೆ ಅದಕ್ಕಾಗಿ ಧನ್ಯವಾದಗಳು.

-ವಾಣಿ, ಊರು ಬೇಡ.

*ಸಲಹೆ*

ಕೆಲವರಲ್ಲಿ ಹಾರ್ಮೋನಿನ ವ್ಯತ್ಯಾಸದಿಂದಾಗಿ ಎದೆಯ ಮೇಲೆ ಕೂದಲು ಬೆಳೆಯುತ್ತದೆ. ಅದನ್ನು ಪ್ಲಕ್ಕರ್‌ನಿಂದ ಕೀಳುವುದು ತಪ್ಪು. ಅದನ್ನು ಪ್ಲಕ್ಕರ್‌ನಿಂದ ಕಿತ್ತರೆ ಮತ್ತೆ ಇನ್ನೂ ರಭಸವಾಗಿ ಬೆಳೆಯಲಾರಂಭಿಸುತ್ತದೆ. ಪ್ರತಿದಿನ ಅರಿಶಿನ ಪುಡಿಯಿಂದ ಕೂದಲಿರುವ ಜಾಗದಲ್ಲಿ ಉಜ್ಜಿ ಸ್ನಾನ ಮಾಡುವುದರಿಂದ ಕೂದಲು ಬೆಳೆವಣಿಗೆ ಕುಂಠಿತವಾಗುವುದಲ್ಲದೇ ನಿಧಾನವಾಗಿ ಕೂದಲೂ ಉದುರುತ್ತದೆ. ಅಲ್ಲದೇ ಅದರ ಬಗ್ಗೆ ಹೆಚ್ಚು ಯೋಚಿಸಬೇಡಿ.

## ಸಂರಕ್ಷದಲ್ಲಿ ಹಿಡಿದಿಡುವರೇ?



ಡಾಕ್ಟ್ರೇ, ನೀವು ಎಚ್.ಐ.ವಿ. ಬಗ್ಗೆ, ಏಡ್ಸ್ ಬಗ್ಗೆ-ಮಾಹಿತಿ ನೀಡಿ ನಮ್ಮ ಸಮಸ್ಯೆಗೆ ಉತ್ತರಿಸಿದಕ್ಕೆ ಥ್ಯಾಂಕ್ಸ್. ಆದರೆ ನಾವು ಫ್ರೀಡಂ ಫೌಂಡೇಶನ್ ಅಥವಾ ಸಂರಕ್ಷೆ ಸಂಸ್ಥೆಗಳಿಗೆ ಹೋದಾಗ ನಮಗೆ ಸಲಹೆ ಸೂಚನೆ ನೀಡಿ ವೈದ್ಯೋಪಚಾರ ಮಾಡಿಸಿ ನಮ್ಮನ್ನು ಬಿಡುತ್ತಾರೆಯೋ ಅಥವಾ ನಾವು ಅಲ್ಲಿಯೇ ಇರಬೇಕಾಗುತ್ತದೆಯೋ? 15-20 ದಿನಕ್ಕೊಮ್ಮೆ ವೈದ್ಯೋಪಚಾರಕ್ಕೆ ಹೋಗಿ ನಿಯಮಿತವಾಗಿ ಅವರು ತಿಳಿಸಿದ ಹಾಗೆ ಮಾಡಿ ನಮ್ಮ ಊರಲ್ಲೆ ನಮ್ಮ ಕೆಲಸ ಮಾಡಿಕೊಂಡು ಹೋಗಬಹುದೇ?

ಕೆಲವರು ಅಲ್ಲಿಗೆ ಹೋದರೆ ಬಿಡುವುದೇ ಇಲ್ಲ ಎಂದು ಹೇಳುತ್ತಿದ್ದಾರೆ. ನಿಜವೆ? ಅದರ ಬಗ್ಗೆ ಸಂಪೂರ್ಣವಾಗಿ ಉತ್ತರಿಸಿರಿ.

-ಅಭಿಮಾನಿ, ಊರುಬೇಡ.

*ಸಲಹೆ*

ನಿಮಗೆ ಈ ಸಂಸ್ಥೆಗಳ ಬಗ್ಗೆ ಸರಿಯಾಗಿ ತಿಳಿದಿಲ್ಲವೆಂದು ಕಾಣುತ್ತದೆ. ಅಲ್ಲಿಗೆ ಬಂದವರನ್ನೆಲ್ಲ ಅಲ್ಲಿಯೇ ಇರಿಸಿಕೊಂಡರೆ ಮುಂದೆ ಬರುವ ರೋಗಿಗಳಿಗೆ ಸ್ಥಳ ಬೇಡವೆ? ಖಂಡಿತ ಹಾಗೆ ಮಾಡುವುದಿಲ್ಲ. ಸೋಂಕು ಹೆಚ್ಚಾಗಿದ್ದು ರೋಗಿ ತುಂಬ ನಿತ್ರಾಣವಾಗಿದ್ದರೆ ಅಲ್ಲಿಯೇ ಇರಿಸಿಕೊಂಡು ಚಿಕಿತ್ಸೆ ಕೊಟ್ಟು ಮತ್ತೆ ಅವನು ಸರಿಯಾದ ನಂತರ ವಾಪಸ್ಸು ಕಳಿಸುತ್ತಾರೆ. ಯಾವುದೇ ಇನ್ನಿತರ ಸೋಂಕಿಲ್ಲದೇ ಇದ್ದರೆ ಅಂತಹವರಿಗೆ ಕುಟುಂಬದವರೊಡನೆ ಹಾಗೂ ಕೆಲಸ ಮಾಡುವ ಸ್ಥಳದಲ್ಲಿ ಇನ್ನಿತರರೊಡನೆ ಹೇಗೆ ಬೆರೆಯಬೇಕೆಂಬುದರ ಬಗ್ಗೆ ತಿಳುವಳಿಕೆ ನೀಡಿ, ಅವರಲ್ಲಿ ರೋಗ ನಿರೋಧಕ ಶಕ್ತಿ ಬಳಸಿಕೊಳ್ಳುವುದು ಹೇಗೆಂಬುದನ್ನು ಹಾಗೂ ಆತ್ಮ ವಿಶ್ವಾಸವನ್ನು ಹೆಚ್ಚಿಸಿ ಎಲ್ಲರಂತೆ ಅವರೂ ಜೀವನ ನಡೆಸಬಹುದು ಎಂಬುದನ್ನು ಮನವರಿಕೆ ಮಾಡಿಕೊಡುತ್ತಾರೆ. ಪ್ರತಿ ತಿಂಗಳಿಗೊಮ್ಮೆ ನಿಯಮಿತವಾಗಿ follow upಗೆ ಬರಲು ತಿಳಿಸುತ್ತಾರೆ. ನೀವು ಅವರಿಂದ ಉಚಿತ ಸಲಹೆ, ಚಿಕಿತ್ಸೆ ಪಡೆದು ನಿಮ್ಮ ಊರಲ್ಲೇ ಮೊದಲಿನಂತೆಯೇ ಕೆಲಸ ಮಾಡಿಕೊಂಡು ಸಹಜ ಜೀವನ ನಡೆಸಬಹುದು. ಆದರೆ ನೀವು ಈ ಸೋಂಕನ್ನು ಬೇರೆಯವರಿಗೆ ಹರಡದಂತೆ ನೋಡಿಕೊಳ್ಳಬೇಕಾದುದು ಬಹಳ ಮುಖ್ಯ.

## ಸ್ನೇಹಿತೆಯ ಸಂದೇಹ ನಿಜವೇ?



ನಾನು 18 ವರ್ಷದ ಯುವಕ. ನಾನು ಸತತವಾಗಿ 3 ವರ್ಷಗಳಿಂದ ದಿನಕ್ಕೆ ಮೂರು ಬಾರಿಯಾದರೂ ಹಸ್ತಮೈಥುನ ಮಾಡಿಕೊಳ್ಳುತ್ತಿದ್ದೇನೆ. ನಾನೀಗ ಎತ್ತರ ಬೆಳೆಯುತ್ತಿಲ್ಲ. 3 ವರ್ಷದ ಹಿಂದೆ 5 ಅಡಿ 5 ಇಂಚು ಎತ್ತರವಿದ್ದೆ. ಈಗಲೂ ಅಷ್ಟೇ ಇದ್ದೇನೆ. ಕೆನ್ನೆಗಳು ಬತ್ತಿ ಹೋಗಿವೆ. ನನ್ನ ಸ್ನೇಹಿತೆಯೊಬ್ಬಳು ಪದೇ ಪದೇ ಹೇಳುವಂತ ಇದು ಹಸ್ತ ಮೈಥುನದ ಪ್ರಭಾವವಿರಬಹುದೇ? ದಯವಿಟ್ಟು ನನ್ನ ಸಮಸ್ಯೆ ಬಗೆಹರಿಸಿ.

**-ಸುರೇಶ್ ಕುಮಾರ್, ಊರುಬೇಡ**

*ಸಲಹೆ*

***ಹಸ್ತ ಮೈಥುನ ಮಾಡಿಕೊಳ್ಳುವುದರಿಂದ ಬೆಳವಣಿಗೆ ಕುಂಠಿತವಾಗುವುದಿಲ್ಲ. ಹಸ್ತಮೈಥುನ ಕೆಟ್ಟಚಟವಲ್ಲ. ಆದರೆ ಯಾವುದೂ ಅತಿಯಾದರೆ ಒಳ್ಳೆಯದಲ್ಲವಲ್ಲ. ಎತ್ತರವು ಅನುವಂಶೀಯ ಗುಣಗಳಿಂದ ಬರುವಂತಹದು. ಪೌಷ್ಟಿಕ ಆಹಾರ ಸೇವಿಸಿ. ಯಾವುದಾದರೊಂದು ಆರೋಗ್ಯಕರ ಹವ್ಯಾಸವನ್ನು ರೂಢಿಸಿಕೊಳ್ಳಿ, ಚಿಂತಿಸುವುದನ್ನು ಬಿಡಿ.***

## ನಟನಾಗಬೇಕು



ನಾನೊಬ್ಬ ವಿದ್ಯಾರ್ಥಿ. ನನಗೆ ಕನ್ನಡ ಚಲನ ಚಿತ್ರರಂಗದ ಅಥವಾ ಹಿಂದಿ ಚಲನ ಚಿತ್ರರಂಗದ ನಟನಾಗುವ ಆಸೆ ಇದೆ. ಇದಕ್ಕಾಗಿ ಅರ್ಹತೆ ಏನು ಮತ್ತು ಯಾರನ್ನು ಭೇಟಿಯಾಗಬೇಕು? ದಯವಿಟ್ಟು ತಿಳಿಸಿರಿ.

**- ಪಿ. ಎಚ್. ದಯಾನಂದ, ಹೊನ್ನಾವರ**

*ಸಲಹೆ*

***ನಟನಾಗಬೇಕಾದರೆ ಮುಖ್ಯವಾಗಿ ಅಭಿನಯ, ಕತೆ ಗೊತ್ತಿರಬೇಕು. ಅಭಿನಯವನ್ನು ಕಲಿಸುವ ಕೆಲವು ಫಿಲಂ ಇನ್‌ಸ್ಟಿಟ್ಯೂಟ್‌ಗಳಿವೆ. ಅಲ್ಲಿಗೆ ಸೇರಿ ಕಲಿತುಕೊಳ್ಳಿ, ಸಿನಿಮಾ ನಿರ್ದೇಶಕರನ್ನು ಸಂಪರ್ಕಿಸಿದರೆ ಅವರು ನಿಮ್ಮ ರೂಪ, ನಡಿಗೆ ಹಾವಾಭಾವ, ನಟನೆ ಎಲ್ಲವನ್ನು ಗಮನಿಸಿ ಅವರಿಗೆ ಹಿಡಿಸಿದರೆ ಸಿನಿಮಾಗೆ ಆಯ್ಕೆ ಮಾಡಿಕೊಳ್ಳುತ್ತಾರೆ.***

## ಹೇಗೆ ಮಾತಾಡಿಸಲಿ?



ಪ್ರಥಮ ಬಿ.ಎ. ಓದುತ್ತಿದ್ದೇನೆ. ನಾನು ಒಬ್ಬ ವ್ಯಕ್ತಿಯನ್ನು ಪ್ರತಿದಿನವೂ ನೋಡುತ್ತೇನೆ. ಆತ ಕೂಡ ನನ್ನನ್ನು ನೋಡುತ್ತಾರೆ. ಆದರೆ ಅವರಿಗೂ ನನಗೂ ಮಾತುಕತೆಯಾಗಿಲ್ಲ (ಮಾತನಾಡಿಸಿಲ್ಲ). ನನಗೂ ಏನೋ ಒಂದು ರೀತಿಯ ಸಂಕೋಚ. ಅವರಿಗೂ ಏನೋ ಒಂದು ರೀತಿಯ ಸಂಕೋಚವಾಗುತ್ತಿರಬಹುದು. ಆದರೆ ನನಗೆ ಅವರನ್ನು ಮಾತನಾಡಿಸ ಬೇಕೆನ್ನಿಸುತ್ತದೆ. ಆದರೆ ಏನೋ ಒಂದು ರೀತಿಯ ಮುಜುಗರ. ಅವರು ನನ್ನನ್ನು ನೋಡಿ ನಗುತ್ತಾರಷ್ಟೇ. ಮಾತನಾಡಿಸಲು ಅವರಲ್ಲೂ ಧೈರ್ಯ ವಿರುವ ಹಾಗಿಲ್ಲ. ಆದ್ದರಿಂದ ನಾನೇ ಮಾತನಾಡಿಸಬೇಕೆಂದುಕೊಳ್ಳುತ್ತೇನೆ. ಆದರೆ ಎಲ್ಲಿ ಅವರು ತಪ್ಪು ತಿಳಿದುಕೊಳ್ಳುತ್ತಾರೋ ಎನ್ನುವ ಭಯ. ಆದ್ದರಿಂದ ದಯವಿಟ್ಟು ನೀವು ನಾನು ಅವರನ್ನು ಯಾವ ರೀತಿಯಲ್ಲಿ ಮಾತನಾಡಿಸಲಿ ಎಂದು ತಿಳಿಸಿ?

ಆದರೆ ಒಂದು ಮಾತು : ನಾನು ಅವರನ್ನು ಪ್ರೀತಿಸ್ತಾ ಇಲ್ಲ. ನನಗೆ ಎಂಗೇಜ್‌ಮೆಂಟ್ ಆಗಿದೆ.

**- ಹೆಸರು ಬೇಡ, ಹರಿಹರ**

*ಸಲಹೆ*

***ನಿಮ್ಮದು ಸಮಸ್ಯೆಯೇ ಅಲ್ಲ. ಅಪರಿಚಿತರೊಡನೆ ಸ್ನೇಹ ಖಂಡಿತ ಒಳ್ಳೆಯದಲ್ಲ. ಅವರನ್ನು ಮಾತಾಡಿಸಬೇಕೆಂಬ ಚಪಲ ನಿಮಗೇಕೆ? ಇನ್ನು ಮೇಲೆ ಅವರ ಕಡೆ ನೋಡುವುದನ್ನು ಬಿಟ್ಟು ಸುಮ್ಮನಿದ್ದು ಬಿಡಿ. ನೀವಿನ್ನೂ ಓದುತ್ತಿರುವಿರಿ ಅಲ್ಲದೇ ನಿಶ್ಚಿತಾರ್ಥವಾಗಿದೆಯೆಂದು ತಿಳಿಸಿರುವಿರಿ. ಓದಿನ ಬಗ್ಗೆ ಗಮನ ಕೊಡಿ. ಭಾವೀ ಪತಿಯ ಬಗ್ಗೆ, ಭವಿಷ್ಯ ಜೀವನದ ಬಗ್ಗೆ ಯೋಚಿಸಿ. ಅನಾವಶ್ಯಕ ಸಂಗತಿಗಳ ಬಗ್ಗೆ ತಲೆ ಕೆಡಿಸಿಕೊಳ್ಳಬೇಡಿ.***

## ಸ್ನೇಹಿತನ ಸಮಸ್ಯೆ



ನನ್ನ ಸ್ನೇಹಿತನು ಅದೇ ಗ್ರಾಮದ ಒಂದು ಮಗುವಿನ ತಾಯಿಯ ಜೊತೆ ಲೈಂಗಿಕ ಸಂಪರ್ಕ ಹೊಂದಿದ್ದಾನೆ. ಆಕೆಯು ಅಂತರ್‌ಜಾತಿ ಮದುವೆಯಾಗಿ ಇಬ್ಬರೂ ಬೇರೆ ಬೇರೆಯಾಗಿದ್ದಾರೆ. ಆಕೆಗೆ ತುಂಬಿದ ಪ್ರಾಯ. ಇವನು ಪಿ.ಯು.ಸಿ. ಅನುತ್ತೀರ್ಣ ಹೊಂದಿದ್ದಾನೆ. ನಾನು ಅವನಿಗೆ ಎಷ್ಟು ಹೇಳಿದರೂ ಕೇಳುತ್ತಿಲ್ಲ. ಈತನು ಆಕೆಯನ್ನು ಮದುವೆಯಾಗುವುದಿಲ್ಲ. ಅವಳು ಸಹ ಈತನನ್ನು ಬಿಟ್ಟು ಇರುವುದಿಲ್ಲ. ಕಾಮವನ್ನೇ ಪ್ರೀತಿ ಎಂದು ತಿಳಿದುಕೊಂಡಿದ್ದಾರೆ. ಇದು ಬೇರೆ ಯಾರಿಗೂ ಗೊತ್ತಿಲ್ಲ. ಇವರಿಬ್ಬರನ್ನು ಬೇರೆ ಮಾಡಲೆ? ಅಥವಾ ಹಾಗೇ ಬಿಡಲೆ? ಇದು ತಪ್ಪೇ? ಸರಿಯೇ?

**-ನಲವತ್ತು, ಊರುಬೇಡ**

*ಸಲಹೆ*

***ನಿಮ್ಮ ಗೆಳೆಯ ಮಾಡುತ್ತಿರುವುದು ಸರಿಯಲ್ಲ. ಆಕೆಯನ್ನು ಮದುವೆಯಾಗುವ ಆಸಕ್ತಿಯಿಲ್ಲದಿದ್ದ ಮೇಲೆ ಹೀಗೆ ಸಂಬಂಧ ಬೆಳೆಸುವುದು ತಪ್ಪು. ಇಂತಹ ಅನೈತಿಕ ಸಂಬಂಧದಿಂದ ಆರೋಗ್ಯ, ಮರ್ಯಾದೆ ಹಾಳಾಗುವುದು ಎಂದು ಅವನಿಗೆ ತಿಳಿಸಿ ಆಕೆಯಿಂದ ದೂರವಾಗಲು ಹೇಳಿ.***



ನನ್ನ ಸಮಸ್ಯೆ ಏನೆಂದರೆ, ನಾನು ತುಂಬಾ ತೆಳ್ಳಗಿದ್ದೇನೆ. ನಾನು ಆರ್ಮಿ ಸೇರಬೇಕೆಂದಿದ್ದೇನೆ. ಆದರೆ ನನ್ನ ತೂಕ ಕೇವಲ 45 ಕೆ.ಜಿ.ಗಳು ಮಾತ್ರ. ಆದ ಕಾರಣ ನಾನು ಆರ್ಮಿ ಸೇರಲು ಸಾಧ್ಯವಾಗಿಲ್ಲ. ನನ್ನ ಎತ್ತರ ಕೂಡ ಕಡಿಮೆ; ಕೇವಲ 4 1/2 ಅಡಿ ಎತ್ತರವಿದ್ದೇನೆ. ನನ್ನ ವಯಸ್ಸು 19 ವರ್ಷ ಮುಗಿಯುತ್ತ ಬಂದಿದೆ. ದಯವಿಟ್ಟು ನನ್ನ ಸಮಸ್ಯೆಗೆ ಪರಿಹಾರ ಮತ್ತು ಸಲಹೆ ನೀಡಬೇಕೆಂದು ತಮ್ಮಲ್ಲಿ ಕೋರಿಕೊಳ್ಳುತ್ತೇನೆ.

**-ಎಸ್. ರಮೇಶ್, ಮಾಗಡಿ**

*ಸಲಹೆ*

***ಎತ್ತರ ಅನುವಂಶೀಯತೆಯಿಂದ ಬರುವಂತಹದು. ಇನ್ನು ಎರಡು ವರ್ಷ ನೀವು ಬೆಳೆಯುವ ಅವಕಾಶವಿರುವುದರಿಂದ ಇನ್ನೂ ಸ್ವಲ್ಪ ಎತ್ತರವಾಗುವಿರಿ ಅಲ್ಲದೇ ಈಜುವುದು, ಸ್ಕಿಪ್ಪಿಂಗ್ ಮುಂತಾದವುಗಳಿಂದ ಸ್ವಲ್ಪ ಎತ್ತರವಾಗಬಹುದು. ತೂಕ ಹೆಚ್ಚಿಸಿಕೊಳ್ಳುವುದಕ್ಕೆ ಪೌಷ್ಟಿಕ ಆಹಾರ ಅಂದರೆ ಹಾಲು, ಮೊಸರು, ಮೊಟ್ಟೆ, ತುಪ್ಪ, ಹಣ್ಣು, ಕಾಳುಗಳನ್ನು ಅಧಿಕವಾಗಿ ಸೇವಿಸಿ.***

## ಮನೆಬಿಟ್ಟು ಹೋಗಬೇಕೆಂದಿರುವೆ



ನಾನು 24 ವರ್ಷದ ಯುವತಿ. ನನಗೆ ಮನೆಯಲ್ಲಿ ಬಹಳ ಕಷ್ಟವಿದೆ. ಅದಕ್ಕಾಗಿ ನಾನು ಮನೆ ಬಿಟ್ಟು ಹೋಗಬೇಕು ಅಂತಾ ನಿರ್ಧಾರ ಮಾಡಿದ್ದೇನೆ. ನಾನು ಬಿ.ಕಾಂ. ಪದವೀಧರಳಿದ್ದು, ನನಗೆ ಯಾವುದೇ ಕೆಲಸವಿಲ್ಲ. ನಮ್ಮ ಮನೆಯ ಆರ್ಥಿಕ ಕಾರಣದಿಂದಾಗಿ ನನಗೆ ಮುಂದೆ ಓದಲು ಸಾಧ್ಯವಿಲ್ಲ. ಅದಕ್ಕಾಗಿ ದಯವಿಟ್ಟು ನನಗೆ ಒಂದು ಸಣ್ಣ ಉದ್ಯೋಗದ ಬಗೆ ಮಾಹಿತಿ ನೀಡಿರಿ. ಇಲ್ಲವಾದರೆ ಯಾವುದಾದರೊಂದು ಅನಾಥಾಶ್ರಮವಿದ್ದರೆ ದಯವಿಟ್ಟು ಅಲ್ಲಿ ನನಗೆ ಇರಲು ಅವಕಾಶ ಮಾಡಿ ಕೊಡಿ. ನಾನು ಈಗಾಗಲೇ ಜೀವನದದಲ್ಲಿ ಬಹಳ ನೊಂದಿದ್ದೇನೆ. ದಯವಿಟ್ಟು ನೀವೇ ದಾರಿ ತೋರಿಸಿರಿ.

-ಹೆಸರು, ಊರುಬೇಡ

ಸಲಹೆ

ಪ್ರತಿಯೊಬ್ಬರಿಗೂ ಕಷ್ಟನಷ್ಟಗಳು ಇದ್ದದ್ದೇ. ಹಾಗಂತ ಮನೆ ಬಿಟ್ಟು ಹೋಗುವ ನಿರ್ಧಾರವೇಕೆ ಮಾಡಿದ್ದೀರಿ? ಸಮಸ್ಯೆಗೆ ಪರಿಹಾರ ಕಂಡುಕೊಳ್ಳು ತ್ತ ಗಮನಹರಿಸಬೇಕೇ ಹೊರತು ಪಲಾಯನವಾದಿಗಳಾಗಬಾರದು. ನೀವು ವಿದ್ಯಾವಂತರಾಗಿದ್ದು ಇಂತಹ ನಿರ್ಧಾರ ಕೈಗೊಳ್ಳುವುದು ಸರಿಯಲ್ಲ. ಮಹಿಳಾ ಅಭಿವೃದ್ಧಿ ನಿಗಮ ಅಥವಾ ಪ್ರಧಾನಮಂತ್ರಿಗಳ ರೋಜಗಾರ್ ಯೋಜನೆಯಡಿ ಯಲ್ಲಿ ಸ್ವಯಂ ಉದ್ಯೋಗ ನಡೆಸಲು ಧನ ಸಹಾಯ ದೊರೆಯುತ್ತದೆ. ಅದ ರಿಂದ ಸಹಾಯ ಪಡೆದುಕೊಂಡು ಯಾವುದಾದರೊಂದು ಸ್ವಯಂ ಉದ್ಯೋಗ ಪ್ರಾರಂಭಿಸಿ. ಮನಸ್ಸಿದ್ದರೆ ಮಾರ್ಗ ಎಂಬ ವಿಷಯ ನೀವು ಕೇಳಿಲ್ಲವೆ? ಈಗ ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲಿಯೂ ಯಶಸ್ವಿಯಾಗುತ್ತಿದ್ದಾರೆ. ನೀವು ಯಾವುದಾದರೊಂದು ಸಣ್ಣ ಪ್ರಮಾಣದ ಉದ್ದಿಮೆ ಆರಂಭಿಸಿ. ಖಂಡಿತ ಯಶಸ್ಸು ದೊರೆಯುತ್ತದೆ. ಇನ್ನು ಅನಾಥಾಶ್ರಮಗಳು ಬಹಳಷ್ಟು ಇವೆ. ಆದರೆ ಅಲ್ಲಿಯೂ ಸಮಸ್ಯೆಗಳು ಇಲ್ಲವೆಂದಲ್ಲ. ಆದರೆ ಸಮಸ್ಯೆಯ ರೀತಿ ಬೇರೆ ...ಮದು. ನೀವು ಡಿ.ಐ.ಸಿ. (DIC) ಕಛೇರಿಯನ್ನು ಸಂಪರ್ಕಿಸಿದರೆ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಏನೇನು ಮಾಡಬಹುದೆಂಬದುನ್ನು ತಿಳಿಸುತ್ತಾರೆ.

## ತಾಯಿಗೆ ತಿಳಿಸಲೇ?



ನಿಮ್ಮ ತಮ್ಮನೆಂದು ತಿಳಿದು ದಯವಿಟ್ಟು ನನಗೆ ಸಲಹೆ ಕೊಡಿ. ನಾನು ಒಬ್ಬ ಸೂಪರ್‌ವೈಸರ್ ಮಗ. ನನಗೊಬ್ಬ ತಮ್ಮನಿದ್ದಾನೆ. ನಮ್ಮ ತಂದೆ ಒಬ್ಬ ವೇಶ್ಯೆಯನ್ನು ಇಟ್ಟುಕೊಂಡಿದ್ದಾರೆ. ಆಕೆಯನ್ನು ನಮ್ಮ ತಂದೆಯೇ ನಮಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಆ ವೇಶ್ಯೆ ಮತ್ತು ನಮ್ಮ ತಾಯಿ ಅನ್ಯೋನ್ಯವಾಗಿದ್ದಾರೆ. ಏಕೆಂದರೆ ನಮ್ಮ ತಾಯಿಗೆ ಆಕೆ ವೇಶ್ಯೆಯೆಂದು ಗೊತ್ತಿಲ್ಲ. ಈ ವಿಷಯ ನನ್ನ ತಮ್ಮನಿಗೆ ಗೊತ್ತಿದೆ. ಇದನ್ನು ನಮ್ಮ ತಾಯಿಗೆ ಹೇಳಬೇಕೊ ಬೇಡವೋ?

-ಚಿರಂಜೀವಿ, ಊರು ಬೇಡ

ಸಲಹೆ

ಈ ವಿಷಯ ತಿಳಿದರೆ ನಿಮ್ಮ ತಾಯಿಯ ಮನಸ್ಸಿಗೆ ನೋವಾಗುವುದು ಖಂಡಿತ. ಆದ್ದರಿಂದ ಸಧ್ಯಕ್ಕೆ ನೀವು ವಿಷಯ ತಿಳಿಸಬೇಡಿ. ನಿಮ್ಮ ತಂದೆ ಆ ವೇಶ್ಯೆ ಯಿಂದ ದೂರವಾಗುವಂತೆ ಮಾಡುವುದು ಬಹು ಮುಖ್ಯ. ನೀವು ನಿಮ್ಮ ಅಜ್ಜ, ತಾತ ಇಲ್ಲವೇ ಆತ್ಮೀಯರಾದ ಹಿರಿಯ ಬಂಧುಗಳಿಗೆ ಈ ವಿಷಯ ತಿಳಿಸಿ ನಿಮ್ಮ ತಂದೆಗೆ ಆ ಸಂಬಂಧ ತೊರೆಯುವಂತೆ ಮನವೊಲಿಸಲು ಯತ್ನಿಸುವಂತೆ ತಿಳಿಸಿ. ಇಂತಹ ಅನೈತಿಕ ಸಂಬಂಧದಿಂದ ಹಣ, ಆರೋಗ್ಯ, ಮರ್ಯಾದೆ ಎಲ್ಲವೂ ಹಾಳಾಗುತ್ತದೆಂದು ಅವರಿಗೆ ಮನವರಿಕೆಯಾದರೆ ಅವರೇ ಖಂಡಿತ ದೂರವಾಗುತ್ತಾರೆ. ಇಂತಹ ಸಂಬಂಧಗಳು ಹೆಚ್ಚು ಕಾಲ ಇರಲಾರವು.

## ಮರು ಮದುವೆ ಸೂಕ್ತವೇ?



ಡಾಕ್ಟರೇ, ನನಗೆ 28 ವರ್ಷ ವಯಸ್ಸು. ಮದುವೆಯಾಗಿ 12 ವರ್ಷ ಆಗಿದೆ. 3 ಮಕ್ಕಳು ಇದ್ದಾರೆ. ನನ್ನ ಗಂಡ ತೀರಿಕೊಂಡು ಒಂದು ವರ್ಷವಾಯ್ತು. ನನಗೆ ಲೈಂಗಿಕ ಆಸಕ್ತಿ ತುಂಬಾ ಇದೆ. ಅನೇಕ ...ಲ ಕೃತಕ ವಿಧಾನಗಳಿಂದ ಸಂತೃಪ್ತಿ ಪಡೆಯಲು ಯತ್ನಿಸಿದ್ದೇನೆ. ಮರು ಮದುವೆಯಾಗಲು ಇಷ್ಟ ಇದೆ. ಆದರೆ ಇದರಿಂದ ನನ್ನ ಮಕ್ಕಳಿಗೆ ತೊಂದರೆ ಯಾಗಬಹುದೆಂಬ ಆತಂಕ. ನಾನು ಶಾಲೆಯೊಂದರಲ್ಲಿ ಅಟೆಂಡರ್ ...ಗಿದ್ದೇನೆ. ದಯವಿಟ್ಟು ಸಲಹೆ ನೀಡಿ.

- ಹೆಸರು ಬೇಡ, ಶಿವಮೊಗ್ಗ.

ಸಲಹೆ

ನಿಮಗಿನ್ನೂ ಚಿಕ್ಕವಯಸ್ಸಿರುವುದರಿಂದ ಹಾಗೂ ಆರ್ಥಿಕವಾಗಿ ಸ್ವಾವಲಂಬಿಯಾಗಿರುವುದರಿಂದ ಮರು ಮದುವೆಯಾಗುವುದು ಸೂಕ್ತ. ಆದರೆ ನಿಮ್ಮ ಮಕ್ಕಳಿಗೆ ಪಿತೃವಾತ್ಸಲ್ಯ, ಪ್ರೀತಿಯನ್ನು ಧಾರೆಯೆರೆಯುವಂತಹ ವ್ಯಕ್ತಿ ಹೌದೋ, ಅಲ್ಲವೊ ಎಂಬುದನ್ನು ತಿಳಿದುಕೊಂಡು ಮದುವೆ ಮಾಡಿಕೊಳ್ಳಿ, ಏಕೆಂದರೆ ಮದುವೆಯ ನಂತರ ನಿಮ್ಮ ಸಂಪಾದನೆಯನ್ನು ಕಿತ್ತುಕೊಂಡು ಕುಡಿತ ಮುಂತಾದ ಚಟಕ್ಕೆ ದಾಸನಾಗುವ ವ್ಯಕ್ತಿ ಸಿಕ್ಕಿದರೆ ನಿಮ್ಮ ಬಾಳು ನರಕವಾದೀತು. ಯಾವುದನ್ನೂ ಚೆನ್ನಾಗಿ ಯೋಚಿಸಿ ನಿರ್ಧರಿಸಿ. ಮಕ್ಕಳೂ ಕೂಡ ಅವನನ್ನು ತಂದೆ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಒಳ್ಳೆಯ ಗುಣ, ನಡತೆಯಿರುವ ವ್ಯಕ್ತಿ ನಿಮಗೆ ಸಿಗುವುದು ದುರ್ಲಭವೆನ್ನುವುದಾದರೆ ಮದುವೆ ವಿಷಯ ಮರೆತು *vibrater* ನಂತಹ ಸಾಧನಗಳಿಂದ ನಿಮ್ಮ ಲೈಂಗಿಕ ತೃಷೆ ನೀಗಿಸಿಕೊಳ್ಳಬಹುದು.

## ಶಿಕ್ಷಕಿಯ ದುಗುಡ



ನಾನು 27 ವರ್ಷದ ಬಿ.ಎಸ್.ಸಿ., ಬಿ.ಇಡಿ. ಪದವೀಧರೆ. ಜಾತಿ ಯಿಂದ ಮುಸಲ್ಮಾನಳು. ಒಬ್ಬ ಎಸ್.ಸಿ.ಹುಡುಗನನ್ನು ಪ್ರೀತಿಸಿ ದ್ದೇನೆ. ಆತ ಪದವಿ ಪೂರ್ಣ ಗೊಳಿಸಲು ನಾನು ಸಾಕಷ್ಟು ಪ್ರೋತ್ಸಾ ಹಿಸಿದೆ. ನಂತರ ಉದ್ಯೋಗ ಗಳಿಸಲು ಬೆಂಬಲಿಸಿದೆ. ಆತನ ಒತ್ತಾಯಕ್ಕೆ ಮಣಿ ದು ದೇಹ ಸಂಪರ್ಕವನ್ನೂ ಮಾಡಿದೆ. ಈಗ ನನ್ನ ಒಪ್ಪಿಗೆ ಪಡೆದು ಬೇರೆ ಒಬ್ಬಾಕೆ ಯನ್ನು ಮದುವೆಯಾಗಿದ್ದಾನೆ. ನಾನು ಹಿಂಜರಿದರೂ ಮೊದಲಿನಂತಿರಲು ಒತ್ತಾಯಿಸುತ್ತಿದ್ದಾನೆ. ನನ್ನನ್ನು ಮದುವೆಯಾಗುವುದಾಗಿ ಹೇಳು ತ್ತಾನೆ. ತನ್ನ ಪತ್ನಿಗೆ ಹೊಂದಿಕೊಂಡು ಹೋಗಲು ಪರೋಕ್ಷವಾಗಿ ಎಚ್ಚರಿ ಕೆ ಕೊಡುತ್ತಿ ದ್ದಾನೆ. ನಾನು, ಆತ, ಆತನ ಹೆಂಡತಿ ಮೂವರೂ ಪ್ರಾಥಮಿಕ ಶಾಲಾ ಶಿಕ್ಷಕಿಯ ರು. ನಾನು ಆತನನ್ನು ಮದುವೆಯಾಗಲು ಕಾನೂನಿನ ತೊಡಕು ಬರುವುದೇ? ಸೂಕ್ತ ಪರಿಹಾರ ಸೂಚಿಸಿ ನನ್ನ ದುಗುಡ ಕಡಿಮೆ ಮಾಡುವಿರಾ?

-ಹೆಸರು ಬೇಡ, ಊರುಬೇಡ

ಸಲಹೆ

ನೀವು ವಿದ್ಯಾವಂತರಾಗಿದ್ದು ನಯವಂಚಕನ ಬಲೆಗೆ ಬಿದ್ದಿರುವುದು ತಿಳಿದು ಬೇಸರವೆನ್ನಿಸುತ್ತದೆ. ನಿಮ್ಮ ಪ್ರೋತ್ಸಾಹ, ಬೆಂಬಲ, ಪ್ರೀತಿ ಪಡೆದೂ ಕೂಡ ನಿಮ್ಮನ್ನು ಮದುವೆಯಾಗದೇ ಬೇರೊಬ್ಬಳನ್ನು ಮದುವೆಯಾಗಿದ್ದಾನಲ್ಲ (ನಿಮ್ಮೊಪ್ಪಿಗೆ ಪಡದೇ), ನಿಮ್ಮ ಒಳ್ಳೆಯತನವನ್ನು ಅವರು ಸಾಕಷ್ಟು ದುರುಪ ಯೋಗಪಡಿಸಿಕೊಂಡಿದ್ದಾನೆ. ಅವನು ಮದುವೆಯಾದ ನಂತರ ನೀವು ಅವನಿಂದ ದೂರವಾಗಬೇಕಿತ್ತು. ನಿಮ್ಮಿಂದ ಅವನಿಗೆ ದೈಹಿಕ ಸುಖ, ಹಣ ಎಲ್ಲವೂ ಸಿಗುವುದರಿಂದ ಅವನು ಈಗ ಮದುವೆಗೆ ಒತ್ತಾಯಿಸುತ್ತಿದ್ದಾನೆ. ಅವನ ದೆಂತಹ ಪ್ರೀತಿ! ನಿಜಕ್ಕೂ ನಿಮ್ಮ ಮೇಲೆ ಅವನಿಗೆ ಪ್ರೀತಿ ಇದ್ದಿದ್ದಾದರೆ ನಿಮ್ಮನ್ನೇ ಮದುವೆಯಾಗುತ್ತಿದ್ದ. ನೀವು ಅವನನ್ನು ಮದುವೆಯಾಗುವುದು ಕಾನೂನಿನ ಪ್ರಕಾರ ತಪ್ಪಾಗುತ್ತದೆ. ಹಿಂದೂ ಕಾನೂನಿನ ಪ್ರಕಾರ ಹೆಂಡತಿ ಬದುಕಿರು ವಾಗಲೇ ಇನ್ನೊಂದು ಮದುವೆಯಾಗುವಂತಿಲ್ಲ. ಅವನ ಹೆಂಡತಿ ಕೇಸ್‌ಮಾಡಿ ದರೆ ಅವನ ನೌಕರಿಯೂ ಹೋಗುತ್ತದೆ. ಈ ಮದುವೆಯಿಂದ ಅವನಿಗೆ ಲಾಭವೇ ಹೊರತು ನಿಮಗೇನೂ ಪ್ರಯೋಜನವಿಲ್ಲ. ಅವನ ಹೆಂಡತಿ ಹಾಗೂ ನಿಮ್ಮ ಮಾನಸಿಕ ನೆಮ್ಮದಿ ಹಾಳಾಗುವುದಂತೂ ನಿಜ. ಈಗಲಾದರೂ ನೀವು ಜಾಣತನದಿಂದ ವರ್ತಿಸಿ, ತಡವಾದರೂ ಎಚ್ಚೆತ್ತುಕೊಂಡು ಅವನ ಜೊತೆಗಿನ ಸ್ನೇಹ ಮರೆತು ಹೊಸ ಜೀವನಕ್ಕೆ ನಾಂದಿ ಹಾಡಿ.

**ನಿಮ್ಮ ಸಮಸ್ಯೆಗಳನ್ನು ಈ ವಿಳಾಸಕ್ಕೆ ಕಳಿಸಿ :**
ಸಂಪಾದಕರು, ಬಿಸಿಲ ಬದುಕು, ಅಂಕುರ ಪ್ರಕಾಶನ
ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು - 560 079.



## ದಾಖಲೆಯ ಕಲಾವಿದ
# ಕೀರ್ತಿರಾಜ್ ಬಣಕಾರ್

'ಆಗದು ಎಂದು, ಕೈಲಾಗದು ಎಂದು ಕೈ ಕಟ್ಟಿ ಕುಳಿತರೆ ಸಾಗದು ಕೆಲಸವು ಮುಂದೆ'....... ಎಂಬ ಚಿತ್ರಗೀತೆಯನ್ನು ಕೇಳಿ ಮನರಂಜನೆ ಪಡೆದ ನೆನಪು ಬಹುಶಃ ಕನ್ನಡನಾಡಿನ ಪ್ರತಿಯೊಬ್ಬರಿಗೂ ಇರಬಹುದು. ಆದರೆ ಈ ಚಿತ್ರಗೀತೆಯನ್ನು ಅರ್ಥಮಾಡಿಕೊಂಡು ಜೀವನ ನಡೆಸುವವರು ನಮ್ಮಲ್ಲಿ ಎಷ್ಟು ಜನರಿರಬಹುದು? 'ಇದ್ದರೂ ಬೆರಳೆಣಿಕೆಯಷ್ಟು ಇರಬಹುದು. ಅಂತಹವರಲ್ಲಿ ಹೆಸರಿಸಬಹುದಾದ ವ್ಯಕ್ತಿ ಧಾರವಾಡದ ಕಲಾವಿದ ಕೀರ್ತಿರಾಜ್ ಬಣಕಾರ.

ಬೆಳಿಗ್ಗೆಯಿಂದ ರಾತ್ರಿಯವರೆಗೆ ಒಂದಲ್ಲ ಒಂದು ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಮಗ್ನರಾಗುವ ಇವರು ಕಷ್ಟಜೀವಿ. ಇತ್ತೀಚೆಗೆ 40 X 15 ಅಡಿ ಉದ್ದದ ಬೃಹತ್ 'ಕ್ಯಾನ್ವಾಸ್' ಪೇಂಟಿಂಗ್ ಮಾಡಿ ರಾಷ್ಟ್ರದಾಖಲೆ, ವಿಶ್ವದಾಖಲೆ ಎರಡನ್ನೂ ಒಟ್ಟಿಗೆ ನಿರ್ಮಿಸಿರುವ ಕೇವಲ 26ರ ಹರೆಯದ ಕಲಾವಿದ 'ಕೀರ್ತಿರಾಜ್ ಬಣಕಾರ' ಅದ್ಭುತವನ್ನೇ ಮೆರೆದಿದ್ದಾರೆ.

ಬೃಹತ್ ಪೇಂಟಿಂಗ್ ಸಿದ್ಧಪಡಿಸಲು ಸುಮಾರು ಒಂದು ಲಕ್ಷ ರೂಪಾಯಿಗಳ ಅವಶ್ಯಕತೆ ಬೀಳಬಹುದಾದ್ದರಿಂದ ಕೀರ್ತಿರಾಜ್ ಪ್ರಾಯೋಜಕರಿಗಾಗಿ ಹುಡುಕಾಡಬೇಕಾಯ್ತು. ಪ್ರಾಯೋಜನೆ ಮಾಡಲು ಯಾರೂ ಮುಂದೆ ಬಾರದೇ ಹೋದಾಗ ಕಲಾವಿದೆ ಪತ್ನಿ ವಿದ್ಯಾ ಹಾಗೂ ಅವರ ಪಾಲಕರು ಆರ್ಥಿಕ ನೆರವನ್ನು ನೀಡಿದರು.

ಧಾರವಾಡ ಕಲಾಭವನದ ವಿಶಾಲವಾದ ಪಡಸಾಲೆಯಲ್ಲಿ 40 X 15 ಅಡಿ ಉದ್ದದ ಬೃಹತ್ ಕ್ಯಾನ್ವಾಸನ್ನು ಸ್ವತಃ ಸಿದ್ಧಪಡಿಸಿಕೊಂಡು ಕೇವಲ 35 ಘಂಟೆಗಳ ಅಲ್ಪ ಸಮಯದಲ್ಲಿ ಕೀರ್ತಿರಾಜ್‌ರವರು ಈ ಶತಮಾನದ ಮಹಾನ್ ಕಲಾವಿದ ಎಂದೇ ಕರೆಯಲಾಗುವ ಎಂ.ಎಫ್ ಹುಸೇನರ ಪೇಂಟಿಂಗ್ ದಾಖಲೆ (30 X 10) ಮುರಿದು ಹೊಸ ದಾಖಲೆ ನಿರ್ಮಿಸಿದ್ದಾರೆ. 1991ರಲ್ಲಿ ಹುಸೇನ್ ಅವರು ಪಂಡಿತ್ ಭೀಮ್‌ಸೇನ್ ಜೋಷಿ ಅವರ ರಾಗಕ್ಕೆ ಬರೆದ ಪೇಂಟಿಂಗ್ ಇದುವರೆಗಿನ ದೇಶದ ಅತೀ ದೊಡ್ಡ ಕ್ಯಾನ್ವಾಸ್ ಪೇಂಟಿಂಗ್ ಎಂದು ಲಿಮ್ಕಾ ಬುಕ್ ಆಫ್ ರೆಕಾರ್ಡ್ಸ್ ಪುಸ್ತಕದಲ್ಲಿ ದಾಖಲೆಯಾಗಿತ್ತು. ಈ ದಾಖಲೆ ಈಗ ಕರ್ನಾಟಕದ ಹೆಮ್ಮೆಯ ಕಲಾವಿದ ಕೀರ್ತಿರಾಜ್ ಬಣಕಾರರ ಪಾಲಾಗಿದೆ.

ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರ ಬದುಕು ಹಾಗೂ ರಾಜಕೀಯ ವರ್ಚಸ್ಸು ಎಂಬ ವಿಷಯದ ಮೇಲೆ ಈ ಬೃಹತ್ ಪೇಂಟಿಂಗ್ ರಚಿಸಿದ್ದಾರೆ. ರಾಜಕಾರಣಿ ಒಬ್ಬರನ್ನು ಕುರಿತು ರಚಿಸಿದ ಪೇಂಟಿಂಗ್ ದಾಖಲೆಯಾಗುತ್ತಿರುವುದು ಇದೇ ಮೊದಲು.

ಕೀರ್ತಿರಾಜ್‌ರವರ ದಾಖಲೆಯ ಕಲಾಕೃತಿ ರಾಜ್ಯಾದ್ಯಂತ ಪ್ರದರ್ಶನಗೊಂಡು ನಂತರ ನ್ಯೂಯಾರ್ಕ್ ಸಿಟಿಯ ಮೆಟ್ರೋಪಾಲಿಟನ್ ಮ್ಯೂಸಿಯಂ ಆಫ್ ಆರ್ಟ್ಸ್‌ನಲ್ಲಿ ಸಂಗ್ರಹವಾಗಲಿದೆ.

■ ಮೂರು ತಿಂಗಳ ಅಲ್ಪಾವಧಿಯಲ್ಲಿ ಕರ್ನಾಟಕದಲ್ಲಿ ಪ್ರಪ್ರಥಮ ಬಾರಿಗೆ 1,01,101, (ಒಂದು ಲಕ್ಷ, ಒಂದು ಸಾವಿರದ ಒಂದು ನೂರಾ ಒಂದು) ರೇಖಾ ಚಿತ್ರ ರಚನೆ.

■ ನಿಮಿಷಕ್ಕೆ 25, ಘಂಟೆಗೆ 500, ದಿನಕ್ಕೆ 5000 ರೇಖಾ ಚಿತ್ರಗಳ ರಚನೆ.

■ ದಿನದ ಹನ್ನೊಂದು ಘಂಟೆಗಳ ಕಾಲ ಎಡೆಬಿಡದೆ 5000 ರೇಖಾ ಚಿತ್ರ ರಚಿಸಿದ್ದಕ್ಕಾಗಿ, ಮುಂಬಯಿಯ ಡಾ. ನಂದಕಿಶೋರ ಶರ್ಮಾ ಅವರಿಂದ 5000 ರೂಪಾಯಿಗಳ ಪುರಸ್ಕಾರ ಹಾಗೂ ಸನ್ಮಾನ.

■ ಇದೂವರೆಗೆ ರಚಿಸಿದ ರೇಖಾ ಚಿತ್ರಗಳ ಸಂಖ್ಯೆ ಎರಡು ಲಕ್ಷಕ್ಕಿಂತ ಅಧಿಕ. ಇವು ಕೀರ್ತಿಯವರು ಹಿಂದೆ ನಿರ್ಮಿಸಿದ ಕೆಲವು ಸಣ್ಣ ದಾಖಲೆಗಳಾಗಿವೆ.

### ಪ್ರಶಸ್ತಿಗಳು

- ಕಾಲೇಜಿನ ಉತ್ತಮ ಕವಿ, ಕಲಾವಿದ- 1989-90 (ಸಿ.ಎಸ್. ಬೆಂಬಳಗಿ ಕಾಲೇಜು, ರಾಮದುರ್ಗ) ಡಾ. ಹಾ.ಮಾ. ನಾಯಕ, ಡಾ. ಆರ್.ಸಿ. ಹಿರೇಮಠ ಅವರಿಂದ ಸತ್ಕಾರ
- ಡಿ.ಜಿ.ಯು.ಕೆ. ಪುಣೆ, ರಾಜ್ಯಮಟ್ಟದ ಚಿತ್ರಕಲಾ ಸ್ಪರ್ಧೆಯಲ್ಲಿ ಪ್ರಥಮ ಪುರಸ್ಕಾರ 1989
- ಉತ್ತಮ ರೇಖಾಚಿತ್ರಕಾರ- 1990- (ಸ್ಕೂಲ್ ಆಫ್ ಆರ್ಟ್, ಧಾರವಾಡ)
- ಕಲಾವಿದ 95 ಪ್ರಶಸ್ತಿ (ಇನರ್ ವ್ಹಿಲ್ ಕ್ಲಬ್ 1995)
- 1995-96ನೇ ಸಾಲಿನ 'ರಾಷ್ಟ್ರೀಯ ಯು ಕಲಾರತ್ನ' ಪ್ರಶಸ್ತಿ ಹುಬ್ಬಳ್ಳಿ ಈದ್ಗಾ ಮೈದಾ ಕಲಾಕೃತಿಗೆ. ಮಹಾರಾಷ್ಟ್ರದ ಯೂ ಅಸೋಶಿಯೇಶನ್ ಮುಂಬ ಡಿ.ಜಿ.ಯು.ಕೆ. ಪುಣೆ)
- ''ಹಮಾರಾ ಕಲಾಕಾರ 96'' ಪ್ರ ಪಾಂಡಿಚೇರಿ - 1996

ಬರೇ ಚಿತ್ರರಚನಾಕಾರರಾದರೆ ಸಾಲ ಎನ್ನುವ ಇವರು ಕಥೆ, ಕವನ, ಲೇಖನಗಳ ಬರೆಯುತ್ತಾರೆ. ಹಲವಾರು ರೇಡಿಯ ಕಾರ್ಯಕ್ರಮಗಳನ್ನು ಆಕಾಶವಾಣಿ ಧಾರವಾ ಹಾಗೂ ಕಾರವಾರ ಆಕಾಶವಾಣಿ ನಿಲಯದಿ ನೀಡಿದ್ದಾರೆ.

ವಿಶ್ವದಾಖಲೆಯ ಪುಟ ಸೇರಿದ ಮಾತ್ರಕ್ಕೆ ನ ಕೆಲಸ ಮುಗಿದಿಲ್ಲ... ನಾನಿನ್ನೂ ಕಲೆಯ ಬ ಹೆಚ್ಚಿನ ಅಭ್ಯಾಸ ನಡೆಸಿ ಬೆಳೆಯಬೇಕಾಗಿದೆ ಎನ್ನು ಕೀರ್ತಿರಾಜ್‌ರವರಿಗೆ ಸಮಾಜ, ಸಂಘಸಂಸ್ಥೆ ಹಾಗೂ ಸರ್ಕಾರದ ಸಹಾಯ ದೊರೆತರೆ ಇ ಕುಂಚದಿಂದ ಹಲವು ರಾಷ್ಟ್ರ ಹಾಗೂ ವಿ ದಾಖಲೆಯ ಕಲಾಕೃತಿಗಳು ಮೂಡಿಬರಬಹುದ

■ ಬಿ. ವಿಲ್ಸ



# ರಾಷ್ಟ್ರೀಯ ಕಾನೂನು ಶಾಲೆ

■ ವಿ. ನಿರಂಜನಾರಾಧ್ಯ

ರಾಷ್ಟ್ರೀಯ ಕಾನೂನು ಶಾಲೆ (ನ್ಯಾಷನಲ್ ...ಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ) ...ಾರತದ ಕಾನೂನು ಶಿಕ್ಷಣದಲ್ಲಿ ಒಂದು ಹೊಸ ...ೖಲಿಗಲ್ಲು. ಕಾನೂನು ಶಿಕ್ಷಣದ ಗುಣಮಟ್ಟ ...ುಧಾರಣೆ ಮತ್ತು ಕಾನೂನು ಶಿಕ್ಷಣದಲ್ಲಿ ಹೊಸ ...್ರಯೋಗಗಳತ್ತ ದಾಪುಗಾಲು. ಕಾನೂನು ಶಿಕ್ಷಣ ...ನ್ನು ಹೊಸ ದೃಷ್ಟಿ ಕೋನದಿಂದ ನೋಡ ...ಯಸುವ ಮತ್ತು ಈ ಶಿಕ್ಷಣದಲ್ಲಿ ಹೊಸ ಚೈತನ್ಯ ...ನ್ನು ಕಾಣಬಯಸುವ ಯುವ ಪೀಳಿಗೆಗೆ ಹೊಸ ...ನುಭವ ನೀಡುವ ಒಂದು ಅದ್ವಿತೀಯ ಶಿಕ್ಷಣ ...ೇಂದ್ರ.

ಕಾನೂನು ಶಿಕ್ಷಣದ ಗುಣಮಟ್ಟ ಸುಧಾರಣೆ, ...ಂಶೋಧನೆ ಮತ್ತು ತರಬೇತಿಯ ಹೊಸ ...ಲ್ಪನೆಯಾಗುತ್ತಿರುವ ಈ ಕೂಸು ಭಾರತೀಯ ...ಾನೂನು ಮಂಡಳಿಯ ಶ್ರಮದಿಂದ ಹುಟ್ಟಿದ್ದು. ...ದರೊಂದಿಗೆ ಕರ್ನಾಟಕ ಸರ್ಕಾರ ಮತ್ತು ...ೆಂಗಳೂರು ವಿಶ್ವ ವಿದ್ಯಾನಿಲಯದ ಸಹಕಾರ ...ೊಂದಿಗೆ ಬೆಂಗಳೂರು ಉದ್ಯಾನನಗರದಲ್ಲಿ 10 ...ರ್ಷವನ್ನು ಪೂರ್ಣಗೊಳಿಸಿದ ಬಾಲಕನಾಗಿ ಬೆಳೆದು ನಿಂತಿದೆ. ಆಗಸ್ಟ್ 29, 1987 ರಂದು ಕರ್ನಾಟಕ ಸರ್ಕಾರದ ಗೆಜೆಟ್ ಪ್ರಕಟಣೆಯ ಮೂಲಕ ರಾಷ್ಟ್ರೀಯ ಕಾನೂನು ಶಾಲೆಯನ್ನು ರಾಷ್ಟ್ರೀಯ ಕಾನೂನು ಶಾಲೆ ಕಾಯಿದೆ (ಕರ್ನಾಟಕ ಕಾಯಿದೆ 22, 1986) ಪ್ರಕಾರ ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. ವಿಶ್ವವಿದ್ಯಾನಿಲಯದ ಧನ ಸಹಾಯ ಆಯೋಗದ ಮಾನ್ಯತೆ ಪಡೆದಿರುವ ಈ ಸಂಸ್ಥೆ ಕರ್ನಾಟಕದಲ್ಲಿರುವುದು ನಮ್ಮೆಲ್ಲರಿಗೂ ಅತ್ಯಂತ ಹೆಮ್ಮೆಯ ಸಂಗತಿ.



## ◆ ಶಾಲೆ ಎಲ್ಲಿದೆ?

ನಗರದ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಾಗುವ ದಾರಿಯಲ್ಲಿ ನಾಗರಭಾವಿ ಬಳಿ ಬಲಕ್ಕೆ 18 ಎಕರೆ ವಿಶಾಲ ಆವರಣದಲ್ಲಿ ತಲೆ ಎತ್ತಿ ನಿಂತಿರುವ ಈ ವಿಶ್ವವಿದ್ಯಾನಿಲಯ ಹೊಸ ಆಶೋತ್ತರಗಳನ್ನೊತ್ತ ಯುವ ಕಾನೂನು ವಿದ್ಯಾರ್ಥಿಗಳನ್ನು ಕೈ ಬೀಸಿ ಕರೆಯುತ್ತದೆ. ಈ ಕಾನೂನು ಶಾಲೆಯನ್ನು ಹತ್ತಿರದಿಂದ ಕಾಣ ಬಯಸುವ ವಿದ್ಯಾರ್ಥಿಗಳು ಈ ಕೆಳಗಿನ ವಿಳಾಸದಲ್ಲಿರುವ ಶಾಲೆಗೆ ಖುದ್ದಾಗಿ ಭೇಟಿ ನೀಡಬಹುದು.

ರಾಷ್ಟ್ರೀಯ ವಿಶ್ವವಿದ್ಯಾನಿಲಯದ<br>
ಕಾನೂನು ಶಾಲೆ<br>
ಅಂಚೆ ಪೆಟ್ಟಿಗೆ ಸಂಖ್ಯೆ : 7201, ನಾಗರ ಭಾವಿ,<br>
ಬೆಂಗಳೂರು - 560 072,<br>
ದೂರವಾಣಿ : 330 3160, 3387 858,<br>
ಫ್ಯಾಕ್ಸ್ (080) 3387858<br>
ಇ-ಮೇಲ್:registrar@nls,earnet in

## ◆ ಯಾವ ಕೋರ್ಸುಗಳಿವೆ?

ಈ ಕಾನೂನು ಶಾಲೆಯಿಂದ 6 ಪ್ರಮುಖ ಪದವಿಗಳನ್ನು ಪಡೆಯಬಹುದು ಅವುಗಳೆಂದರೆ

- ಬಿ.ಎ. ಎಲ್.ಎಲ್.ಬಿ
- ಎಲ್.ಎಲ್.ಎಮ್
- ಎಂ. ಫಿಲ್
- ಪಿ.ಎಚ್.ಡಿ.
- ಎಸ್.ಜೆ.ಡಿ. ಮತ್ತು
- ಎಲ್.ಎಲ್.ಡಿ

ಇವುಗಳಲ್ಲಿ ಪ್ರಮುಖವಾದುವೆಂದರೆ ಪಿ.ಯು.ಸಿ. ಮುಗಿದ ನಂತರ ಸೇರಬಹುದಾದ ಬಿ.ಎ. ಎಲ್.ಎಲ್.ಬಿ. ಪದವಿ.

## ◆ ಅರ್ಹತೆ ಏನು?

ಉನ್ನತ ಪ್ರೌಢ ಶಿಕ್ಷಣ (10+2) ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕನಿಷ್ಠ ಶೇಕಡಾ 50 ರಷ್ಟು ಅಂಕಗಳನ್ನು ಗಳಿಸಿ ಉತ್ತೀರ್ಣರಾಗಿರಬೇಕು. ಅಭ್ಯರ್ಥಿಯ ವಯಸ್ಸು ಪ್ರವೇಶ ಪಡೆಯ ಬಯಸುವ ವರ್ಷದ ಜುಲೈ ಒಂದಕ್ಕೆ 20 ವರ್ಷ ಮೀರಿರಬಾರದು. ಆದರೆ ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ವಯೋಮಿತಿಯಲ್ಲಿ

## ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯ

ಇಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ವಸತಿ ನಿಲಯಗಳ ವ್ಯವಸ್ಥೆ ಇದೆ. ಊಟ ಮತ್ತು ವಸತಿ ವ್ಯವಸ್ಥೆಯನ್ನು ಕಲ್ಪಿಸುವ ಇಲ್ಲಿ ಹೆಣ್ಣುಮಕ್ಕಳ ವಸತಿ ನಿಲಯವನ್ನು ಗಂಗಾ ಮತ್ತು ಕಾವೇರಿ ಎಂದು, ಗಂಡು ಮಕ್ಕಳ ವಸತಿ ನಿಲಯವನ್ನು ಹಿಮಾಲಯ ಮತ್ತು ನೀಲಗಿರೀಸ್ ಎಂದು ಕರೆಯಲಾಗುತ್ತದೆ. ವಸತಿ ಸೌಲಭ್ಯಕ್ಕಾಗಿ 5000 ರೂ.ಗಳ ಠೇವಣಿ ಇಡಬೇಕು, ಕೋರ್ಸ್ ನಂತರ ಹಿಂತಿರುಗಿಸಲಾಗುವುದು. ಜೊತೆಗೆ ಪ್ರತಿ ವರ್ಷ 3000 ರೂ.ಗಳಂತೆ ಕೊಠಡಿ ಬಾಡಿಗೆ ನೀಡಬೇಕು. ಅಲ್ಲಿರುವ ಎಲ್ಲ ಸೌಲಭ್ಯಗಳ ಉಪಯೋಗಕ್ಕಾಗಿ 1000 ರೂ.ಗಳನ್ನು ಪಾವತಿ ಮಾಡಬೇಕು. ಊಟಕ್ಕಾಗಿ 800 ರೂ.ಗಳ ಠೇವಣಿ ನೀಡುವುದರ ಜೊತೆಗೆ ಪ್ರತಿ ತಿಂಗಳು 650 ರೂ.ಗಳನ್ನು ನೀಡಬೇಕು. ಠೇವಣಿಯನ್ನು ಕೋರ್ಸ್ ನಂತರ ಹಿಂತಿರುಗಿಸಲಾಗುವುದು.

ಒಟ್ಟಾರೆ ರಾಷ್ಟ್ರೀಯ ಕಾನೂನು ಶಾಲೆ ಭಾರತೀಯ ಶಿಕ್ಷಣದ ಇತಿಹಾಸದಲ್ಲಿ ಒಂದು ಹೊಸ ದಾಖಲೆ ಮತ್ತು ವಿನೂತನ ಪ್ರಯೋಗ. ರಾಷ್ಟ್ರದ 10 ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳಲ್ಲಿ ಒಂದಾಗಿರುವ ಈ ರಾಷ್ಟ್ರೀಯ ಕಾನೂನು ಶಾಲೆ ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿರುವುದು ನಮ್ಮೆಲ್ಲರಿಗೆ ಹೆಮ್ಮೆಯ ಸಂಗತಿ. ಈ ಶಾಲೆ ಇನ್ನೂ ಎತ್ತರಕ್ಕೆ ಬೆಳೆಯಬೇಕಾಗಿದೆ. ಸರ್ಕಾರ ಎಲ್ಲ ಸಹಕಾರವನ್ನು ವಿಶೇಷವಾಗಿ ಶಾಲೆಯ ವಿಸ್ತರಣೆಗೆ ಬೇಕಾಗಿರುವ ಜಾಗವನ್ನು ಕಲ್ಪಿಸಿಕೊಡಬೇಕಾಗಿದೆ.

2 ವರ್ಷಗಳ ರಿಯಾಯಿತಿ ನೀಡಲಾಗುವುದು.

### ◆ ಅರ್ಜಿ ಸಲ್ಲಿಸುವ ವಿಧಾನ

ಈ ಕೋರ್ಸಿಗೆ ಆಯ್ಕೆ ಬಯಸುವ ವಿದ್ಯಾರ್ಥಿಗಳು ರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಪ್ರವೇಶ ಪರೀಕ್ಷೆಗೆ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ರಿಜಿಸ್ಟ್ರಾರ್, ರಾಷ್ಟ್ರೀಯ ಕಾನೂನು ಶಾಲೆ ಇವರಿಗೆ ಸಂದಾಯವಾಗುವಂತೆ ಖರೀದಿಸಿದ 200 ರೂ.ಗಳ ಡಿ.ಡಿ.ಯನ್ನು ನೀಡುವ ಮೂಲಕ ಪಡೆಯಬಹುದು. ಪೂರ್ಣವಾಗಿ ತುಂಬಿದ ಅರ್ಜಿಗಳನ್ನು 100 ರೂ.ಗಳ ಡಿ.ಡಿ.ಯೊಂದಿಗೆ ನಿಗದಿಪಡಿಸಿದ ದಿನಾಂಕದೊಳಗೆ, ರಿಜಿಸ್ಟ್ರಾರ್, ರಾಷ್ಟ್ರೀಯ ಕಾನೂನು ಶಾಲೆ ಇವರಿಗೆ ಸಲ್ಲಿಸಬೇಕು. ಪ್ರತಿ ವರ್ಷ ಜನವರಿ ತಿಂಗಳಲ್ಲಿ ಪ್ರವೇಶಕ್ಕಾಗಿ ಅರ್ಜಿಗಳನ್ನು ನೀಡಲಾಗುವುದು.

### ◆ ಆಯ್ಕೆಯ ವಿಧಾನ

ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ರಾಷ್ಟ್ರೀಯ ಮಟ್ಟದಲ್ಲಿ ಪ್ರಮುಖ ನಗರಗಳಾದ ಬೆಂಗಳೂರು, ನವದೆಹಲಿ, ಕಲ್ಕತ್ತ, ಮುಂಬಯಿ, ಚೆನ್ನೈ ಮತ್ತು ಕೊಚ್ಚಿನ್ ನಗರಗಳಲ್ಲಿ ಏಕಕಾಲದಲ್ಲಿ ಪ್ರವೇಶ ಪರೀಕ್ಷೆ ನಡೆಸಲಾಗುವುದು. ಈ ಪರೀಕ್ಷೆಯು ಎರಡು ಗಂಟೆಗಳ ಕಾಲಾವಧಿಯದ್ದಾಗಿದ್ದು, ಗರಿಷ್ಠ 200 ಅಂಕಗಳನ್ನು ಒಳಗೊಂಡಿರುತ್ತದೆ. ಈ ಪ್ರವೇಶ ಪರೀಕ್ಷೆಯು ವಿದ್ಯಾರ್ಥಿಗಳ ಸಾಮಾನ್ಯ ಜ್ಞಾನ, ಆಂಗ್ಲ ಭಾಷೆ, ಸರಳ ಗಣಿತ ಮತ್ತು ಕಾನೂನು ಶಿಕ್ಷಣದಲ್ಲಿ ವಿದ್ಯಾರ್ಥಿಗಳ ಅಭಿರುಚಿಯನ್ನು ನಿರ್ಧರಿಸುವ ಪರೀಕ್ಷೆಯಾಗಿರುತ್ತದೆ.

ಈ ಪರೀಕ್ಷೆಯು ಪ್ರತಿ ವರ್ಷ ಮೇ ತಿಂಗಳ ಮೊದಲನೇ ಭಾನುವಾರದಂದು ನಡೆಯುತ್ತದೆ.

### ◆ ಎಷ್ಟು ಜನರ ಆಯ್ಕೆ?

ಈ ಕೋರ್ಸಿಗೆ ಒಟ್ಟು 80 ವಿದ್ಯಾರ್ಥಿಗಳನ್ನು ಆಯ್ಕೆ ಮಾಡುತ್ತಾರೆ. ಇದರಲ್ಲಿ ಶೇಕಡಾ 15ರಷ್ಟನ್ನು ಪರಿಶಿಷ್ಟ ಜಾತಿ ಮತ್ತು ಶೇಕಡಾ 7.5 ರಷ್ಟನ್ನು ಪರಿಶಿಷ್ಟ ಪಂಗಡದವರಿಗೆ ಮೀಸಲಿಡಲಾಗುವುದು.

### ◆ ಈ ಕೋರ್ಸಿನ ಅವಧಿ ಎಷ್ಟು?

ಕೋರ್ಸಿನ ಅವಧಿ ಐದು ವರ್ಷಗಳಾಗಿದ್ದು, ಪ್ರತಿ ಶೈಕ್ಷಣಿಕ ವರ್ಷವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗುವುದು. ಪ್ರತಿ ಅವಧಿಯನ್ನು 'ಟ್ರೈಮೆಸ್ಟರ್' ಎಂದು ಕರೆಯಲಾಗುವುದು. ಪ್ರತಿ ಅವಧಿಯಲ್ಲಿ ಕನಿಷ್ಠ 75 ಕಾರ್ಯನಿರತ ದಿನಗಳಿರುತ್ತವೆ. ಪ್ರತಿ ವರ್ಷ ಜುಲೈ ಒಂದರಂದು ತರಗತಿಗಳು ಪ್ರಾರಂಭವಾಗುತ್ತವೆ.

### ◆ ಕೋರ್ಸಿಗೆ ತಗಲುವ ಶುಲ್ಕ?

ಈ ಕೋರ್ಸಿಗೆ ಆಯ್ಕೆಯಾದ ಅಭ್ಯರ್ಥಿಗಳು ಪ್ರತಿ ವರ್ಷ 25,000 ರೂ.ಗಳ ಬೋಧನಾ




ಶುಲ್ಕವನ್ನು ಪಾವತಿ ಮಾಡಬೇಕು. ಈ ಮೊತ್ತವನ್ನು 3 ಕಂತುಗಳಲ್ಲಿ ಪಾವತಿ ಮಾಡಲು ಅವಕಾಶ ನೀಡಲಾಗುವುದು. ಇದರೊಂದಿಗೆ ವಿದ್ಯಾರ್ಥಿಯು ಮೊದಲನೇ ವರ್ಷದ ಪ್ರಾರಂಭದಲ್ಲಿ 1000 ರೂ.ಗಳ ಪ್ರವೇಶ ಶುಲ್ಕ ಮತ್ತು ಹಿಂದಕ್ಕೆ ಪಡೆಯಬಹುದಾದ 1000 ರೂ.ಗಳ ಗ್ರಂಥಾಲಯ ಶುಲ್ಕವನ್ನು ಪಾವತಿ ಮಾಡಬೇಕು. ಈ ಶಾಲೆಯಿಂದ ಪಡೆಯಬಹುದಾದ ಮತ್ತೊಂದು ಪ್ರಮುಖ ಪದವಿಯೆಂದರೆ ಎಲ್.ಎಲ್.ಎಮ್.

### ◆ ಪ್ರವೇಶಕ್ಕೆ ಅರ್ಹತೆ

ಈ ಕೋರ್ಸಿಗೆ ಪ್ರವೇಶ ಬಯಸಿ ಅರ್ಜಿ ಸಲ್ಲಿಸುವ ವಿದ್ಯಾರ್ಥಿಯು ಎಲ್.ಎಲ್.ಬಿ ಪದವಿ ಪರೀಕ್ಷೆಯಲ್ಲಿ ಕನಿಷ್ಠ 50 ರಷ್ಟು ಅಂಕಗಳನ್ನು ಗಳಿಸಿ, ಅಂಗೀಕೃತ ವಿಶ್ವ ವಿದ್ಯಾನಿಲಯದಿಂದ ಪದವಿ ಪಡೆದಿರಬೇಕು.

ಅರ್ಹತೆಯುಳ್ಳ ಅಭ್ಯರ್ಥಿಯು ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು 200 ರೂ.ಗಳ ಡಿ.ಡಿ. ನೀಡುವುದರ ಮೂಲಕ ರಿಜಿಸ್ಟ್ರಾರ್, ರಾಷ್ಟ್ರೀಯ ಕಾನೂನು ಶಾಲೆ ಇವರಿಂದ ಪಡೆಯಬಹುದು.

### ◆ ಆಯ್ಕೆಯ ವಿಧಾನ

ಅರ್ಜಿಗಳನ್ನು ಪರಿಶೀಲಿಸಿದ ನಂತರ ಪ್ರವೇಶ ಪ್ರಕ್ರಿಯೆಗಾಗಿ ಸಮಿತಿಯೊಂದನ್ನು ರಚಿಸಲಾಗುವುದು. ಈ ಪ್ರವೇಶ ಸಮಿತಿಯಲ್ಲಿ ನಿರ್ದೇಶಕರನ್ನೊಳಗೊಂಡಂತೆ ನಿರ್ದೇಶಕರಿಂದ ನಾಮ ನಿರ್ದೇಶನಗೊಂಡ ಮೂವರು ಅಧ್ಯಾಪಕ ವರ್ಗದವರಿರುತ್ತಾರೆ. ಈ ಸಮಿತಿಯ ಅಭ್ಯರ್ಥಿಗಳನ್ನು ಆರಿಸುವಾಗ ಈ ಕೆಳಕಂಡ ಅಂಶಗಳನ್ನು ಪರಿಗಣಿಸುವುದು.

- ಪ್ರವೇಶಕ್ಕಾಗಿ ನಡೆಯುವ ಪ್ರವೇಶ ಪರೀಕ್ಷೆಯಲ್ಲಿ ವಿದ್ಯಾರ್ಥಿಯ ಸಾಮರ್ಥ್ಯ
- ಎಲ್.ಎಲ್.ಬಿ. ಪರೀಕ್ಷೆಯಲ್ಲಿ ಪಡೆದ ಶೈಕ್ಷಣಿಕ ದಾಖಲೆಗಳು ಮತ್ತು
- ಉನ್ನತ ಶಿಕ್ಷಣ ಸಂಶೋಧನೆ ಬಗ್ಗೆ ಅಭ್ಯರ್ಥಿಗಿರುವ ಅಭಿರುಚಿಯನ್ನು ನಿರ್ಧರಿಸಲು ನಡೆಯುವ ಸಂದರ್ಶನ. ಈ ಮೇಲಿನ ಎಲ್ಲ ಅಂಶಗಳನ್ನು ಪರಿಗಣಿಸಿ ಪ್ರವೇಶ ನೀಡಲಾಗುವುದು.

### ◆ ಈ ಕೋರ್ಸಿನ ಅವಧಿ ಎಷ್ಟು?

ಇದು ಎರಡು ವರ್ಷಗಳ ಅವಧಿಯದ್ದಾಗಿದ್ದು ಪ್ರತಿ ವರ್ಷವನ್ನು ಎರಡು ಸೆಮಿಸ್ಟರ್‌ಗಳಾಗಿ ವಿಭಜಿಸಲಾಗಿರುತ್ತದೆ.

### ◆ ಕೋರ್ಸಿಗೆ ತಗಲುವ ಶುಲ್ಕ?

ಆಯ್ಕೆಗೊಂಡ ಪ್ರತಿಯೊಬ್ಬ ವಿದ್ಯಾರ್ಥಿಯು 1000 ರೂ.ಗಳ ಪ್ರವೇಶ ಶುಲ್ಕವನ್ನು ಪಾವತಿ ಮಾಡಬೇಕು. ಇದರೊಂದಿಗೆ 1000 ರೂ.ಗಳನ್ನು ಗ್ರಂಥಾಲಯ ಶುಲ್ಕವನ್ನಾಗಿ ನೀಡಬೇಕು. ಆದರೆ ಈ ಶುಲ್ಕವನ್ನು ಕೋರ್ಸಿನ ನಂತರ ಹಿಂದಿರುಗಿಸಲಾಗುವುದು. ಅಭ್ಯರ್ಥಿಯು ಪ್ರತಿ ವರ್ಷ 3000 ರೂ.ಗಳನ್ನು ಬೋಧನಾ ಶುಲ್ಕವನ್ನಾಗಿ ನೀಡಬೇಕು. ಇದರೊಂದಿಗೆ ಪ್ರತಿಯೊಬ್ಬ ವಿದ್ಯಾರ್ಥಿಯು 3000 ರೂ.ಗಳ ಶೈಕ್ಷಣಿಕ ಪ್ರೋತ್ಸಾಹ ಧನವನ್ನು ನೀಡಬೇಕು.

ಈ ಎರಡು ಪ್ರಮುಖ ಕೋರ್ಸ್‌ಗಳ ಜೊತೆಗೆ ಎಂ.ಫಿಲ್., ಪಿ.ಎಚ್.ಡಿ, ಎಸ್.ಜೆ.ಡಿ ಮತ್ತು ಎಲ್.ಎಲ್.ಬಿ. ಪದವಿಗಳಿಗಾಗಿ ನಿಗದಿತ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಲಾಗುವುದು. ಈ ಪದವಿಗಳಿಗೆ ಪ್ರವೇಶ ನೀಡುವ ಸಂದರ್ಭದಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ದಾಖಲೆ ಮತ್ತು ಇದಕ್ಕಾಗಿ ಮೀಸಲಿರುವ ಲಿಖಿತ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳ ಸಾಮರ್ಥ್ಯವನ್ನು ಪರಿಗಣಿಸಿ ಆಯ್ಕೆ ಮಾಡಲಾಗುವುದು. ಇದಲ್ಲದೆ ಅಂಚೆ ಮತ್ತು ತೆರಪಿನ ಶಿಕ್ಷಣದ ಮೂಲಕ ಎಂ.ಬಿ.ಎಲ್. ಮತ್ತು ಮಾನವ ಹಕ್ಕುಗಳಲ್ಲಿ ಡಿಪ್ಲೊಮಾ ಪದವಿಯನ್ನು ಪಡೆಯಬಹುದು. ■

## ಡಿಪ್ಲೋಮಾ ಪರೀಕ್ಷೆಗೆ ನೋಂದಣಿ

ತಾಂತ್ರಿಕ ಪರೀಕ್ಷಾ ಮಂಡಲಿ, ಹೊಸ ಪಠ್ಯಕ್ರಮದನ್ವಯ 1999ರ ನವೆಂಬರ್ ತಿಂಗಳಲ್ಲಿ ನಡೆಸಲಿರುವ ಡಿಪ್ಲೊಮಾ ಪರೀಕ್ಷೆಗಳಿಗೆ ಬಾಹ್ಯ ಅಭ್ಯರ್ಥಿಗಳಾಗಿ ನೋಂದಾಯಿಸಲು ಅರ್ಹರಿಂದ ಅರ್ಜಿ ಆಹ್ವಾನಿಸಿದೆ. ಅರ್ಜಿಗಳನ್ನು ಮಾ.31ರ ಒಳಗೆ ಕಾರ್ಯದರ್ಶಿ, ತಾಂತ್ರಿಕ ಪರೀಕ್ಷಾ ಮಂಡಲಿ, ಬೆಂಗಳೂರು ಇವರಿಂದ ರೂ.30 ಶುಲ್ಕ ಪಾವತಿಸಿ ಪಡೆಯಬಹುದು. ಈಗಾಗಲೇ ಅರ್ಜಿ ನಮೂನೆಗಳನ್ನು ಕೊಡಲಾಗುತ್ತಿದೆ.

ಹೊರ ರಾಜ್ಯದಲ್ಲಿ ಎಸ್‌ಎಸ್‌ಎಲ್‌ಸಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು ರೂ. 100 ಶುಲ್ಕ ಪಾವತಿಸಿ ಮೇಲಿನ ದಿನಾಂಕದ ಒಳಗೆ ಅರ್ಹತಾ ಪ್ರಮಾಣ ಪತ್ರ ಪಡೆಯಬೇಕು. ಮಾರ್ಚ್ 31ರ ಒಳಗೆ ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಬೇಕು ಎಂದು ತಾಂತ್ರಿಕ ಪರೀಕ್ಷಾ ಮಂಡಲಿಯ ಪ್ರಕಟಣೆ ತಿಳಿಸಿದೆ.

## ಆಯುರ್ವೇದ ತರಬೇತಿ

ಬೆಂಗಳೂರು ನಗರದ ಮಲ್ಲೇಶ್ವರದಲ್ಲಿರುವ ಪ್ರಶಾಂತಿ ಆಯುರ್ವೇದ ಕೇಂದ್ರದ ಆಶ್ರಯದಲ್ಲಿ 'ಆಯುರ್ವೇದ ತರಬೇತಿ' ಶಿಬಿರವನ್ನು ಏರ್ಪಡಿಸಲಾಗಿದೆ.

ಬರುವ ಫೆಬ್ರವರಿ 10 ರಿಂದ 17 ರವರೆಗೆ ನಡೆಯಲಿರುವ ಈ ಶಿಬಿರದಲ್ಲಿ ಆಯುರ್ವೇದ ವೈದ್ಯ ಪದ್ಧತಿಯ ಬಗ್ಗೆ ಮಾಹಿತಿ ಹಾಗೂ ತರಬೇತಿ ನೀಡಲಾಗುವುದು.

ಆಸಕ್ತರು ತರಬೇತಿಯ ವಿವರಗಳಿಗೆ ಪ್ರಶಾಂತಿ ಆಯುರ್ವೇದಿಕ್ ಕೇಂದ್ರ, ನಂ.51, 7ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು (ದೂರವಾಣಿ: 3341105) ಇವರನ್ನು ಸಂಪರ್ಕಿಸಬಹುದು.

# ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ

## ಸಾಮಾನ್ಯ ಜ್ಞಾನ

1. ಶಾಖ ಹಾಗೂ ರೇಡಿಯೋ ಅತಿಗಳನ್ನು ಉತ್ಪಾದಿಸುವ ಗ್ರಹ ಯಾವುದು?
2. "FORWARD BLOCK" ಎಂಬ ಯುವ ಸಂಘಟನೆಯನ್ನು ಹುಟ್ಟು ಹಾಕಿದವರು ಯಾರು?
3. ಆರ್ಕಿಮಿಡಿಸನು ಜನಿಸಿದ ನಡುಗಡ್ಡೆ ಯಾವುದು?
4. ಸದ್ಯ ಕರ್ನಾಟಕದಲ್ಲಿರುವ ಗ್ರಾಮ ಪಂಚಾಯಿತಿಗಳ ಸಂಖ್ಯೆ ಎಷ್ಟು?
5. 'ತಿಸೋಥ' ಎಂಬುದು ಒಂದು ಸಣ್ಣ ದೇಶದ ಹೆಸರು; ಇದು ಯಾವ ಖಂಡದಲ್ಲಿ ಬರುತ್ತದೆ?
6. ಜಪಾನ್ ದೇಶದ ಪ್ರಧಾನಿ ಯಾರು?
7. 11 ಆಸ್ಕರ್ ಪ್ರಶಸ್ತಿಗಳನ್ನು ಗೆದ್ದುಕೊಂಡ 'ಟೈಟಾನಿಕ್' ಚಲನ ಚಿತ್ರದ ನಾಯಕ ಯಾರು?
8. ಏಷಿಯಾ ಖಂಡದ ಎರಡನೇ ದೊಡ್ಡ ಕಂಪ್ಯೂಟರ್ ಯಾವುದು?
9. ಪ್ರಪಂಚದಲ್ಲಿರುವ ಮೆಗಾಸಿಟಿಗಳ ಸಂಖ್ಯೆ ಎಷ್ಟು?
10. ಜಗತ್ತಿನ ದೊಡ್ಡ ವಸ್ತುಸಂಗ್ರಾಲಯ ಎಲ್ಲಿದೆ?
11. ಪಕ್ಷಿಗಳ ಮಾರುಕಟ್ಟೆ ಎಲ್ಲಿದೆ?
12. ಇತ್ತೀಚೆಗೆ ಪಾಕಿಸ್ತಾನದಲ್ಲಿ ವಾರ್ಷಿಕ ದಿನದಂದು 'ಭಾರತದ ರಾಷ್ಟ್ರ' ಧ್ವಜವನ್ನು ಕೆಲವರು ಆರಿಸಿದ್ದಾರೆಂದು ಸುದ್ದಿಯಾಯ್ತು, ಅದು ಯಾವ ಸ್ಥಳ?
13. ಜಪಾನ್ ದೇಶದ ಸದ್ಯದ ಪುರುಷರ ಹಾಗೂ ಸ್ತ್ರೀಯರ ಆಯುಷ್ಯ ಪ್ರಮಾಣವೆಷ್ಟು?
14. 16ನೇ ಕಾಮನ್‌ವೆಲ್ತ್ ಕ್ರೀಡಾಕೂಟ ನಡೆದ ಸ್ಥಳ ?
15. 16ನೇ ಕಾಮನ್‌ವೆಲ್ತ್ ಕ್ರೀಡಾಕೂಟದ ಶೂಟಿಂಗ್ ಸ್ಪರ್ಧೆಯಲ್ಲಿ ರಜತ ಪದಕ ಗಳಿಸಿದ ಭಾರತೀಯನಾರು?
16. 65ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಎಲ್ಲಿ ನಡೆಯಿತು?
17. ಜಾರಿ ನಿರ್ದೇಶನಾಲಯದಿಂದ ದೆಹಲಿ ಸರಕಾರಕ್ಕೆ ವರ್ಗಾವಣೆ ಆಗಿ ಸುದ್ದಿಗೆ ಗ್ರಾಸವಾಗಿದ್ದ ವ್ಯಕ್ತಿ ಯಾರು?
18 "The show must go on" ಇದು ಏನು?
19. ಜೋಗದಲ್ಲಿ ಶರಾವತಿ ನದಿ ಎಷ್ಟು ಅಡಿಗಳಿಂದ ಧುಮುಕುತ್ತಿದೆ?
20. ಮೈಸೂರು ರಾಜ್ಯ ಉದಯವಾಗಿದ್ದು ಎಂದು?
21. 'ಸತ್ಯಶೋಧಕ ಸಮಾಜ'ವನ್ನು ಯಾರು, ಎಂದು ಸ್ಥಾಪಿಸಿದರು?
22. ''ಪಿಟ್ಸ್ ಇಂಡಿಯಾ ಆ್ಯಕ್ಟ್''ನ್ನು ಎಂದು ಅಂಗೀಕರಿಸಲಾಯ್ತು?
23. ಕಾರ್ನ್‌ವಾಲೀಸನು ಟಿಪ್ಪು ಸುಲ್ತಾನನನ್ನು ಎಷ್ಟನೇ ಮೈಸೂರು ಯುದ್ಧದಲ್ಲಿ ಸೋಲಿಸಿದ?
24. ಸೂರ್ಯ ಮುಳುಗದ ನಾಡೆಂದು ಹೆಸರಾದ ರಾಷ್ಟ್ರ ಯಾವುದು?
25. ಕಳೆದ ವರ್ಷ ವಿಶ್ವಸಂಸ್ಥೆಯ ದಿಗ್ಬಂಧನದಿಂದ ಇರಾಕ್‌ನಲ್ಲಿ ಸಾವಿಗೀಡಾದ ಜನರ ಸಂಖ್ಯೆ?
26. ಪ್ರಥಮ ಮಹಿಳಾ ವಿಶ್ವಕಪ್ (ಕ್ರಿಕೆಟ್) ಎಂದು ನಡೆಯಿತು?
27. ಸದ್ಯ ಬ್ರಿಟನ್ನಿನ ಆಡಳಿತ ಪಕ್ಷ ಯಾವುದು?
28. ಆಸ್ಟ್ರೇಲಿಯನ್ನರ ಧರ್ಮ ಯಾವುದು?
29. ವಿಶ್ವದಲ್ಲೇ ಹೆಚ್ಚು ಅಂಚೆ ಕಛೇರಿಗಳಿರುವ ರಾಷ್ಟ್ರ ಯಾವುದು?
30. ರೈನ್-ಗೇಜ್ (Rain-guage)ನ್ನು ಯಾವುದಕ್ಕೆ ಬಳಸುತ್ತಾರೆ?
31. 1909ರಲ್ಲಿ ಭೌತಶಾಸ್ತ್ರದಲ್ಲಿ ನೊಬೆಲ್ ಬಹುಮಾನ ಪಡೆದ ಸರ್ವಶ್ರೇಷ್ಠ ವಿಜ್ಞಾನಿ ಯಾರು?
32. 'ಇಂಡಿಯಾ' ಎಂಬ ಪದದ ಮೂಲ?
33. ಉಪನಿಷತ್ತುಗಳ ಸಂಖ್ಯೆ ಎಷ್ಟು?
34. ''ಹುಚ್ಚುಮನಸ್ಸಿನ ಹತ್ತು ಮುಖಗಳು'' ಕಾದಂಬರಿಯ ಕಾದಂಬರಿಕಾರನಾರು?
35. 1992-93ರಲ್ಲಿ ಮುಂಬೈಯಲ್ಲಿ ನಡೆದ ಗಲಭೆಗಳಿಗೆ ಸಂಬಂಧಿಸಿದ ವಿಚಾರಣೆ ನಡೆಸಲು ನೇಮಿಸಿದ ಆಯೋಗ ಯಾವುದು?
36. ವಿಶ್ವದಲ್ಲಿರುವ ಶ್ರೀಮಂತ ರಾಷ್ಟ್ರಗಳ ಸಂಖ್ಯೆ?
37. 'ಡ್ಯೂಸ್' (Duce) ಪದ ಯಾವ ಆಟಕ್ಕೆ ಸಂಬಂಧಿಸಿದ್ದು?
38. ಅಮೇರಿಕದ ಅಧ್ಯಕ್ಷ ಲಿಂಕನ್ ಅವರು ಕೊಲೆಗಿಡಾದದ್ದು ಚಿತ್ರಮಂದಿರವೊಂದರಲ್ಲಿ, ಆ ಚಿತ್ರ ಮಂದಿರದ ಹೆಸರೇನು?
39. ಇತ್ತೀಚೆಗೆ ಕೇಂದ್ರದಲ್ಲಿ ರಾಜ್ಯದ ಪ್ರತಿನಿಧಿಯಾಗಿ ನೇಮಕವಾಗಿರುವ ಮಾಜಿ ಸಚಿವರಾರು?
40. ಸದ್ಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಯಾರು?
41. ಯುರೋಪ್ ಖಂಡದ ದೊಡ್ಡ ನದಿ ಯಾವುದು?
42. ''ಹುಳಿಮಾವಿನ ಮರ'' ಪುಸ್ತಕದ ಲೇಖಕರಾರು?
43. ಕೆ.ಆರ್.ನಾರಾಯಣನ್‌ಗೆ ಇತ್ತೀಚೆಗೆ ಟರ್ಕಿ ದೇಶ ತನ್ನ ಗೌರವಾರ್ಥ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ. ಯಾವ ವಿಶ್ವವಿದ್ಯಾಲಯ ಈ ಪದವಿ ನೀಡಿತು?
44. 'ಟಿ.ಪಿ.ಕೈಲಾಸಂ'ರವರ ಪೂರ್ಣ ಹೆಸರೇನು?
45. ಸ್ವಾಮಿ ವಿವೇಕಾನಂದರ ಆಧ್ಯಾತ್ಮಿಕ ಗುರು ಯಾರು?
46. ''ಬದಲಾದ ಪರಿಸರಕ್ಕೆ ಹೊಂದಿಕೊಳ್ಳುವುದೇ ಶಿಕ್ಷಣ'' ಅಂತ್ಹೇಳಿದವರು ಯಾರು?
47. ಇತ್ತೀಚೆಗೆ ಭೀಕರ ಬರಗಾಲಕ್ಕೆ ತುತ್ತಾಗಿದ್ದ ಆಫ್ರಿಕಾ ಖಂಡದ ರಾಷ್ಟ್ರ ಯಾವುದು?
48. ಕನ್ನಡದ ಮೊದಲ ಮಹ್ಮದೀಯ ಕವಿ ಯಾರು?
49. ರಾಷ್ಟ್ರೀಯ ಜನತಾದಳದ ನಿರ್ಮಾಪಕರು ಯಾರು?
50. ಯಾವುದೇ ರಾಜ್ಯ ಸರಕಾರವನ್ನು ವಜಾ ಮಾಡಲು ಇರುವ ಸಂವಿಧಾನದ ಕಲಂ ಯಾವುದು?

## ಉತ್ತರಗಳು

1. ಗುರು, 2. ಸುಭಾಷ್‌ಚಂದ್ರಬೋಸ್, 3. ಸಿರಾಕ್ಯುಜ್, 4. 5640, 5. ಆಫ್ರಿಕಾ, 6. ಕ್ವೆಜೊ ಒಬುಚಿ, 7. ಡಿಕ್ಯಾಪ್ರಿಯೊ, 8. ಪರಮ್ 1000, 9. 20, 10. ಯು.ಎಸ್.ಎ., 11. ಹೈದರಾಬಾದ್, 12. ಹೈದರಾಬಾದ್ (ಸಿಂದ್), 13. ಪುರುಷರು 77.17 ಹಾಗೂ ಸ್ತ್ರೀಯರು 82.82, 14. ಕೌಲಾಲಂಪುರ, 15. ಭವರ್‌ಲಾಲ್ ಢಾಕಾ, 16. ಹಾಸನ, 17. ಎಂ.ಕೆ.ಬೇಜ್ ಬರುಹಾ, 18. ಇಂಗ್ಲಿಷ್ ನಾಣ್ನುಡಿ, 19. 900 ಅಡಿ, 20. 1956 ನವೆಂಬರ್, 21. ಜ್ಯೋತಿರಾವ್ ಫುಲೆ 1873ರಲ್ಲಿ, 22. 1784ರಲ್ಲಿ, 23. 3ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ, 24. ನಾರ್ವೆ, 25. 7000, 26. 1973, 27. ಲೇಬರ್ ಪಾರ್ಟಿ, 28. ಕ್ರಿಶ್ಚಿಯನ್, 29. ಚೀನ, 30. ಮಳೆಯ ಪ್ರಮಾಣ ಅಳೆಯಲು, 31. ಮಾರ್ಕೋನಿ, 32. ಗ್ರೀಕ್, 33. 108, 34. ಡಾ.ಕೋಟಶಿವರಾಮ ಕಾರಂತ, 35. ಶ್ರೀಕೃಷ್ಣ, 36. 36, 37. ಟೆನ್ನಿಸ್, 38. ಫೋರ್ಡ್, 39. ಬಸವರಾಜ ರಾಯರೆಡ್ಡಿ, 40. ಎನ್. ಬಸವರಾಧ್ಯ, 41. ವೋಲ್ಗಾ, 42. ಪಿ.ಲಂಕೇಶ್, 43. ಅಂಕಾರಾ, 44. ತ್ಯಾಗರಾಜ ಪರಮಶಿವ ಕೈಲಾಸಂ, 45. ರಾಮಕೃಷ್ಣ ಪರಮಹಂಸ, 46. ಡಾ. ಎಸ್. ರಾಧಾಕೃಷ್ಣನ್, 47. ಸುಡಾನ್, 48. ಶಿಶುನಾಳ ಷರೀಫ್, 49. ಎಲ್.ಪಿ.ಯಾದವ್, 50. 356.

– ಶಿ.ಕಾ.ಬಡಿಗೇರ

# ನೀವೂ ಇಂಗ್ಲಿಷ್ ಕಲಿಯಿರಿ | ಭಾಗ-13

## ಸಾಮಾನ್ಯರೂ ಸುಲಭವಾಗಿ ಇಂಗ್ಲಿಷ್ ಕಲಿಯಬಹುದಾದ ಸರಳ ಮಾರ್ಗ ಇಲ್ಲಿದೆ

(ಹಿಂದಿನ ಸಂಚಿಕೆಯಿಂದ)

### ಕ್ರಿಯಾಪದ - Verb

ಜಾನಕಿ : ಜಾನ್, ಸುಮಾರು ಒಂದು ವರ್ಷದಿಂದ ನೀನು ಹೇಳ್ತಾ ಇದ್ದಿ, ನಾನು ಕೇಳ್ತಾ ಇದ್ದೇನೆ. ನನಗೆ ಇಂಗ್ಲಿಷ್ ಮಾತಾಡಲಿಕ್ಕೆ ಇನ್ನೂ ಬರುವುದಿಲ್ಲವಲ್ಲ.

ಜಾನ್ : ಅಂದರೆ ಸಂಭಾಷಣೆ (Conversation) ಮಾಡೋದಿಕ್ಕೆ ಬರುವುದಿಲ್ಲ. ಹೌದಾ?

ಜಾನಕಿ : ಕರೆಕ್ಟ್. ಅಂದರೆ ಇಂಗ್ಲಿಷ್ ಬಂದ ಹಾಗೆ.

ಜಾನ್ : ಜಾನಕಿ, ನೀನು ಬುದ್ಧಿವಂತೆ ಅಂತಾ ಮಾಡಿದ್ದೆ. ಇಂಗ್ಲಿಷ್ ವ್ಯಾಕರಣ ಇನ್ನೂ ಮುಗಿದಿಲ್ಲ...

ಜಾನಕಿ : ಮತ್ತೆ... ಒಂದು ವರ್ಷ ಏನು ಕಲಿಸಿದೆ.

ಜಾನ್ : ವ್ಯಾಕರಣದ ಸಂಗಡ ಶಬ್ದಗಳನ್ನು ತಲೆಯಲ್ಲಿ ಸಂಗ್ರಹಿಸಬೇಕು.

ಜಾನಕಿ : ನಾನೇನು ಬಟಾಟೆ ಸಂಗ್ರಹಿಸಿದ್ದೇನಾ! ಕಲಿತು.

ಜಾನ್ : ಇರಲಿ. ಇವತ್ತು ಮುಖ್ಯ ಮೂರು ಕಾಲ (Tenses) ಸಂಗಡ ಉಳಿದ ಒಂಬತ್ತು ಕಾಲಗಳಲ್ಲಿ ವಾಕ್ಯ ರಚನೆ ಕಲಿಯುವಾ.

ಜಾನಕಿ : ಒಂದೊಂದೆ ಹೇಳು. Present Tense ಮೊದಲು ಹೇಳು.

ಜಾನ್ : ಆಗಲಿ.
i) **Present Tense** - I **learn** English
ii) **Present Continuous Tense-I am learning** English
iii) **Present Perfect Tense** - I **have learnt** English
iv) **Present Perfect Continuous Tense** - I **have been learning** English.

ಜಾನಕಿ : ಇವುಗಳ ಅರ್ಥ ಹೇಳಿದರೆ ಬಹಳ....

ಜಾನ್ : ನಾನು ಹೇಳ್ತೇನೆ. ನಾಲ್ಕನೇ ಕಾಲ ಕನ್ನಡದಲ್ಲಿ ಹೇಳುವುದು ಕಷ್ಟ. ಅದು ಕನ್ನಡದಲ್ಲಿ ಇಲ್ಲ ಅಂದರೂ ಅಡ್ಡಿ ಇಲ್ಲ.

ಜಾನಕಿ : ಹೋಗಲಿ, ನಿನಗೆ ಎಷ್ಟು ಬರ್‍ತದೆ (ಗೊತ್ತಿದೆ) ಅಷ್ಟೇ ಹೇಳು.

ಜಾನ್ : **i) Pr. Tense** - ನಾನು ಇಂಗ್ಲಿಷ್ ಕಲಿಯುತ್ತೇನೆ.
**ii) Pr. Cont. Tense** - ನಾನು ಇಂಗ್ಲಿಷ್ ಕಲಿಯುತ್ತಿರುತ್ತೇನೆ (ಕಾರ್ಯ ನಡೆದಿರುತ್ತದೆ).
**iii) Pr. Per. Tense** -ನಾನು ಇಂಗ್ಲಿಷ್ ಕಲಿತಿದ್ದೇನೆ. ಅಂದರೆ ಕ್ರಿಯೆ ಅದೆ ಮುಗಿದಿರುತ್ತದೆ. (ಆದರೆ ಭೂತಕಾಲವಲ್ಲ)
**iv) Pr. Per. Cont. Tense**- ನಾನು ಇಂಗ್ಲಿಷ್ ಕಲಿಯುತ್ತಿದ್ದೇನೆ.

ಜಾನಕಿ : Now **I am learning**- Present Continuous Tense. And you **are teaching** English.

ಜಾನ್ : Very good. ಈಗ
i) **Past Tense-**I **learnt** English- ನಾನು ಇಂಗ್ಲಿಷ್ ಕಲಿತೆನು.
ii) **Past Cont. Tense** - I **was learning** English - ನಾನು ಇಂಗ್ಲಿಷ್ ಕಲಿಯುತ್ತಿದ್ದನು.
**iii) Past Perfect Tense** - I **had learnt** English - ನಾನು ಇಂಗ್ಲಿಷ್ ಕಲಿತಿದ್ದ.
**iv) Past Perfect Cont. Tense-I had been learning** English- ನಾನು ಇಂಗ್ಲಿಷ್ ಕಲಿಯುತ್ತಾ ಇದ್ದನು.

ಜಾನಕಿ : Yes. I **had learnt** English.

ಜಾನ್ : ವಾಕ್ಯ ಸರಿ. ಆದರೆ ಸಂದರ್ಭಕ್ಕೆ ಸರಿಯಾಗುವುದಿಲ್ಲ. I **have learnt** English. ಇದು ಸರಿಯಾದ ವಾಕ್ಯ. ಅಂದರೆ ನಾನು ಇಂಗ್ಲಿಷ್ ಕಲಿತೆನು.

ಜಾನಕಿ : ಸರಿ, ಇನ್ನು ಭವಿಷ್ಯತ್‌ಕಾಲ ಹೇಳು. ಅರ್ಥ ಹೇಳದಿದ್ದರೂ ನಡಿಯುತ್ತದೆ.

ಜಾನ್ : ಭವಿಷ್ಯತ್‌ಕಾಲ
**Future Tense** - I **shall learn** English.
**Future Continuous Tense** - I **shall be learning** English.
**Future Perfect Tense** - I **shall have learnt** English.
**Future Perfect Continuous Tense** - I **shall have been learning** English

ಜಾನಕಿ : ಈಗ ಕೇಳು. ನಾನು ಸಂಕ್ಷಿಪ್ತವಾಗಿ ಹೇಳ್ತೇನೆ.
**Future Tense - Shall / Will** ಉಪಯೋಗಿಸುವುದು.
**Perfect Tense- have/had, learnt,** ಅಂದರೆ ಕ್ರಿಯಾಪದದ **Past Participle** ಬೇಕು.
**Continuous Tense** - ಕಾಲಕ್ಕೆ ಸರಿಯಾಗಿ to be ಇದರ ರೂಪ. ಮತ್ತೆ ಕ್ರಿಯಾಪದದ (ಕ್ರಿಯೆ ಇರೋದು) **Participle (-ing** ಜೋಡಿಸುವುದು) ಬರೆಯುವುದು.
**Perfect Tense - have been** ಜೊತೆ ಕ್ರಿಯಾಪದಕ್ಕೆ **-ing** ಪ್ರತ್ಯಯ ಹಚ್ಚುವುದು.

ಜಾನ್ : ಜಾನಕಿ, ಏಕಪಾಠಿ. Second Personದಲ್ಲಿ ಒಂದೊಂದು ಉದಾಹರಣೆ ಹೇಳು.

ಜಾನಕಿ : ಏನು ? ಅದೇನು ದೊಡ್ಡದೇನು? ಕೇಳು ಹಾಗಾದರೆ.

ಜಾನ್ : ಶುರು ಮಾಡು.

ಜಾನಕಿ : i) You **learn** English. ii) You **are learning** English.
iii) You **have learnt** English.
iv) You **will have been learning** English.

ಜಾನ್ : ಎಕ್ಸಲೆಂಟ್. ಇನ್ನೊಂದೆರಡು ಪಾಠದ ನಂತರ ಸಂಭಾಷಣೆ ಮಾಡಲಿಕ್ಕೆ ಬರುತ್ತದೆ. ನಾವು ಈಗ ಮಾಡಿದ್ದು ಕೇವಲ 12 ಪಾಠ. ಇರಲಿ. ಜಾನಕಿ, ನೀನು **Third Person Singular** ನಲ್ಲಿ ಹೇಳಿದರೆ, (ತಪ್ಪು ಮಾಡದೇ) ನಿನಗೆ ಇಂಗ್ಲಿಷ್ ಬಂದ ಹಾಗೆ....

ಜಾನಕಿ : ಸರಿ. ಒಂದೈದು ನಿಮಿಷ ಬಿಡುವು ಕೊಡು...

ಜಾನ್ : ಆಗಲಿ. ಅಂದರೆ Copy ಮಾಡೋಕ......

ಜಾನಕಿ : ಅಲ್ಲಪ್ಪ, ಅಲ್ಲ. ಸ್ವಲ್ಪ ವಾಕ್ಯದ ಮೇಲೆ ಕಣ್ಣಾಡಿಸುತ್ತೇನೆ. ಇರಲಿ ಬಿಡು. ಈಗ ಕೇಳು.

i) Sita **learns** English.
ii) Sita **is learning** English.
iii) Sita **has learnt** English.
iv) Sita **will have been learning** English.

ಜಾನ್ : ಅಮ್ಮಣ್ಣಿ, ಇಂಗ್ಲಿಷ್ ಬಂತಲ್ಲ. ಇದನ್ನು ಇಂಗ್ಲಿಷ್‌ನಲ್ಲಿ ಹೇಳು.

ಜಾನಕಿ : I **have learnt** English.

ಜಾನ್ : Very Good. ಈಗ ಮುಂದುವರಿಯೋಣ. ಅಂದರೆ Adverb ಕಲಿಯೋಣ. **Adverb - ಕ್ರಿಯಾವಿಶೇಷಣ.** ಕ್ರಿಯಾ ಪದವನ್ನು ವರ್ಣಿಸುವ ಕಾರ್ಯ ಮಾಡುತ್ತದೆ. ಉದಾ. **Walk-Fast** ವೇಗವಾಗಿ ನಡೆಯುವುದು.

ಜಾನಕಿ : John shouts **loudly**.

ಜಾನ್ : ಸರಿ. ನಾನು ಗಟ್ಟಿಸಿ ಮಾತಾಡದಿದ್ದರೂ ಹೇಳ್ತಿ. ಇರಲಿ.

**ADVERB - ಕ್ರಿಯಾವಿಶೇಷಣ**

ಈ ಪದವನ್ನು ಅರ್ಥಕ್ಕನುಗುಣವಾಗಿ ಏಳು ಭಾಗಗಳಲ್ಲಿ ವಿಂಗಡಿಸಿದ್ದಾರೆ.

**i) Adverb of Time- ಕಾಲವಾಚಕ ಕ್ರಿಯಾವಿಶೇಷಣ.** ಸಮಯ ಸೂಚಿಸುವ ಕ್ರಿಯಾವಿಶೇಷಣಗಳು. ಉದಾ. **now, then, before, soon, today** ಮುಂತಾದವು.

ಜಾನಕಿ : ಜಾನ್, ಇವೆಲ್ಲ ಗೊತ್ತು. ನೀನು ಹೊಸದೇನೊ ಹೇಳಿದ್ದಂಗೆ ಆಯಿತು?

ಜಾನ್ : ಜಾನಕಿ, ಗೊತ್ತಿಲ್ಲದ್ದನ್ನು ಕಲಿಸುವುದಿಲ್ಲ. ಆದರೆ ಅದಕ್ಕೆ ಏನು ಅಂತಾರೆ, ಉಪಯೋಗ ಹೇಗೆ? ಮುಂತಾದವುಗಳನ್ನು ಕಲಿಸೋದು. ಅದು ಸರಿಯಾಗಿ ಬಂದರೆ ಇಂಗ್ಲಿಷ್ ತಾನೇ ಓಡಿ ಬರುವುದು.

**ii) Adverb of Manner-ರೀತಿ ವಾಚಕ ಕ್ರಿಯಾವಿಶೇಷಣ.** ಹೆಸರೇ ಹೇಳುವಂತೆ ರೀತಿಯನ್ನು ಸೂಚಿಸುವುದು. ಉದಾ. **Easily, Clearly, Soundly, Sadly, Bravely** etc.
You **speak clearly.**

**iii) Adverb of Place - ಸ್ಥಳವಾಚಕ ಕ್ರಿಯಾವಿಶೇಷಣ**
**Here, There, Below, Above, Everywhere.**
The horse is standing **above** the platform.

**iv) Adverb of Negation or Affirmation - ನಿಷೇದಾರ್ಥ ಅಥವಾ ನಿಶ್ಚಯಾರ್ಥಕ ವಿಶೇಷಣ** - ಉದಾ. **no, not, never** ಹಾಗೂ **certainly, surely** etc.
I know **not** what it is! He will do it **certainly**.

**v) Adverb of Number or Frequency-ಸಂಖ್ಯಾ ವಾಚಕ ವಿಶೇಷಣ** - ಉದಾ. **Once, Twice, Often, Always, Again.**
i) The teacher explained **twice**
ii) The student requested **again.**

ಜಾನಕಿ : ಕ್ರಿಯಾವಿಶೇಷಣದ ವಿವಿಧ ನಮೂನೆಗಳ ಅರ್ಥ (ವಿವರಣೆ) ಕೊಡುವುದಿಲ್ಲೇನು?

ಜಾನ್ : ನೀನು ಇಷ್ಟು ದಡ್ಡಿ ಅಂತ ಗೊತ್ತಿರಲಿಲ್ಲ. ಕನ್ನಡದಲ್ಲಿ ಹೇಳ್ತೇನೆ. ಆದರೂ ತಿಳಿಯುವುದಿಲ್ಲಾ!

ಜಾನಕಿ : ಅದಕ್ಕೂ ಹೆಚ್ಚಿಗೆ ಇರಬಹುದೆಂದು ಕೇಳಿದೆ. ನಾನು ದಡ್ಡಿ ಅನ್ನುವುದು ಈಗ ಗೊತ್ತಾಯಿತಾ, ನೀ ಎಷ್ಟು ದಡ್ಡ ಇರಬೇಕು.

ಜಾನ್ : ಈಗ ಕೇಳು

**vi) Adjective Degree of Quantity - ಪ್ರಮಾಣ ಸೂಚಕ ಕ್ರಿಯಾವಿಶೇಷಣ :**
ಉದಾ. **Some, Any, Enough, Partly, Much** etc.
My Father brought **some** fruits.
My Sister did not eat **much**.

**vii) Adverb of Interrogative -ಪ್ರಶ್ನಾರ್ಥಕ ಕ್ರಿಯಾವಿಶೇಷಣ.**
ಉದಾ. **How, When, Where,** etc.
i) **How** do you **go** to school?
ii) **When** will you come?

## ಕೊನೆ ಹನಿ

ಜಾನ್ : ಕೆಲವು ಕ್ರಿಯಾವಿಶೇಷಣ ಹೇಳ್ತೀನೆ. ಅವು ಯಾವುವು ಅನ್ನುವುದನ್ನು ಹೇಳು?
i) Daily ii) Yesterday iii) Seldom iv) Frequently v) Below

ಜಾನಕಿ : i)ಮತ್ತು ii) Adverb of Time, iii)ಮತ್ತು iv) Adverb of Number ಮತ್ತು v) Adverb of place.

ಜಾನ್ : ಮುಂದಿನ ಸಲ
vi) **Preposition** - ಉಪಸರ್ಗಾವ್ಯಯ.
vii) **Conjunction** - ಸಮುಚ್ಚಾಯಕ ಅವ್ಯಯ
viii)**Interjection** - ಉದ್ಗಾರವಾಚಕ

## ಶಬ್ದ ಸಂಪತ್ತು

**ಪ್ರತಿ ಶಬ್ದಕ್ಕೆ 4 ಅರ್ಥಕೊಟ್ಟಿದ್ದು, ಕೊಟ್ಟ ಶಬ್ದದ ಸಮಾನಾರ್ಥ ಪದ ಹುಡುಕಿರಿ, ನಂತರ ಉತ್ತರ ನೋಡಿ.**

a. Morose - ಅ. ಪಶ್ಚಾತ್ತಾಪ ಬ. ದುಃಖದಾಯಕ ಕ. ಉತ್ಸಾಹ ಡ. ಚಿಂತಾಕ್ರಾಂತ, ಕಳೆಗುಂದಿದ

b. Calcumny - ಅ. ಅಂಕಣ ಬ. ಅಪರಾಧ ಕ. ಅಗೌರವ ಡ. ಸೂಕ್ಷ್ಮ

c. Privation - ಅ. ಖಾಸಗಿ ಬ. ಭದ್ರತೆ ಕ. ಕಷ್ಟಕರ ಡ. ಬೇರೆಬೇರೆ

d. Silhouette - ಅ. ಬಾಹ್ಯರೇಖೆಯ ಕಪ್ಪು ಬಣ್ಣದ ಚಿತ್ರ ಬ. ತಲೆ ಮುಖ ಕ. ರೇಷ್ಮೆ ಬಟ್ಟೆ ಡ. ಉಪ್ಪಿನ ಬಿಸ್ಕೆಟು

e. Hoodlum - ಅ. ಕಳ್ಳ ಬ. ಸಂಗ್ರಾಹಕ ಕ. ಹೆಡೆ ಡ. ವಿನಾಶಕಾರಿ

**ಉತ್ತರಗಳು :**

a. ಡ b. ಡ c. ಕ d. ಅ e. ಡ

# ಕರ್ನಾಟಕ ವಿಶ್ವವಿದ್ಯಾಲಯ
# Karnataka University, DHARWAD

## ಅನುತ್ತೀರ್ಣರಾದ ಬಾಹ್ಯ ಪರೀಕ್ಷಾ ವಿದ್ಯಾರ್ಥಿಗಳಿಗೆ ಮಾತ್ರ

ಕರ್ನಾಟಕ ವಿಶ್ವವಿದ್ಯಾಲಯದ ಬಾಹ್ಯ ವಿದ್ಯಾರ್ಥಿಗಳು ಅನುತ್ತೀರ್ಣರಾಗಿ ಪುನಃ ಪರೀಕ್ಷೆಗೆ ಕಟ್ಟಬಯಸುವ ವಿದ್ಯಾರ್ಥಿಗಳಿಗೆ ವಾರ್ಷಿಕ ಪರೀಕ್ಷೆಗಳನ್ನು ಏಪ್ರಿಲ್ 1999ರಲ್ಲಿ ನಡೆಸಲಾಗುವುದು. ಅಂತಹ ವಿದ್ಯಾರ್ಥಿಗಳು ಪರೀಕ್ಷಾ ಅರ್ಜಿಗಳನ್ನು ವಿಶ್ವವಿದ್ಯಾಲಯದ ಪರೀಕ್ಷಾ ವಿಭಾಗದಲ್ಲಿ ಸ್ವೀಕರಿಸುವ ಕೊನೆಯ ದಿನಾಂಕಗಳನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| ಪರೀಕ್ಷೆಗಳು | ಪರೀಕ್ಷಾ ಶುಲ್ಕ | ಪರೀಕ್ಷಾ ವಿಭಾಗದಲ್ಲಿ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ | | ಪರೀಕ್ಷೆ ಪ್ರಾರಂಭವಾಗುವ ದಿನಾಂಕ |
|---|---|---|---|---|
| | | ದಂಡರಹಿತ | ರೂ.25/- ದಂಡದೊಂದಿಗೆ | |
| ಬಿ.ಎ. ಭಾಗ - 3 (ಹಳೆಯ ಪಠ್ಯಕ್ರಮ 1991-92ರ ಪ್ರಕಾರ)<br>ಬಿ.ಕಾಂ. ಭಾಗ - 3 (ಹಳೆಯ ಪಠ್ಯಕ್ರಮ, 1995-96ರ ಪ್ರಕಾರ)<br>ಬಿ.ಕಾಂ. ಭಾಗ - 2 (ಹಳೆಯ ಪಠ್ಯಕ್ರಮ 1994-95ರ ಪ್ರಕಾರ)<br>ಬಿ.ಕಾಂ. ಭಾಗ - 1 (ಹಳೆಯ ಪಠ್ಯಕ್ರಮ 1993-94ರ ಪ್ರಕಾರ)<br>ಬಿ.ಎ. ಭಾಗ - 2 (ಹಳೆಯ ಪಠ್ಯಕ್ರಮ, 1990-91ರ ಪ್ರಕಾರ)<br>ಬಿ.ಎ. ಭಾಗ - 1 (ಹಳೆಯ ಪಠ್ಯಕ್ರಮ 1989-90ರ ಪ್ರಕಾರ) | ರೂ. 145/- (ಪ್ರತಿಯೊಂದು ಪೇಪರಿಗೆ ಬೇಸಿಕ/ಪ್ರಧಾನ ಉಪಪ್ರಧಾನ ರೂ. 50/- ಅತಿ ಹೆಚ್ಚು ರೂ. 145/- ಮಾತ್ರ) | 12.2.1999 | 13.2.1999 ರಿಂದ 20.2.1999 | 14.4.1999 |
| ಬಿ.ಕಾಂ. ಭಾಗ - 1,2,3, ಹೊಸ ಪಠ್ಯಕ್ರಮ | ರೂ. 250/- (ಪ್ರತಿ ಪೇಪರಿಗೆ ರೂ. 70/- ಅತಿ ಹೆಚ್ಚು ರೂ. 250/- ಮಾತ್ರ) | 12.2.1999 | 13.2.1999 ರಿಂದ 20.2.1999 | 14.4.1999 |
| ಬಿ.ಎ. ಭಾಗ - 1,2,3, (ಹೊಸ ಮೂರು ಸಮ ವಿಷಯಗಳು) | ರೂ. 230/- (ಪ್ರತಿ ಪೇಪರಿಗೆ ರೂ. 65/- ಅತಿ ಹೆಚ್ಚು ರೂ. 230/- ಮಾತ್ರ) | 12.2.1999 | 13.2.1999 ರಿಂದ 20.2.1999 | 14.4.1999 |
| ಎಂ.ಎ., ಎಂ.ಎಸ್.ಸಿ., ಎಂ.ಕಾಂ. (ಪ್ರಥಮ) | ರೂ. 175/- | 19.1.1999 | 20.1.1999 ರಿಂದ 27.1.1999 | 7.4.1999 |
| ಎಂ.ಎ., ಎಂ.ಎಸ್.ಸಿ, ಎಂ.ಕಾಂ (ಅಂತಿಮ) | ರೂ. 175/- | 19.1.1999 | 20.1.1999 ರಿಂದ 27.1.1999 | 8.4.1999 |
| ಡಿಪ್ಲೋಮಾ ಇನ್ ಫ್ರೆಂಚ್, ಜರ್ಮನ್, ರಶಿಯನ್ | ರೂ. 230/- | 15.2.1999 | 16.2.1999 ರಿಂದ 22.2.1999 | ಪರೀಕ್ಷೆಗಳನ್ನು ಸ್ನಾತಕೋತ್ತರ ಪರೀಕ್ಷೆಗಳು ಮುಗಿದ ನಂತರ ನಡೆಸಲಾಗುವುದು |

**ಸೂಚನೆ** : ಅ. ಅಂಕಪಟ್ಟಿಯ ಸಲುವಾಗಿ ಪ್ರತಿಯೊಬ್ಬ ವಿದ್ಯಾರ್ಥಿ ರೂ. 20/- ಪರೀಕ್ಷೆಯ ಶುಲ್ಕದ ಜೊತೆಗೆ ತುಂಬಬೇಕಾಗುತ್ತದೆ.

ಬ. ಅಂಚೆಯ ವೆಚ್ಚದ ಸಲುವಾಗಿ ಪ್ರತಿಯೊಬ್ಬ ವಿದ್ಯಾರ್ಥಿ ರೂ. 5/- ಕಳಿಸಿಕೊಡಬೇಕು.

ಕ. ಅಂಕಪಟ್ಟಿಯ ಮೇಲೆ ಹೋಲೊಗ್ರಾಂ ಹಚ್ಚಲು ಪ್ರತಿಯೊಬ್ಬ ವಿದ್ಯಾರ್ಥಿ ರೂಪಾಯಿ ಒಂದು ತುಂಬಬೇಕಾಗುತ್ತದೆ.

■ ಪರೀಕ್ಷೆಗಾಗಿ ಒಮ್ಮೆ ಆರಿಸಿಕೊಂಡ ಕೇಂದ್ರವನ್ನು ಯಾವುದೇ ಕಾರಣಕ್ಕಾಗಿ ಬದಲಾಯಿಸಲು ಅವಕಾಶವಿರುವುದಿಲ್ಲ.

■ ಪ್ರಾಸ್ಪೆಕ್ಟ್‌ನಲ್ಲಿ ಇತರ ಸೂಚನೆಗಳನ್ನು ಕೊಡಲಾಗಿದ್ದು, ಆದರ ಉಪಯೋಗ ಪಡೆದು ಕೊಂಡು ಅರ್ಜಿಗಳನ್ನು ಸಲ್ಲಿಸತಕ್ಕದ್ದು.

■ ಅಕ್ಟೋಬರ್ 1998ರ ಪರೀಕ್ಷೆಯಲ್ಲಿ ಅನುತ್ತೀರ್ಣರಾದಂತಹ ವಿದ್ಯಾರ್ಥಿಗಳು ಆಯಾ ಪರೀಕ್ಷೆಗಳ ಫಲಿತಾಂಶ ಪ್ರಕಟಗೊಂಡ ಬಳಿಕ ಮರು ಪರೀಕ್ಷಾ ಅರ್ಜಿಗಳನ್ನು ಪರೀಕ್ಷಾ ಪರಿಣಾಮ ಪ್ರಕಟಗೊಂಡ ದಿನಾಂಕದಿಂದ 10 ದಿನದೊಳಗಾಗಿ ದಂಡರಹಿತ ಅರ್ಜಿಗಳನ್ನು ಸಲ್ಲಿಸಬಹುದು.

■ ಬಿ.ಎ. ಭಾಗ - 1,2,3, (ಹೊಸ ಮೂರು ಸಮ ವಿಷಯಗಳು) ಬಿ.ಕಾಂ. ಭಾಗ - 1,2,3 (ಹಳೆ ಮತ್ತು ಹೊಸ ಪಠ್ಯಕ್ರಮ) ಎಂ.ಎ., ಎಂ.ಎಸ್.ಸಿ., ಎಂ.ಕಾಂ. (ಪ್ರಥಮ ಹಾಗೂ ಅಂತಿಮ) ಮತ್ತು ಡಿಪ್ಲೋಮಾ ಇನ್ ಫ್ರೆಂಚ್, ಜರ್ಮನ್, ರಶಿಯನ್‌ದಲ್ಲಿ ಅನುತ್ತೀರ್ಣರಾದ ಬಾಹ್ಯ ವಿದ್ಯಾರ್ಥಿಗಳು ಪುನಃ ಪರೀಕ್ಷೆಗೆ ಕಟ್ಟಬೇಕಾದಲ್ಲಿ ಪ್ರತ್ಯೇಕ ಪ್ರಾಸ್ಪೆಕ್ಟಸ್‌ಗಳನ್ನು ಪಡೆಯತಕ್ಕದ್ದು. ಅಂಚೆಯ ಮೂಲಕ ಪ್ರಾಸ್ಪೆಕ್ಟಸ್‌ಗಳನ್ನು ಪಡೆಯಲಿಚ್ಚಿಸುವವರು ಕುಲಸಚಿವರು

(ಬಾಹ್ಯ ಪರೀಕ್ಷಾ ವಿಭಾಗ) ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ - 3 ಇವರಿಗೆ ಅರ್ಜಿಯನ್ನು ಸಲ್ಲಿಸಿ, ಪ್ರಾಸ್ಪೆಕ್ಟಸ್ ಬೆಲೆಯನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಸಿಂಡಿಕೇಟ್ ಬ್ಯಾಂಕ್, ಕರ್ನಾಟಕ ಬ್ಯಾಂಕ್. ಕೆನರಾ ಬ್ಯಾಂಕ್ ಇವುಗಳಲ್ಲಿ ಯಾವುದೇ ಒಂದು ಬ್ಯಾಂಕಿನ ಚಲನ್ ಅಥವಾ ಹುಂಡಿಯನ್ನು ವಿತ್ತಾಧಿಕಾರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ಸಂದಾಯವಾಗುವಂತೆ ಲಗತ್ತಿಸಿ ಮೇಲ್ಕಾಣಿಸಿದ ಅವಧಿಯ ಒಳಗಾಗಿ ಪಡೆಯಬಹುದು. ಪ್ರಾಸ್ಪೆಕ್ಟಸ್ ದರಗಳು ಈ ಕೆಳಗಿನಂತೆ ಇರುತ್ತವೆ.

### ಪರೀಕ್ಷೆಗಳು

- ಬಿ.ಎ. - 1,2,3. (ಹೊಸ ಮೂರು ಸಮ ವಿಷಯಗಳು)
- ಬಿ.ಕಾಂ. ಭಾಗ - 1,2,3 (ಹಳೆ ಮತ್ತು ಹೊಸ)
- ಎಂ.ಎ., ಎಂ.ಎಸ್.ಸಿ., ಎಂ.ಕಾಂ (ಪ್ರಥಮ ಹಾಗೂ ಅಂತಿಮ)
- ಡಿಪ್ಲೋಮಾ ಇನ್ ಫ್ರೆಂಚ್, ಜರ್ಮನ್, ರಶಿಯನ್

(ಸೂಚನೆ : ಏಪ್ರಿಲ್ 1999ರಲ್ಲಿ ಎಂ.ಕಾಂ. ಅಂತಿಮ ಹಳೆ ಪಠ್ಯಕ್ರಮ ಪರೀಕ್ಷೆಯು ಕೊನೆಯ ಅವಕಾಶ ಇರುತ್ತದೆ)

### ಪ್ರಾಸ್ಪೆಕ್ಟ್‌ನ ಬೆಲೆ ಮತ್ತು ಅಂಚೆಯ ವೆಚ್ಚ

ರೂ. 75/- + ರೂ. 20/- (ಅಂಚೆ ವೆಚ್ಚದ ಸಲುವಾಗಿ)

■ ಬಿ.ಎ. ಭಾಗ 1,2 ಮತ್ತು 3 (ಹಳೆಯ ಪಠ್ಯಕ್ರಮ) ಬಾಹ್ಯ ವಿದ್ಯಾರ್ಥಿಗಳು ನಿಗದಿಪಡಿಸಿದ ಪರೀಕ್ಷಾ ಪ್ರವೇಶ ಅರ್ಜಿಗಳನ್ನು ರೂ. 25/- ಕ್ಕೆ ಒಂದರಂತೆ ಉಪಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಂದ ಪಡೆಯಬಹುದು. ಹಾಗೂ ಪರೀಕ್ಷೆಯ ಅರ್ಜಿ ನಮೂನೆಗಳ ಶುಲ್ಕದ ಚಲನ್ ಅಥವಾ ಹುಂಡಿಯನ್ನು ಹಣಕಾಸು ಅಧಿಕಾರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ಸಂದಾಯವಾಗುವಂತೆ ತೆಗೆಯಿಸಿ ಲಗತ್ತಿಸಬೇಕು (ಹುಂಡಿಯನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕರ್ನಾಟಕ ಬ್ಯಾಂಕ್, ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಮಾತ್ರ ತೆಗೆಸಬೇಕು) ಅಲ್ಲದೇ ಅದರ ಜೊತೆಗೆ ತಮ್ಮ ಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ಬರೆದು $9_{1/2}$" X $4_{1/2}$" ಅಳತೆಯ ಲಕೋಟೆಗೆ ರೂ. 6/- ಅಂಚೆಯ ಚೀಟಿಯನ್ನು ಲಗತ್ತಿಸಿರಿ.

■ ಬಿ.ಎ. ಭಾಗ - 1,2,3 (ಹಳೆಯ ಪಠ್ಯಕ್ರಮ) ಬಾಹ್ಯ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದಿಂದ ನಿಗದಿಪಡಿಸಿದ ಈ ಕೆಳಗಿನ ಪರೀಕ್ಷಾ ಕೇಂದ್ರದಲ್ಲಿ ಮಾತ್ರ ಪರೀಕ್ಷೆಗೆ ಹಾಜರಾಗಲು ತಿಳಿಸಲಾಗಿದೆ.

○ **ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ :** ಧಾರವಾಡ ಜಿಲ್ಲೆಯ ವಿದ್ಯಾರ್ಥಿಗಳು ಮಾತ್ರ ಈ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗತಕ್ಕದ್ದು.

○ **ಲಿಂಗರಾಜ ಮಹಾವಿದ್ಯಾಲಯ, ಬೆಳಗಾಂವ:** ಬೆಳಗಾಂವ ಜಿಲ್ಲೆಯ ವಿದ್ಯಾರ್ಥಿಗಳು ಮಾತ್ರ ಈ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗತಕ್ಕದ್ದು.

○ **ಎಸ್.ಬಿ. ಕಲಾ, ಕೆಸಿಪಿ ವಿಜ್ಞಾನ ಮಹಾವಿದ್ಯಾಲಯ, ಬಿಜಾಪುರ :** ಬಿಜಾಪುರ ಜಿಲ್ಲೆಯ ವಿದ್ಯಾರ್ಥಿಗಳು ಮಾತ್ರ ಈ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗತಕ್ಕದ್ದು.

○ **ಸರಕಾರಿ ಕಲಾ ಮತ್ತು ಮಹಾವಿದ್ಯಾಲಯ, ಕಾರವಾರ :** ಕಾರವಾರ ಜಿಲ್ಲೆಯ ವಿದ್ಯಾರ್ಥಿಗಳು ಮಾತ್ರ ಈ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗತಕ್ಕದ್ದು.

■ ಸುತ್ತೋಲೆಯ ಕ್ರಮಾಂಕ ಕೆಯು.ಎಸಿಎ/ಎಸ್ ಆಂಡಟಿ/98-99/98 ದಿನಾಂಕ 5.8.1998ರ ಪ್ರಕಾರ ಬಿ.ಎ. ಭಾಗ - 1,2,3 (ಹಳೆ ಪಠ್ಯಕ್ರಮ) (ಪ್ರಧಾನ ಮತ್ತು ಉಪಪ್ರಧಾನ ಪರೀಕ್ಷೆಯನ್ನು ಏಪ್ರಿಲ್ 1999ರಲ್ಲಿ ಮಾತ್ರ ನಡೆಸಲಾಗುವುದು. ಇದು ಹಳೆಯ ಪಠ್ಯಕ್ರಮದ ವಿದ್ಯಾರ್ಥಿಗಳಿಗೆ ಕೊನೆಯ ಅವಕಾಶ ಇರುತ್ತದೆ. ಒಂದು ವೇಳೆ ಪರೀಕ್ಷೆಯಲ್ಲಿ ಹಳೆಯ ಪಠ್ಯಕ್ರಮದ ವಿದ್ಯಾರ್ಥಿಗಳು ಅನುತ್ತೀರ್ಣರಾದರೆ, ಅವರು ಬಿ.ಎ. ಭಾಗ -1 ರಿಂದ ಹೊಸ (ಮೂರು ಸಮ ವಿಷಯಗಳು) ಪಠ್ಯಕ್ರಮದಂತೆ ಹೊಸದಾಗಿ ಪರೀಕ್ಷೆಗೆ ಕೂಡಬೇಕಾಗುತ್ತದೆ ಎಂದು ಈ ಮೂಲಕ ತಿಳಿಸಲಾಗಿದೆ. ■

## ಐಎಎಸ್ ತರಬೇತಿ

ಬೆಂಗಳೂರು ವಿಶ್ವವಿದ್ಯಾಲಯದ ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಕೇಂದ್ರ ಲೋಕಸೇವಾ ಆಯೋಗ ಮೇ 30 ರಂದು ನಡೆಸಲಿರುವ ಐಎಎಸ್, ಐಎಫ್‌ಎಸ್ ಮತ್ತು ಐಪಿ ಎಸ್ ಪೂರ್ವಭಾವಿ ಪರೀಕ್ಷೆಗೆ ಉಚಿತ ತರಬೇತಿ ನೀಡಲಿದೆ

ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಅಲ್ಪ ಸಂಖ್ಯಾತರಲ್ಲಿ ಹಿಂದುಳಿದ ಮುಸಲ್ಮಾನರು ಕ್ರೈಸ್ತರು, ಸಿಖ್ಖರು, ನವಬೌದ್ಧರು ಮತ್ತು ಜರತುಷ್ಟ ಮತದವರಿಗೆ ಉಚಿತ ತರಬೇತಿ ನೀಡಲಾಗುವುದು. ಅರ್ಹ ಅಭ್ಯರ್ಥಿಗಳು ಜ. 22ರ ಒಳಗೆ ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ಸೆಂಟ್ರಲ್ ಕಾಲೇಜು, ಬೆಂಗಳೂರು ವಿಶ್ವವಿದ್ಯಾಲಯ ಇಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿಕೊಳ್ಳಬಹುದು.

## ಮಹಿಳೆಯರಿಗೆ ತರಬೇತಿ

ಗ್ರಾಮಾಭಿವೃದ್ಧಿ ಹಾಗೂ ಸ್ವ-ಉದ್ಯೋಗ ತರಬೇತಿ ಸಂಸ್ಥೆ (ರುಡ್‌ಸೆಟ್)ಯು ಅರಿಶಿನಕುಂಟೆ (ನೆಲಮಂಗಲ) ಕೇಂದ್ರದಲ್ಲಿ ಬರುವ ಫೆಬ್ರವರಿ ಮೊದಲ ವಾರದಲ್ಲಿ ಮಹಿಳೆಯರಿಗೆ 10 ದಿನಗಳ ಉದ್ಯಮಶೀಲತಾ ಅಭಿವೃದ್ಧಿ ತರಬೇತಿಯನ್ನು ನಡೆಸಲಿದೆ.

ಸ್ವ-ಉದ್ಯೋಗದಿಂದ ಸ್ವಾವಲಂಬಿಗಳಾಗಲು ಇಚ್ಛಿಸುವ ಕನ್ನಡ ಓದು ಬರಹ ಬಲ್ಲ 18ರಿಂದ 35 ವರ್ಷ ವಯಸ್ಸಿನ ಮಹಿಳೆಯರಿಗೆ ಆದ್ಯತೆಯಿದೆ. ತರಬೇತಿಯು ಉಚಿತವಾಗಿದ್ದು, ಉಚಿತ ಊಟ ಹಾಗೂ ವಸತಿ ವ್ಯವಸ್ಥೆಯಿದೆ.

ಇದೇ ಸಂಸ್ಥೆಯಲ್ಲಿ ಫೆಬ್ರವರಿ 2ನೇ ವಾರದಲ್ಲಿ ಟೈಲರಿಂಗ್‌ನಲ್ಲಿ ಸ್ವ- ಉದ್ಯೋಗಿಗಳಾಗಿರುವ ಮಹಿಳೆಯರಿಗೆ ಹೆಚ್ಚಿನ ಪರಿಣಿತಿಗಾಗಿ ಟೈಲರಿಂಗ್‌ನಲ್ಲಿ 3 ದಿನಗಳ ತರಬೇತಿಯನ್ನು ನಡೆಸಲಿದೆ. ಬೆಂಗಳೂರು ನಗರ, ಗ್ರಾಮಾಂತರ ಹಾಗೂ ತುಮಕೂರು ಜಿಲ್ಲೆಯವರಿಗೆ ಅವಕಾಶವಿದೆ.

ಆಸಕ್ತ ಮಹಿಳೆಯರು ಸ್ವ ವಿವರಗಳನ್ನೊಳಗೊಂಡ ಅರ್ಜಿಯನ್ನು ಕಳಿಸಬೇಕಾದ ಸಂಪರ್ಕಿಸಬೇಕಾದ ವಿಳಾಸ:

ನಿರ್ದೇಶಕರು, ರುಡ್‌ಸೆಟ್ ಸಂಸ್ಥೆ, ಚೆಕ್ ಪೋಸ್ಟ್ ಹಿಂಭಾಗ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಫೋನ್ : 08118 - 23166

## ಗೋರೆಗಾಂವ್ ಕರ್ನಾಟಕ ಸಂಘದ ಸಾಹಿತ್ಯ ಸ್ಪರ್ಧೆಯ ಫಲಿತಾಂಶ

ಗೋರೆಗಾಂವ್ ಕರ್ನಾಟಕ ಸಂಘ ತನ್ನ ನಲವತ್ತನೆಯ ವಾರ್ಷಿಕೋತ್ಸವದ ಅಂಗವಾಗಿ ಏರ್ಪಡಿಸಿದ 1998ರ ಸಾಹಿತ್ಯಕ ಸ್ಪರ್ಧೆಗಳಲ್ಲಿ ವಿಜೇತರಾದವರ ಹೆಸರುಗಳು ಈ ಕೆಳಗಿನಂತಿವೆ.

### ಕಥಾ ಸ್ಪರ್ಧೆಯಲ್ಲಿ

ಪ್ರಥಮ : 'ಭೂತಕಾಲೀನ' ಕೃಷ್ಣಮೂರ್ತಿ ಚಂದರ್, ದ್ವಿತೀಯ : 'ಹಕ್ಕು' ರಘುನಾಥ್ ಚ.ಹ., ತೃತೀಯ : 'ಮೂರು ಎಳೆಗಳು' - ಪ್ರೊ. ಎಚ್. ರಮೇಶ್ ಕೆದಿಲಾಯ.

### ಮೆಚ್ಚುಗೆ ಪಡೆದ ಕತೆಗಳು

**'ಕತೆ ಹೇಳುವ ಅಜ್ಜನಿಗೆ ಹೇಳಲಾಗದ ಕತೆ'** - ಜಿತು ನಿಡ್ಲೆ, **'ಕಿಚ್ಚು'** - ವೆಂಕಟೇಶ ಕಡಕೂಳ.

### ಪ್ರಬಂಧ ಸ್ಪರ್ಧೆಯಲ್ಲಿ

ಪ್ರಥಮ : ಚಿಂತಾಮಣಿ ಕೊಡ್ಲೆಕೆರೆ, ದ್ವಿತೀಯ : ಮಿಸ್ ಚಿತಾ, ತೃತೀಯ : ಬಿ. ಪ್ರಮೀಳಾ

ಮೆಚ್ಚುಗೆ : ಎಚ್. ವಿಶಾಲಾಕ್ಷಿ, ರಾಜೇಶ್ವರಿ ಕುಲಾಲ್

### ಕವಿತಾ ಸ್ಪರ್ಧೆಯಲ್ಲಿ

ಪ್ರಥಮ **'ತೆರೆದ ಕಿಟಕಿಯ ಆಚೆ'**- ಜಿ.ಎಸ್. ಉಬರಡ್ಕ, ದ್ವಿತೀಯ : **'ಚಿನ್ನದ ಕನಸುಗಾರ'** -ಎಚ್. ರಮೇಶ್ ಕೆದಿಲಾಯ, ತೃತೀಯ : **'ಕಾಡತಾವೋ ನೆನಪು'**- ಎಸ್.ಎಸ್. ಬಿರಾದಾರ.

ಮೆಚ್ಚುಗೆ : **'ಪೊರಕೆಯ ವ್ಯಥೆ'**- ಜಿ.ಕೆ. ನಾಯಕ್. ಪೆರ್ಮುದೆ. **'ಹೊಂಗನಸು ಕಂಡ ಹೂ ನೆಲ'** - ಅಮೃತೇಶ ತಂಡರ.

ಬಹುಮಾನಿತರ ಆಯ್ದ ಬರಹಗಳನ್ನು ಸಂಘದ ವಿಚಾರ ಭಾರತಿ ಸಮ್ಮೇಳನದ ಸಂದರ್ಭದಲ್ಲಿನ (ಏಪ್ರಿಲ್ 1999) ಮುಂಬೆಳಕು ವಿಶೇಷಾಂಕದಲ್ಲಿ ಪ್ರಕಟಿಸಲಾಗುವುದು ಮತ್ತು ಜನವರಿ 26ರ ಯೂತ್‌ಫೆಸ್ಟಿವಲ್‌ನ ಸಂದರ್ಭದಲ್ಲಿ ಬಹುಮಾನಗಳನ್ನು ವಿತರಿಸಲಾಗುವುದು ಎಂದು ಸಂಘದ ಪ್ರಕಟಣೆಯಲ್ಲಿ ತಿಳಿಸಲಾಗಿದೆ.

## ಕೃತಿ - ಕರ್ತೃ

1. **ಅಮೇರಿಕದಲ್ಲಿ ಗೊರೂರು** - ಗೊರೂರು ರಾಮಸ್ವಾಮಿ ಅಯ್ಯಂಗಾರ್
2. **ಅಗ್ನಿವೀಣಾ** - ಕಾಜಿನಜರುಲ್ ತುಳಸಿ
3. **ಅರುಳುಮರುಳು** - ದ.ರಾ.ಬೇಂದ್ರೆ
4. **ಅಳಿದ ಮೇಲೆ** - ಶಿವರಾಮ ಕಾರಂತ
5. **ಅರ್ಥಶಾಸ್ತ್ರ** - ಕೌಟಿಲ್ಯ
6. **ಅನ್ನಾ ಕೆರಿನೀನಾ** - ಲಿಯೋಟಾಲ್‌ಸ್ಟಾಯ್
7. **ಅವಂತಿ ಸುಂದರಿ** - ದಂಡಿ
8. **ಅವಧೇಶ್ವರಿ** - ಶಂಕರ ಮೊಕಾಶಿ ಪುಣೇಕರ್
9. **ಅಜಾತಶತ್ರು** - ಜೈಶಂಕರ್‌ಪ್ರಸಾದ್
10. **ಅಮರಕೋಶ** - ಅಮರಸಿಂಹ
11. **ಅಷ್ಟಾಧ್ಯಾಯಿ** - ಪಾಣಿನಿ
12. **ಅಕ್ಬರ್ ನಾಮಾ** - ಅಬ್ದುಲ್ ಫಜಲ್
13. **ಅನ್ವೇಷಣೆ** - ಎಸ್.ಎಲ್.ಭೈರಪ್ಪ
14. **ಅರೇಬಿಯನ್ ನೈಟ್ಸ್**-ಸರ್ ರಿಚರ್ಡ್ ಬರ್ಟನ್
15. **ಆದಿಪುರಾಣ** - ಪಂಪ
16. **ಇರುವಂತಿಗೆ** - ಕೆ.ಎಸ್.ನರಸಿಂಹಸ್ವಾಮಿ
17. **ಇದ್ದರೂ ಚಿಂತೆಯೇ** - ಶಿವರಾಮ ಕಾರಂತ
18. **ಉಪ್ಪುಕಡಲು** - ಎಸ್.ವಿ. ಪರಮೇಶ್ವರ ಭಟ್
19. **ಉತ್ತರರಾಮಚರಿತ** - ಭವಭೂತಿ
20. **ಏರ್‌ಪೋರ್ಟ್** - ಆರ್ಥರ್‌ಹೈಲಿ
21. **ಕಪ್ಪುಬಿಳುಪು** - ಆರ್ಯಾಂಬ ಪಟ್ಟಾಭಿ
22. **ಕಪಾಲಕುಂಡಲ** - ಬಂಕಿಮಚಂದ್ರ
23. **ಕಾಮಸೂತ್ರ** - ವಾತ್ಸ್ಯಾಯನ
24. **ಕೂಲಿ** - ಮುಲ್ಕರಾಜ್ ಆನಂದ್
25. **ಗಣದೇವತಾ** - ತಾರಾಶಂಕರ ವಂದ್ಯೋಪಾಧ್ಯಾಯ
26. **ಗೀತಾಂಜಲಿ** - ರವೀಂದ್ರನಾಥ ಠಾಗೋರ್
27. **ಚನ್ನಬಸವನಾಯಕ** - ಮಾಸ್ತಿ ವೆಂಕಟೇಶ್ ಅಯ್ಯಂಗಾರ್
28. **ಚಿಕ್ಕವೀರರಾಜೇಂದ್ರ** - ಮಾಸ್ತಿ ವೆಂಕಟೇಶ್ ಅಯ್ಯಂಗಾರ್
29. **ಚಿದಂಬರ** - ಸುಮಿತ್ರಾ ನಂದನಪಂತ್
30. **ಚಿತ್ರಾ** - ರವೀಂದ್ರನಾಥ ಠಾಗೋರ್
31. **ಚೋಮನದುಡಿ** - ಶಿವರಾಮ ಕಾರಂತ
32. **ಜಡ್ಜ್‌ಮೆಂಟ್** - ಕುಲದೀಪ್ ನಯ್ಯರ್
33. **ಜಂಗಲ್‌ಬುಕ್** - ರುಡ್‌ಯಾರ್ಡ್ ಕಿಪ್ಲಿಂಗ್
34. **ಜೂಲಿಯಸ್ ಸೀಜರ್** - ವಿಲಿಯಂ ಷೇಕ್ಸ್‌ಪಿಯರ್
35. **ಜೈಸಿದ ನಾಯ್ಕ** - ಚಂದ್ರಶೇಖರ ಕಂಬಾರ
36. **ಜೋಕುಮಾರಸ್ವಾಮಿ** - ಚಂದ್ರಶೇಖರ ಕಂಬಾರ
37. **ಡಾರ್ಕ್‌ರೂಂ** - ಆರ್.ಕೆ. ನಾರಾಯಣ
38. **ಡಾ.ಜಿವಾಗೊ** - ಬೋರಿಸ್ ಪಾಸ್ಟರ್‌ನಾಕ್
39. **ಡಿಸ್ಕವರಿ ಆಫ್ ಇಂಡಿಯಾ** - ಜವಾಹರಲಾಲ್ ನೆಹರು
40. **ಡಿವೈನ್ ಕಾಮೆಡಿ** - ಡಾಂಟೆ
41. **ಡಿವೈನ್ ಲೈಫ್** - ಸ್ವಾಮಿ ಶಿವಾನಂದ
42. **ಡಿಸೆಂಟ್ ಆಫ್ ಮ್ಯಾನ್** - ಚಾರ್ಲ್ಸ್ ಡಾರ್ವಿನ್
43. **ದಶಕುಮಾರ ಚರಿತೆ** - ದಂಡಿ
44. **ದುರ್ಗಾಸ್ತಮಾನ** - ತ.ರಾ.ಸು.
45. **ನಾಕಂಡ ಜರ್ಮನಿ** - ಹೊ. ಶ್ರೀನಿವಾಸಯ್ಯ
46. **ನಾಗನ ಪದಗಳು** - ಜಿ.ಪಿ.ರಾಜರತ್ನಂ
47. **ನಾಗರಹಾವು** - ತ.ರಾ.ಸು.
48. **ನಿಶೀತ್** - ಉಮಾಶಂಕರ್ ಜೋಷಿ
49. **ಪಂಚತಂತ್ರ** - ವಿಷ್ಣುಶರ್ಮ
50. **ಪರ್ವ** - ಎಸ್.ಎಲ್.ಭೈರಪ್ಪ
51. **ಪವಿತ್ರಪಾಪಿ** - ನಾನಕ್‌ಸಿಂಗ್

■ ಆರ್.ಕೆ. ಗುಂಡಸಾಗರ

## ಇತಿಹಾಸ ಪರೀಕ್ಷೆ

ಕರ್ನಾಟಕ ಇತಿಹಾಸ ಅಕಾಡೆಮಿ ಪದವಿ ಪೂರ್ವ ವಿದ್ಯಾರ್ಥಿಗಳಿಗಾಗಿ 'ಕರ್ನಾಟಕ ಇತಿಹಾಸ ಪ್ರಶಸ್ತಿ ಪರೀಕ್ಷೆ'ಯನ್ನು ಮಾರ್ಚ್ 14 ರಂದು ನಡೆಸಲಿದೆ. ಧಾರವಾಡ, ಮೈಸೂರು, ಬೆಂಗಳೂರು, ಕಲ್ಬುರ್ಗಿ ಮತ್ತು ಮಂಗಳೂರುಗಳಲ್ಲಿ ಈ ಪರೀಕ್ಷೆ ನಡೆಯುವುದು. ಪ್ರವೇಶ ಪತ್ರಗಳನ್ನು ಸ್ವೀಕರಿಸಲು ಫೆಬ್ರವರಿ 10 ಕೊನೆಯ ದಿನ.

ಕಾರ್ಯದರ್ಶಿ. ಕರ್ನಾಟಕ ಇತಿಹಾಸ ಅಕಾಡೆಮಿ, ಗೋಖಲೆ ಸಂಸ್ಥೆ ಆವರಣ, ಎನ್.ಆರ್. ಕಾಲೋನಿ, ಬೆಂಗಳೂರು- 19 ಇವರನ್ನು ಸಂಪರ್ಕಿಸಬಹುದು.

ಒಂದು ಡೈರಿ

# ಉಚಿತ
# ಕೆ.ವಿ.ಆರ್ ಕೋರ್ಸ್‌ನೊಂದಿಗೆ

## ಸುಲಭ ಸೂತ್ರಗಳ ಇಂಗ್ಲೀಷ್ ಕೋರ್ಸ್


25 ಕೋರ್ಸ್ ಬುಕ್ಸ್


6 ಗಿಫ್ಟ್ ಬುಕ್ಸ್

ಅದ್ಭುತವಾದ ಸುಲಭ ಸೂತ್ರಗಳಿಂದ ಸುಲಭವಾಗಿ ಇಂಗ್ಲೀಷ್ ಕಲಿಸುವ 25 ಪುಸ್ತಕಗಳು (600 ಪೇಜಿಗಳು) ಅತ್ಯಧಿಕ ಪ್ರಚಾರ ಪಡೆದ ಕೋರ್ಸ್ ಇದು. ಇದರೊಂದಿಗೆ ಕೋರ್ಸ್‌ಗೆ ಉಪಯೋಗವಾಗುವ 6 ಉಚಿತ ಪುಸ್ತಕಗಳು ಸಹಾ. ಫೀಜು ರೂ.200 ಮಾತ್ರವೇ ! ಈ ಕೋರ್ಸ್‌ನಲ್ಲಿ ಸೇರಬೇಕೆಂದುಕೊಂಡರೆ ಕೆಳಗಿನ ಕೂಪನ್‌ನ್ನು ಪೂರ್ತಿಮಾಡಿ ಕಳುಹಿಸಿ.

## ಕೆ.ವಿ.ಆರ್. ಸಿಂಪಲ್ ಆರ್ಟ್ ಕೋರ್ಸ್

ನೀವು ಮನೆಯಲ್ಲಿ ಇದ್ದುಕೊಂಡೇ ಸುಲಭವಾಗಿ ಚಿತ್ರಗಳನ್ನು ಹಾಕಲು ಕಲಿಸುವ ಕೋರ್ಸ್. ಇದರಲ್ಲಿ ಡ್ರಾಯಿಂಗ್ ಕಾರ್ಟೂನ್, ಕಮರ್ಷಿಯಲ್, ಅನಾಟಮಿ, ಜಾಮಿಟ್ರಿಕಲ್, ಎಂಬ 5 ಆರ್ಟ್ ಕೋರ್ಸ್‌ಗಳು ಇವೆ. ಚಿತ್ರ ಬರೆಯುವುದನ್ನು ಕಲಿತುಕೊಂಡು ನಿಮ್ಮ ಬಿಡುವಿನ ಸಮಯದಲ್ಲಿ ಹಣಗಳಿಸಬಹುದು. ಈ ಕೋರ್ಸ್‌ಗಳೆಲ್ಲಾ ಕೇವಲ ರೂ.300 ಗೇ. ಈ ಕೋರ್ಸ್‌ನಲ್ಲಿ ಸೇರಬೇಕೆಂದುಕೊಂಡರೆ ಕೆಳಗಿನ ಕೂಪನ್‌ನ್ನು ಪೂರ್ತಿ ಮಾಡಿ ಕಳುಹಿಸಿ.


ಹೀಗೆ ಸುಲಭವಾಗಿ ಬರೆಯಬಹುದು

## ಕೆ.ವಿ.ಆರ್. ಪರ್ಸನಾಲಿಟಿ ಡೆವಲಪ್‌ಮೆಂಟ್ ಕೋರ್ಸ್


ನಿಮ್ಮ ಬಾಳಿನಲ್ಲಿ ದೊಡ್ಡ ಬದಲಾವಣೆ

ಅಂದುಕೊಂಡಿದ್ದನ್ನು ಸಾಧಿಸಬೇಕಾದರೇ ಆಲೋಚನೆಯಲ್ಲಿ, ಆಚರಣೆಯಲ್ಲಿ ಬದಲಾವಣೆ ಬರಬೇಕು. ಸಕ್ರಮವಾಗಿ ಆಲೋಚಿಸುವಂತೆ ಮಾಡುವ ಅದ್ಭುತವಾದ ವ್ಯಕ್ತಿತ್ವದ ಕೋರ್ಸ್ ಇದು. ನಿಮ್ಮ ಕನಸು ನೆನೆಸಾಗಲು 7 ವಾರಗಳು ಸಾಕು.

ಈ ಕೋರ್ಸ್ ನಿಮ್ಮ ವಿಜಯಕ್ಕೆ ಏಣಿ. ಫೀಜು ರೂ.300/- ಎಲ್ಲರೂ ಖಂಡಿತ ಸೇರಲೇಬೇಕಾದ ಕೋರ್ಸ್. ಈ ಕೋರ್ಸ್‌ನಲ್ಲಿ ಸೇರಬೇಕೆಂದು ಕೊಂಡರೆ ಕೆಳಗಿನ ಕೂಪನ್‌ನ್ನು ಪೂರ್ತಿಮಾಡಿ ಕಳುಹಿಸಿ.

## ಕೆ.ವಿ.ಆರ್. ಕೆ.ವಿ.ಆರ್. ಬಿಜಿನೆಸ್ ಸಕ್ಸೆಸ್ ಕೋರ್ಸ್

ನಿಮಗೆ ವ್ಯಾಪಾರ ರಹಸ್ಯಗಳನ್ನು ಕನ್ನಡದಲ್ಲಿ ಹೇಳುವ ಮೊಟ್ಟ ಮೊದಲನೆಯ ಕೋರ್ಸ್. ಎಲ್ಲಾ ಬಗೆಯ ವ್ಯಾಪಾರಗಳಲ್ಲಿ ಇರುವವರಿಗ ಉಪಯೋಗವಾಗುವುದು. ಇಕ್ಕಟ್ಟುಗಳಿಂದ ಹೇಗೆ ಹೊರಗೆ ಬರಬೇಕೆಂದು ತಿಳಿಸುವ ಅದ್ಭುತವಾದ ಕೋರ್ಸ್. ವ್ಯಾಪಾರವನ್ನು ಕುರಿತು ಪೂರ್ತಿ ವಿವರಗಳನ್ನು ನೀಡಿರುವ ಕೋರ್ಸ್. ಕೇವಲ ರೂ.300/- ಮಾತ್ರವೇ ! ಈ ರೂ.300/- ಬಂಡವಾಳದಿಂದ ಕೆಲವರು ಕೋಟೀಶ್ವರರು ಆಗಿದ್ದಾರೆಂದರೆ ನೀವು ಆಶ್ಚರ್ಯಪಡಬೇಕಾಗಿಲ್ಲ. ಇದು ನಿಜವೆಂದು ನೀವೇ ಬೇಗ ತಿಳಿದುಕೊಳ್ಳುವಿರಿ. ಈ ಕೋರ್ಸ್‌ನಲ್ಲಿ ಸೇರಬೇಕೆಂದರೆ ಪಕ್ಕದ ಕೂಪನ್‌ನ್ನು ಪೂರ್ತಿಮಾಡಿ ಕಳುಹಿಸಿ.


ಬಿಜೀ ಬಿಜಿನೆಸ್ ಲಾಭಗಳು




## ಈ ಕೂಪನ್‌ನ್ನು ಪೂರ್ತಿಮಾಡಿ ಕಳುಹಿಸಿ

# KVR INSTITUTE

233

P.B.No. 1020, 77 Habibulla Road, T.Nagar, Chennai - 600 017

ನಾನು ಪಕ್ಕದ ಬಾಕ್ಸ್‌ನಲ್ಲಿ ಟಿಕ್ ಮಾಡಿರುವ ಕೋರ್ಸ್ (ಗಳು) ನಲ್ಲಿ ಸೇರಬೇಕೆಂದಿದ್ದೇನೆ. ಅದರಿಂದ ಆ ಕೋರ್ಸ್‌ಗಳು ಎಲ್ಲವನ್ನು ಒಟ್ಟು ಹಣಕ್ಕೆ V.P.P ಮೂಲಕ ಕಳುಹಿಸಿ. ಪೋಸ್ಟ್ ಮೆನ್‌ಗೆ ಹಣ ಸಲ್ಲಿಸಿ ಖಂಡಿತ ತೆಗೆದು ಕೊಳ್ಳುತ್ತೇನೆ.

**ನಾನು ಸೇರ ಬೇಕೆಂದಿರುವ ಕೋರ್ಸ್‌ಗಳ ವಿವರಗಳು**

ಕೆಳಗಿನ ಕೋರ್ಸ್‌ಗಳಲ್ಲಿ ನೀವು ಸೇರುವ ಕೋರ್ಸಿಗೆ ಎದುರಿಗೆ ಇರುವ ಬಾಕ್ಸ್ ಗಳಲ್ಲಿ ಹೀಗೆ ☑ ಟಿಕ್‌ಮಾಡಿ.

| ಕೋರ್ಸ್ ಹೆಸರು | ಫೀಜು | |
|---|---|---|
| ● ಇಂಗ್ಲೀಷ್ ಕೋರ್ಸ್ | ರೂ.200 | ☐ |
| ● ಆರ್ಟ್ ಕೋರ್ಸ್ | ರೂ.300 | ☐ |
| ● ಪರ್ಸನಾಲಿಟಿ ಡೆವಲಪ್‌ಮೆಂಟ್ ಕೋರ್ಸ್ | ರೂ.300 | ☐ |
| ● ಬಿಜಿನೆಸ್ ಸಕ್ಸೆಸ್ ಕೋರ್ಸ್ | ರೂ.300 | ☐ |

ಮುಖ್ಯ ಸೂಚನೆ: ಕಂಪ್ಯೂಟರ್ ನಲ್ಲಿ ಸಂರಕ್ಷಿಸುವುದಕ್ಕಾಗಿ ದಯವಿಟ್ಟು ನಿಮ್ಮ ವಿಳಾಸವನ್ನು ಇಂಗ್ಲೀಷಿನಲ್ಲಿಯೇ ಬರೆಯಿರಿ.

Name ____________________

Address ____________________

____________________

____________________

Pin Code: ☐☐☐☐☐☐

# ಅಮೇರಿಕಾ ಕಂಡ ಅದ್ಭುತ ಅಧ್ಯಕ್ಷರು

- ಜಾರ್ಜ್ ವಾಷಿಂಗ್ಟನ್ - 1789-92 -ಅವಿರೋಧ ಆಯ್ಕೆ
- ಜಾರ್ಜ್ ವಾಷಿಂಗ್ಟನ್ - 1792-96 -ಅವಿರೋಧ ಆಯ್ಕೆ
- ಜಾನ್ ಆ್ಯಡಮ್ಸ್ - 1796-1800 -ಫೆಡರಲಿಸ್ಟ್
- ಥಾಮಸ್ ಜಫರ್‌ಸನ್ - 1800-04 -ಡೆಮೋಕ್ರಾಟಿಕ್
- ಥಾಮಸ್ ಜಫರ್‌ಸನ್ - 1804-08 -ಡೆಮೋಕ್ರಾಟಿಕ್
- ಜೇಮ್ಸ್ ಮೆಡಿಸನ್ - 1808-12 -ಡೆಮೋಕ್ರಾಟಿಕ್
- ಜೇಮ್ಸ್ ಮೆಡಿಸನ್ - 1812-16 -ಡೆಮೋಕ್ರಾಟಿಕ್
- ಜೇಮ್ಸ್ ಮೆನ್ರೋ - 816-20 -ಡೆಮೋಕ್ರಾಟಿಕ್
- ಜೇಮ್ಸ್ ಮೆನ್ರೋ - 1820-24 -ಡೆಮೋಕ್ರಾಟಿಕ್
- ಜಾನ್-ಕ್ಯೂ-ಆಡಮ್ಸ್ - 1824-28 -ಡೆಮೋಕ್ರಾಟಿಕ್
- ಆ್ಯಂಡ್ರೋಜಾಕ್‌ಸನ್ - 1828-32 -ಡೆಮೋಕ್ರಾಟಿಕ್
- ಆ್ಯಂಡ್ರೋಜಾಕ್‌ಸನ್ - 1832-36 -ಡೆಮೋಕ್ರಾಟಿಕ್
- ಮಾರ್ಟಿನ್‌ವ್ಯಾನ್ ಬ್ಯುರೆನ್ - 1836-40 - ಡೆಮೋಕ್ರಾಟಿಕ್
- ವಿಲಿಯಂ ಹೆನ್ರಿಹ್ಯಾರಿಸನ್ - 1840-44 -ವ್ಹಿನ್
- ಜೇಮ್ಸ್ ಕೆ.ಪೋಲ್ಕ್ - 1844-48 -ಡೆಮೋಕ್ರಾಟಿಕ್
- ಝುಚರಿ ಟೇಲರ್ - 1848-52 -ವ್ಹಿನ್
- ಫ್ರಾಂಕ್ಲಿನ್ ಫೈರ್ಸ್ - 1852-56 -ಡೆಮೋಕ್ರಾಟಿಕ್
- ಜೇಮ್ಸ್ ಬುಚನನ್ - 1856-60 -ಡೆಮೋಕ್ರಾಟಿಕ್
- ಅಬ್ರಹಾಂ ಲಿಂಕನ್ - 1860-64 -ರಿಪಬ್ಲಿಕನ್
- ಅಬ್ರಹಾಂ ಲಿಂಕನ್ - 1864-68 -ರಿಪಬ್ಲಿಕನ್
- ಯುಲಿಸಿಸ್ ಎಸ್.ಗ್ರಾಂಟ್ - 1868-72 -ರಿಪಬ್ಲಿಕನ್
- ಯುಲಿಸಿಸ್ ಎಸ್.ಗ್ರಾಂಟ್ - 1872-76 -ರಿಪಬ್ಲಿಕನ್
- ರೂಥರ್ ಹೇಯಸ್ - 1876-80 -ರಿಪಬ್ಲಿಕನ್
- ಜೇಮ್ಸ್ ಎ.ಗಾರ್‌ಫೀಲ್ಡ್ - 1880-84 -ರಿಪಬ್ಲಿಕನ್
- ಗ್ರೋವರ್ ಕ್ಲೀವ್ ಲ್ಯಾಂಡ್ - 1884-88 -ರಿಪಬ್ಲಿಕನ್
- ಬೆಂಜಮಿನ್ ಹ್ಯಾರಿಸನ್ - 1888-92 -ರಿಪಬ್ಲಿಕನ್
- ಗ್ರೋವರ್ ಕ್ಲೀವ್ ಲ್ಯಾಂಡ್ - 1892-96 -ಡೆಮೋಕ್ರಾಟಿಕ್
- ವಿಲಿಯಂ ಮ್ಯಾಕ್ ಕಿನ್ಲಿ - 1896-1900 -ರಿಪಬ್ಲಿಕನ್
- ವಿಲಿಯಂ ಮ್ಯಾಕ್ ಕಿನ್ಲಿ - 1900-04 -ರಿಪಬ್ಲಿಕನ್
- ಥಿಯೋಥೋಕ್ ರೂಸ್‌ವೆಲ್ಟ್ - 1904-08 - ರಿಪಬ್ಲಿಕನ್
- ವಿಲಿಯಂ ಎಚ್.ಟ್ಯಾಸ್ಟ್ - 1908-12 -ರಿಪಬ್ಲಿಕನ್
- ವುಡ್ರೋ ವಿಲ್ಸನ್ - 1912-16 -ಡೆಮೋಕ್ರಾಟಿಕ್
- ವುಡ್ರೋ ವಿಲ್ಸನ್ - 1916-20 -ಡೆಮೋಕ್ರಾಟಿಕ್
- ವಾರನ್ ಡಿ. ಹಾರ್ಪಿಂಚ್ - 1920-24 -ರಿಪಬ್ಲಿಕನ್
- ಕ್ಯಾಲ್ವಿನ್ ಕೊಲಿಡ್ಜ್ - 1924-28 -ರಿಪಬ್ಲಿಕನ್
- ಹರ್ಬರ್ಟ್‌ಸಿ. ಹೂವರ್ - 1926-32 -ರಿಪಬ್ಲಿಕನ್
- ಫ್ರಾಂಕ್ಲಿನ್ ರೂಸ್‌ವೆಲ್ಟ್ - 1932-36 -ಡೆಮೋಕ್ರಾಟಿಕ್
- ಫ್ರಾಂಕ್ಲಿನ್ ರೂಸ್‌ವೆಲ್ಟ್ - 1936-40 -ಡೆಮೋಕ್ರಾಟಿಕ್
- ಫ್ರಾಂಕ್ಲಿನ್ ರೂಸ್‌ವೆಲ್ಟ್ - 1940-44 -ಡೆಮೋಕ್ರಾಟಿಕ್
- ಫ್ರಾಂಕ್ಲಿನ್ ರೂಸ್‌ವೆಲ್ಟ್ - 1944-48 -ಡೆಮೋಕ್ರಾಟಿಕ್
- ಹ್ಯಾರಿ ಎಸ್. ಟ್ರೂಮನ್ - 1948-52 -ಡೆಮೋಕ್ರಾಟಿಕ್
- ಡಿ.ಐಸನ್ ಹೋವರ್ - 1952-56 -ರಿಪಬ್ಲಿಕನ್
- ಡಿ.ಐಸನ್ ಹೋವರ್ - 1956-60 -ರಿಪಬ್ಲಿಕನ್
- ಜಾನ್.ಎಫ್. ಕೆನಡಿ - 1960-64 -ಡೆಮೋಕ್ರಾಟಿಕ್
- ಲಿಂಡನ್ ಬಿ. ಜಾನ್ಸನ್ - 1964-68 -ಡೆಮೋಕ್ರಾಟಿಕ್
- ರಿಚರ್ಡ್ ಎಂ. ನಿಕ್ಸನ್ - 1968-72 -ರಿಪಬ್ಲಿಕನ್
- ರಿಚರ್ಡ್ ಎಂ. ನಿಕ್ಸನ್ - 1972-76 - ರಿಪಬ್ಲಿಕನ್
- ಜಿಮ್ಮಿ ಕಾರ್ಟರ್ - 1976-80 -ಡೆಮೋಕ್ರಾಟಿಕ್
- ರೊನಾಲ್ಡ್ ರೇಗನ್ - 1980-84 -ರಿಪಬ್ಲಿಕನ್
- ರೊನಾಲ್ಡ್ ರೇಗನ್ - 1984-88 -ರಿಪಬ್ಲಿಕನ್
- ಜಾರ್ಜ್ ಬುಷ್ - 1988-92 -ರಿಪಬ್ಲಿಕನ್
- ಬಿಲ್ ಕ್ಲಿಂಟನ್ - 1992-96 -ಡೆಮೋಕ್ರಾಟಿಕ್
- ಬಿಲ್ ಕ್ಲಿಂಟನ್ - 1996ರಿಂದ -ಡೆಮೋಕ್ರಾಟಿಕ್

■ ಪ್ರಕಾಶ್ ಎಸ್.ಎನ್.

# ಮಾರ್ಗದರ್ಶಿ

■ ಡಾ. ಎಸ್.ಸಿ. ಶರ್ಮಾ

ಪ್ರಾಧ್ಯಾಪಕರು,
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - 59.



**ಎಂ. ರಮೇಶ್‌ರಾವ್, ತುಮಕೂರು**

ನಾನು 1994ರಲ್ಲಿ ಪಿ.ಯು.ಸಿ. ಉತ್ತೀರ್ಣನಾಗಿದ್ದೇನೆ. ನನ್ನ ವಯಸ್ಸು 22 ವರ್ಷ. ಎಸ್.ಎಸ್.ಎಲ್.ಸಿ. ಅಂಕಪಟ್ಟಿಯ ಪ್ರಕಾರ 24 ವರ್ಷ ಇದೆ. ಈಗ 5 ವರ್ಷದ ಕಾನೂನು ಪದವಿ ಪಡೆಯಲಿಚ್ಛಿಸಿದ್ದೇನೆ. ಇದರಿಂದ ಮುಂದೆ ತೊಂದರೆಯಾಗುತ್ತದೆಯೇ ತಿಳಿಸಿ.

**ನೀವು ಪಿ.ಯು.ಸಿ. ಮುಗಿಸಿರುವುದರಿಂದ 5 ವರ್ಷದ ಕಾನೂನು ಪದವಿಯನ್ನು ಮಾಡಬಹುದು.**

**ರಾಜು ಡಿ. ಸಂಗನಗೌಡ, ಸುರೇಬಾನ**

ನಾನು ಈಗ ಬಿ.ಎ. ಮೊದಲ ವರ್ಷ ಓದುತ್ತಿದ್ದು, ಮುಂದೆ ಎಲ್.ಎಲ್.ಬಿ. ಮಾಡುವ ಆಸೆ ಇದೆ. ಎಲ್.ಎಲ್.ಬಿ.ಯನ್ನು ಬಿ.ಎ. ಅಂತಿಮ ವರ್ಷ ಮುಗಿಸಿಯೇ ಮಾಡಬೇಕೇ ಅಥವಾ ಅಂಚೆ ಮುಖಾಂತರ ಎಲ್.ಎಲ್.ಬಿ. ಪರೀಕ್ಷೆ ತೆಗೆದುಕೊಳ್ಳಬಹುದೇ ತಿಳಿಸಿ. ಈ ಪರೀಕ್ಷೆ ತೆಗೆದುಕೊಳ್ಳಲು ಎಷ್ಟು ವಯಸ್ಸಾಗಿರಬೇಕು.

**ಬಿ.ಎ. ನಂತರ ಮೂರು ವರ್ಷದ ಎಲ್.ಎಲ್.ಬಿ.ಯನ್ನು ಮಾಡಬಹುದು. ಇಲ್ಲವೆ ಪಿ.ಯು.ಸಿ. ಆಧಾರದ ಮೇಲೆ ಐದು ವರ್ಷದ ಎಲ್.ಎಲ್.ಬಿ. ಮಾಡಬಹುದು. ನಿಮಗೆ ಯಾವುದು ಅನುಕೂಲವೋ ಹಾಗೆ ಮಾಡಿ.**

**ಎನ್. ರಾಮಾಂಜನೇಯಲು**

ನಾನು M.Com. ಅಂತಿಮ ವರ್ಷದ ವಿದ್ಯಾರ್ಥಿ. ನನಗೆ ಮುಂದೆ ಉದ್ಯೋಗಾವಕಾಶ ಸಿಗದಿದ್ದಲ್ಲಿ, ನಾನು ಮತ್ತೆ ದ್ವಿತೀಯ ಪಿ.ಯು.ಸಿ. Science ಮಾಡಿ BE, MBBS, Diploma, Bsc ಯಾವುದಾದರೊಂದು Job Oriented course ಮಾಡಬೇಕೆಂದಿರುವೆ ಇದು ಸಾಧ್ಯವೇ?

**ನಿಮ್ಮ ಆಸೆಯಂತೆ ನೀವು ವಯಸ್ಸಿನ ಆಧಾರದ ಮೇಲೆ ದ್ವಿತೀಯ ಪಿ.ಯು.ಸಿ. ಮಾಡಬಹುದು ಅಥವಾ ಯಾವುದೇ ವೃತ್ತಿಪರ ಕೋರ್ಸ್ ಮಾಡಬಹುದಾಗಿದೆ.**

**ಕೆ. ಪರ್ವಿನ್‌ಬಾನು, ಕೊಟ್ಟೂರು**

ನಾನು ಒಂಬತ್ತನೇ ತರಗತಿಯಲ್ಲಿ ಓದುತ್ತಿದ್ದೇನೆ. ಎಸ್.ಎಸ್.ಎಲ್.ಸಿ. ನಂತರ ಡಿಪ್ಲೋಮಾ ಮಾಡಬೇಕೆಂಬುದು ನನ್ನ ಆಸೆ. ಹೆಣ್ಣು ಮಕ್ಕಳಿಗೆ ಅದರಲ್ಲಿ ಅವಕಾಶವಿದೆಯೇ? ಅದರಲ್ಲಿ ಬರುವ ವಿವಿಧ ಕೋರ್ಸುಗಳನ್ನು ತಿಳಿಸಿ.

**ನಿಮ್ಮ ಇಚ್ಛೆಯಂತೆ ನೀವು ಎಸ್.ಎಸ್.ಎಲ್.ಸಿ. ನಂತರ ಡಿಪ್ಲೊಮಾ ಮಾಡಬಹುದು. ಇದನ್ನು ಹೆಣ್ಣುಮಕ್ಕಳೂ ಸಹ ಮಾಡಬಹುದು. ಇದರಲ್ಲಿ ಅನೇಕ ವಿಷಯಗಳಿರುತ್ತವೆ. ನಿಮಗೆ ಆಸಕ್ತಿಯಿದ್ದ ವಿಷಯವನ್ನು ಆಯ್ಕೆಮಾಡಿಕೊಳ್ಳಬಹುದು.**

**ಗೀತಾ, ಬೀದರ್**

ನಾನು ಎಸ್.ಎಸ್.ಎಲ್.ಸಿ. ಓದುತ್ತಿದ್ದೇನೆ. ಮುಂದೆ ಗಗನಸಖಿಯಾಗಬೇಕೆಂಬ ಆಸೆ ಇದೆ. ಅದಕ್ಕೆ ಯಾವ ಕೋರ್ಸ್ ಮಾಡಬೇಕು ತಿಳಿಸಿ. ಗಗನಸಖಿಯಾಗಲು ಅನೇಕ ಭಾಷೆಗಳನ್ನು ಕಲಿತಿರಬೇಕೆ? ತೂಕ, ಎತ್ತರ ಇತ್ಯಾದಿ ನಿಬಂಧನೆಗಳು ಇವೆಯೇ? ಪ್ರಸಿದ್ಧ ಹಾಗೂ ದೊಡ್ಡ ವಿಶ್ವವಿದ್ಯಾಲಯಗಳಲ್ಲಿ ಡಿಗ್ರಿ ಪಡೆದರೆ ಮಾತ್ರ ನೌಕರಿ ಬೇಗ ಸಿಗುತ್ತದೆ ಎನ್ನುತ್ತಾರೆ. ಇದು ನಿಜವೇ?

**ನೀವು ಗಗನಸಖಿ ಆಗಬೇಕಾದಲ್ಲಿ ಕನಿಷ್ಠ ಪದವಿಯನ್ನು 50% ಅಂಕಗಳೊಂದಿಗೆ ತೇರ್ಗಡೆಯಾಗಿ, ತಕ್ಕ ದೇಹದಾರ್ಢ್ಯವನ್ನು ಹೊಂದಿರಬೇಕು. ಕಾಲಕಾಲಕ್ಕೆ ಕರೆಯಲಾಗುವ ಅರ್ಜಿಗಳನ್ನು ಅನುಸರಿಸಿ ಲಿಖಿತ ಪರೀಕ್ಷೆಗಳನ್ನು ಬರೆಯಬೇಕು. ಇದರಲ್ಲಿ ತೇರ್ಗಡೆಯಾದ ಮೇಲೆ ಸಂದರ್ಶನ ಹಾಗು ವೈದ್ಯಕೀಯ ಪರೀಕ್ಷೆಯ ಮೇರೆಗೆ ಆಯ್ಕೆ ಮಾಡಲಾಗುವುದು.**

**ಹೆಸರಿಲ್ಲ**

ನಾನು ಅಂಚೆ ಮೂಲಕ ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂ.ಎ. ಪ್ರಥಮ ವರ್ಷ ಪಾಸಾಗಿದ್ದೇನೆ. ಅಂತಿಮ ವರ್ಷ ಪರೀಕ್ಷೆ ಬರೆದಿಲ್ಲ. ನಾನು KAS, IAS ಪರೀಕ್ಷೆ ಬರೆಯಬಹುದೆ? KAS ಮತ್ತು IAS ಪ್ರತಿವರ್ಷ ಪರೀಕ್ಷೆ ನಡೆಸುತ್ತಾರೆಯೇ?

**ಕೆ.ಎ.ಎಸ್., ಐ.ಎ.ಎಸ್. ಮಾಡಲು ಬೇಕಾದ ಕನಿಷ್ಠ ವಿದ್ಯಾರ್ಹತೆಯೆಂದರೆ ಪದವಿ. ಇದರಿಂದ ನೀವು ಪದವಿ ಪಡೆದಿದ್ದರೆ ಈ ಪರೀಕ್ಷೆಗಳನ್ನು ಬರೆಯಬಹುದು.**

**ಜಿ. ಮಹೇಶ, ಮುಷ್ಠಘಟ್ಟೆ**

ನಾನು ಎಸ್.ಎಸ್.ಎಲ್.ಸಿ. ಪಾಸಾಗಿದ್ದೇನೆ. ಈಗ ನನಗೆ 19 ವರ್ಷ. ಪಿ.ಯು.ಸಿ. ಮಾಡಲು ಆರ್ಥಿಕ ಪರಿಸ್ಥಿತಿ ಸರಿ ಇಲ್ಲ. ಆದ್ದರಿಂದ ನೇರವಾಗಿ ಬಿ.ಎ. ಮಾಡಬಹುದೇ? ಯಾವ ವಿಶ್ವವಿದ್ಯಾಲಯದಲ್ಲಿ ಈ ಅವಕಾಶವಿದೆ. ಇದು ರೆಗ್ಯುಲರ್ ಬಿ.ಎ. ಗೆ ಸಮಾನವೇ? ಬಿ.ಎ. ಮಾಡಲು ಎಷ್ಟು ಹಣ ಖರ್ಚಾಗಬಹುದು ತಿಳಿಸಿ.

**ನೀವು ನೇರವಾಗಿ ಬಿ.ಎ. ಮಾಡಬೇಕಿದ್ದರೆ, ನಿಮಗೆ 21 ವರ್ಷ ವಯಸ್ಸಾಗಿರಬೇಕು. ಹೆಚ್ಚಿನ ಮಾಹಿತಿಗೆ ಹತ್ತಿರದ ಸರ್ಕಾರಿ ಪದವಿ ಕಾಲೇಜನ್ನು ಸಂಪರ್ಕಿಸಿ.**

**ಬಿ.ಇ. ತಿರುಮಲ್ಲೇಶ್, ಬಳ್ಳಾರಿ**

ನಾನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇ. 52 ಅಂಕಗಳನ್ನು ಗಳಿಸಿದ್ದೇನೆ. ಕಾರಣಾಂತರಗಳಿಂದ ಮುಂದೆ ಓದಲು ಸಾಧ್ಯವಿಲ್ಲ. ಆದ್ದರಿಂದ

**ರಾಷವಲಿ, ನಾಗರಹಾಳು**

ನಾನು ಬಿ.ಎ. ಮುಗಿಸಿರುವೆ. ಮುಂದೆ MSW ಮಾಡಬೇಕೆಂದು ನಿರ್ಧರಿಸಿರುವೆ. ಈ ಕೋರ್ಸ್ ಯಾವ ವಿಶ್ವವಿದ್ಯಾಲಯಗಳಲ್ಲಿ ಇದೆ. ಇದನ್ನು ಮಾಡಿದರೆ ಮುಂದೆ ಯಾವ ಅಧಿಕಾರಿಯಾಗಬಹುದು.

**ಎಂ.ಎಸ್.ಡಬ್ಲ್ಯು. ಮಾಡಬೇಕಾದರೆ ಪದವಿ ಗಳಿಸಿರಬೇಕು. ಅಲ್ಲದೆ ಅವರು ನಡೆಸುವ ಪ್ರವೇಶ ಪರೀಕ್ಷೆ ಬರೆಯಬೇಕು. ಇದು ಬೆಂಗಳೂರು ವಿಶ್ವವಿದ್ಯಾಲಯದ ಸಮಾಜ ಸೇವೆ ವಿಭಾಗದಲ್ಲಿ ಲಭ್ಯವಿದೆ. ಅಲ್ಲದೆ ಟಾಟ ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸರ್ವಿಸ್, ಬಾಂಬೆ ಹಾಗು ಡಿಪಾರ್ಟ್‌ಮೆಂಟ್ ಆಫ್ ಸೋಷಿಯಲ್ ವರ್ಕ್ಸ್, ದೆಹಲಿ ವಿಶ್ವವಿದ್ಯಾಲಯಗಳಲ್ಲೂ ಲಭ್ಯವಿದೆ.**

**ಸಂಗೀತಾ, ಗಂಗಾವತಿ**

ನಾನು ದ್ವಿತೀಯ ಪಿ.ಯು.ಸಿ. (ವಿಜ್ಞಾನ) ಓದುತ್ತಿದ್ದು, ನನಗೆ ಡಿ.ಜಿ.ಎನ್.ಎಂ (Diploma in General Nursing and Midwisery) ಕೋರ್ಸ್ ಮಾಡಬೇಕೆಂದು ಆಸೆ.

1. ಈ ಕೋರ್ಸ್ ಮಾಡಲು ಎಷ್ಟು ಅಂಕಗಳನ್ನು ಪಿ.ಯು.ಸಿ.ಯಲ್ಲಿ ಪಡೆದಿರಬೇಕು?
2. ಪಿ.ಯು.ಸಿ. ಕಲಾ ಮತ್ತು ವಾಣಿಜ್ಯ ವಿದ್ಯಾರ್ಥಿಗಳು ಈ ಕೋರ್ಸ್ ಮಾಡಲು ಅರ್ಹರೆ?
3. ಈ ಕೋರ್ಸಿನ ಅವಧಿ ಎಷ್ಟು?

**ಡಿ.ಜಿ.ಎನ್.ಎಂ. ಮಾಡಲು ಪಿ.ಯು.ಸಿ. ವಿಜ್ಞಾನ ವಿಭಾಗದಲ್ಲಿ ಶೇ. 50 ಅಂಕಗಳನ್ನು ಪಡೆದಿರಬೇಕು. ಇದು 2 ರಿಂದ 3 ವರ್ಷದ ಕೋರ್ಸ್ ಆಗಿದೆ.**

ಒಂದು ವರ್ಷದ ಕೋರ್ಸ್ ಯಾವುದಾದರೂ ಇದ್ದರೇ ತಿಳಿಸಿ.

**ನಿಮಗೆ ಇನ್ನೂ ಓದುವ ಆಸಕ್ತಿಯಿದ್ದರೆ ಅನೇಕ ಡಿಪ್ಲೊಮಾ ಕೋರ್ಸ್‌ಗಳಿವೆ. ಉದಾ : ಮಾರ್ಕೆಟಿಂಗ್ ಮ್ಯಾನೇಜ್‌ಮೆಂಟ್, ಜರ್ನಲಿಸಂ, ಇಂಗ್ಲಿಷ್ ಮುಂತಾದವು. ಹೆಚ್ಚಿನ ಮಾಹಿತಿಗೆ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು - 570 006. ಇಲ್ಲಿ ಸಂಪರ್ಕಿಸಿ.**

**ಹೆಸರಿಲ್ಲ, ಹೊನ್ನಾವರ**

ನಾನೊಬ್ಬ ಪಿ.ಯು.ಸಿ. ವಿದ್ಯಾರ್ಥಿ. ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ ಮಾಡಿರುವ ಸಹಿಯನ್ನು ಈಗ ಬದಲಾಯಿಸಬೇಕೆಂದಿದ್ದೇನೆ. ನಾನು ಪಿ.ಯು.ಸಿ. ಮುಗಿದ ನಂತರ ಅಥವಾ ಮುಂದೆ ಯಾವುದಾದರೂ ಹುದ್ದೆಗೆ ಹೋದರೆ ಬೇರೆ ಸಹಿ ಮಾಡಬಹುದೆ? ಅಥವಾ ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವ ಸಹಿಯನ್ನೇ ಮಾಡಬೇಕೆ?

**ನಿಮ್ಮ ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆಯೇ ನಿಮ್ಮ ಸಹಿ ಯಾವಾಗಲೂ ಇರಬೇಕೆಂಬ ನಿಯಮವಿಲ್ಲ. ಆದರೆ ಒಂದೇ ರೀತಿಯ ಸಹಿಯನ್ನು ರೂಢಿಸಿಕೊಳ್ಳಿ.**

**ಹೆಸರಿಲ್ಲ**

ನಾನು ಈಗ ಪಿ.ಯು.ಸಿ. ಮುಗಿಸಿರುತ್ತೇನೆ. ಮನೆಯಲ್ಲಿ ಮುಂದೆ ಓದುವುದು ಬೇಡ ಎನ್ನುತ್ತಿದ್ದಾರೆ. ಕಡಿಮೆ ಖರ್ಚಿನಲ್ಲಿ ಮುಂದೆ ಯಾವ ಕೋರ್ಸ್ ಮಾಡಿದರೆ ಉದ್ಯೋಗಾವಕಾಶ ದೊರೆಯುತ್ತದೆ ತಿಳಿಸಿ.

**ನಿಮಗೆ ಮುಂದೆಯೂ ಓದುವ ಆಸಕ್ತಿಯಿದ್ದರೆ ಅನೇಕ ಡಿಪ್ಲೊಮಾ ಕೋರ್ಸ್‌ಗಳಿವೆ. ಉದಾ: ಮಾರ್ಕೆಟಿಂಗ್ ಮ್ಯಾನೇಜ್‌ಮೆಂಟ್, ಜರ್ನಲಿಸಂ, ಇಂಗ್ಲಿಷ್ ಮುಂತಾದವು. ಹೆಚ್ಚಿನ ಮಾಹಿತಿಗೆ ಕರ್ನಾಟಕ ರಾಜ್ಯಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು - 560 006. ಇಲ್ಲಿ ಸಂಪರ್ಕಿಸಿ.**

**ಎಸ್. ಶ್ರೀನಿವಾಸ, ಹಾಸನ**

ನಾನು ಈಗ ದ್ವಿತೀಯ ಬಿ.ಎಸ್ಸಿ. ಓದುತ್ತಿದ್ದೇನೆ. ಆರ್ಥಿಕ ಸಮಸ್ಯೆ ಇರುವುದರಿಂದ ಓದಲು ತೊಂದರೆ ಇದೆ. ನಾನು ಕೆಲಸಕ್ಕೆ ಸೇರಲು ಇಚ್ಛಿಸಿದ್ದೇನೆ. ನನಗೆ Forest Department ಗೆ ಸೇರಲು ತುಂಬಾ ಇಷ್ಟ. ಆದರ ಬಗ್ಗೆ ಮಾಹಿತಿ ಕೊಡಿ.

**ನೀವು ಈಗಾಗಲೇ ದ್ವಿತೀಯ ಬಿ.ಎಸ್ಸಿ. ಓದುತ್ತಿರುವುದರಿಂದ ನಿಮ್ಮ ಓದನ್ನು ಅರ್ಧದಲ್ಲಿ ನಿಲ್ಲಿಸುವುದು ಸರಿಯಲ್ಲ. ಐ.ಎಫ್.ಟಿ.ಎಸ್. ನಲ್ಲಿ ಸೇವೆ ಸಲ್ಲಿಸಬೇಕಾದರೆ ಸಸ್ಯಶಾಸ್ತ್ರ, ರಸಾಯನ ಶಾಸ್ತ್ರ, ಗಣಿತಶಾಸ್ತ್ರ, ಭೌತಶಾಸ್ತ್ರ ಇವುಗಳಲ್ಲಿ ಪದವಿ ಪಡೆದಿರಬೇಕು. ಇಲ್ಲವೆ ವ್ಯವಸಾಯದಲ್ಲಿ ಪದವಿ ಪಡೆದಿರಬೇಕು.**

**ಶರಣಗೌಡ, ಕ್ಯಾಸಪ್ಪನಳ್ಳಿ**

ಆಕಾಶವಾಣಿಯಲ್ಲಿ (ಕಾರ್ಯಕ್ರಮ ನಿರ್ವಹಣೆ, ಸುದ್ದಿ ಓದುವುದು ಮುಂತಾದ) ನೌಕರಿಗೆ ಸೇರಲು ಆವಶ್ಯಕ ವಿದ್ಯಾರ್ಹತೆಯನ್ನು ತಿಳಿಸಿ.

**ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರ್ವಹಣೆ, ಸುದ್ದಿ ಓದುವುದು ಮುಂತಾದ ಕಾರ್ಯಕ್ರಮದ ನೌಕರಿಗೆ ಸೇರಬೇಕಾದಲ್ಲಿ ಮಧುರವಾದ ಧ್ವನಿ ಹೊಂದಿರಬೇಕು. ಕನಿಷ್ಠ ಪದವೀಧರರಾಗಿರಬೇಕು. ಈ ಹುದ್ದೆಗಳಿಗೆ ಅವಶ್ಯವಿದ್ದಾಗ ಆಕಾಶವಾಣಿಯವರೇ ಪ್ರಮುಖ ದಿನಪತ್ರಿಕೆಗಳಲ್ಲಿ ಅರ್ಜಿಗಳನ್ನು ಕರೆಯುತ್ತಾರೆ. ಸಂದರ್ಶನದ ಮುಖಾಂತರ ಆಯ್ಕೆ ಮಾಡುತ್ತಾರೆ.**

**ಶಂಕರಮೂರ್ತಿ ಎಂ., ಸಾಣೆಕೆರೆ**

ನಾನು ಈಗ ದ್ವಿತೀಯ ಪಿ.ಯು.ಸಿ. ಓದುತ್ತಿದ್ದೇನೆ. ಹಿಂದಿಯನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡಿದ್ದೇನೆ. ಹಿಂದಿ ಪರೀಕ್ಷೆಗಳಲ್ಲಿ ಉತ್ತೀರ್ಣಗೊಂಡಿದ್ದೇನೆ. ನಾನು ಮುಂದೆ ಹಿಂದಿ ಉಪನ್ಯಾಸಕನಾಗಲು ಇಚ್ಛಿಸಿದ್ದೇನೆ. ಇದಕ್ಕೆ ಇನ್ನೂ ಯಾವ ಅರ್ಹತೆಗಳು ಬೇಕು ತಿಳಿಸಿ.

**ಹಿಂದಿ ಉಪನ್ಯಾಸಕನಾಗಲು ಎಂ.ಎ. ಮಾಡಿರಬೇಕು. ಇದಕ್ಕೆ ಹಿಂದಿ ಬಿ.ಎ ಮಾಡಬೇಕು. ನೀವು ಹಿಂದಿ ಎಂ.ಎ. ಮುಗಿಸಿದರೆ ಉಪನ್ಯಾಸಕರಾಗಬಹುದು.**

**ಸಂತೋಷ್ ನಾಯರ್ ಆರ್.**

ನಾನೀಗ ಮುಕ್ತ ವಿಶ್ವವಿದ್ಯಾಲಯದಲ್ಲಿ ಬಿ.ಎ. (ದರ್ಶನ, ಸಮಾಜ, ಇತಿಹಾಸ) ಓದುತ್ತಿದ್ದು, ನನಗೆ ಶಾಂತಿನಿಕೇತನ (ಕಲ್ಕತ್ತ) ದಲ್ಲಿ ಎಂ.ಎ. ಮಾಡಬೇಕೆಂಬ ಇಚ್ಛೆ ಇದೆ. ಇದು ಸಾಧ್ಯವೇ ದಯವಿಟ್ಟು ತಿಳಿಸಿ.

**ಬಿ.ಎ. ಆದಮೇಲೆ ಶಾಂತಿನಿಕೇತನ (ಕಲ್ಕತ್ತ) ದಲ್ಲಿ ಎಂ. ಎ. ಮಾಡಬಹುದು ಪ್ರಯತ್ನಿಸಿ.**

**ಮೃತ್ಯುಂಜಯ ಮಠದ, ಚಿಕ್ಕ ಮತ್ತೂರು**

ನಾನು ಪ್ರಾಥಮಿಕ ಶಾಲಾ ಶಿಕ್ಷಕನಾಗಿ ಸೇವೆ ಸಲ್ಲಿಸುತ್ತಿದ್ದು, ನನಗೆ ಈಗ 30 ವರ್ಷ. ರಾಜಭಾಷಾ ವಿದ್ವಾನ್ ಮುಗಿಸಿರುತ್ತೇನೆ. ಈಗ ಹಿಂದಿಯಲ್ಲಿ BEd ಅಥವಾ ಎಂ.ಎ. ಮಾಡಬೇಕೆಂದಿರುವೆ. ಯಾವುದನ್ನು ಮಾಡಿದರೆ ಹೆಚ್ಚು ಉಪಯೋಗವಾಗುತ್ತದೆ. ಹಿಂದಿ ಬಿ.ಎಡ್. ಅಂಚೆ ಮೂಲಕ ಮಾಡಬಹುದೇ, ಯಾವ ವಿಶ್ವವಿದ್ಯಾಲಯದಲ್ಲಿ ಈ ಸೌಲಭ್ಯವಿದೆ ತಿಳಿಸಿ.

**ನೀವು ಶಿಕ್ಷಕ ವೃತ್ತಿಯಲ್ಲಿರುವುದರಿಂದ ಹಿಂದಿ ಬಿ.ಎಡ್. ಮಾಡಿದರೆ ಉಪಯೋಗವಾಗುತ್ತದೆ. ಇದನ್ನು ಅಂಚೆ ಮೂಲಕ ಸಹ ಮಾಡಬಹುದು. ಇದರ ವಿಳಾಸ ಈ ರೀತಿ ಇದೆ. ಡೈರೆಕ್ಟರ್, ಡೈರೆಕ್ಟೋರೇಟ್ ಆಫ್ ಡಿಸ್ಟೆನ್ಸ್ ಎಜುಕೇಷನ್, ಅಣ್ಣಾಮಲೈ ಯೂನಿವರ್ಸಿಟಿ, ಅಣ್ಣಾಮಲೈ ನಗರ - 608 002.**

**ಅರವಿಂದ, ಬೆಂಗಳೂರು**

ನಾನು ಈಗ ಬಿ.ಎಸ್ಸಿ. ಮಾಡುತ್ತಿದ್ದೇನೆ. ಈಗಾಗಲೇ ಬಿ.ಕಾಂ. ಮಾಡಿದ್ದೇನೆ. ಮುಂದೆ ಬಿ.ಟೆಕ್. ಮಾಡಲು ಪ್ರವೇಶ ಪರೀಕ್ಷೆ ಬರೆಯಬೇಕೆ? ಇದು ಎಷ್ಟು ವರ್ಷದ ಕೋರ್ಸ್, ಇದಾದ ನಂತರ ಎಂ.ಸಿ.ಎ. ಮಾಡಬಹುದೇ?

**ಬಿ.ಟೆಕ್. ಮಾಡಲು ಪ್ರವೇಶ ಪರೀಕ್ಷೆ ಬರೆಯಬೇಕು. ಇದು 4 ವರ್ಷದ ಕೋರ್ಸ್. ಎಂ.ಸಿ.ಎ. ಮಾಡಲು ಪದವಿಯಲ್ಲಿ ಶೇ. 50 ಅಂಕಗಳನ್ನು ಪಡೆದಿದ್ದರೆ ಸಾಕು. ನೀವು ಈಗಾಗಲೇ ಪದವಿ ಪಡೆದಿರುವುದರಿಂದ ಎಂ.ಸಿ.ಎ. ಮಾಡಬಹುದು.**

# ಉಚಿತ ವರ್ಗೀಕೃತ ಜಾಹೀರಾತು

## ಸಂಕ್ರಮಣ

ಸರ್ವರಿಗೂ ಹೊಸ ವರ್ಷದ ಮತ್ತು ಸಂಕ್ರಮಣದ ಶುಭಾಶಯಗಳು.

**- ಗೋಪಾಲಕೃಷ್ಣ ಟ್ರೇಡಿಂಗ್** ಕಂಪನಿ, ಅಡಿಕೆ ಮತ್ತು ಕಾಳುಮೆಣಸಿನ ವ್ಯಾಪಾರಸ್ತರು, ಯಲ್ಲಾಪುರ.

## ವಿವಾಹ ವಾರ್ಷಿಕೋತ್ಸವ

ಶಶಿಧರ್ ಹಾಗೂ ಪಾರ್ವತಿ ದಂಪತಿಗಳಿಗೆ ಇವರ ದ್ವಿತೀಯ ವಿವಾಹ ವಾರ್ಷಿಕೋತ್ಸವ (ಫೆಬ್ರವರಿ 9) ಸಂದರ್ಭದಲ್ಲಿ ಶುಭ ಹಾರೈಕೆಗಳು.

**-ಎಸ್. ಎಂ. ಕೊಟ್ರಯ್ಯ, ಸುಶೀಲಮ್ಮ,**
**-ಕೆ.ಎಂ. ಗುರುಸಿದ್ದಯ್ಯ, ಗಿರಿಜಮ್ಮ, ಕೊಟ್ಟೂರು.**

## ಹೊಸ ವರ್ಷ

ಹೊಸ ವರ್ಷದ ಹಾರ್ದಿಕ ಶುಭಾಶಯಗಳು. ಹೊಸ ವರ್ಷವು ನಿಮ್ಮೆಲ್ಲರಿಗೂ ಸುಖ ಶಾಂತಿ ಮತ್ತು ಸಮೃದ್ಧಿಯನ್ನು ತರಲೆಂದು ಹಾರೈಸುವ-

**-ಬಸವರಾಜ ಆರ್. ರಾಜಾಪೂರ,** Jr. Asst. ಗೂಡುರ.

## ತರಬೇತಿ

ಶೆಟ್ಟಿ ಕೋಚಿಂಗ್ ಕ್ಲಾಸಸ್, ಸುರಪುರ. ನವೋದಯ, ಸೈನಿಕ, ಕಿತ್ತೂರ ಮತ್ತು ಮೊರಾರ್ಜಿ ವಸತಿ ಶಾಲೆಗಳಿಗೆ ಪರೀಕ್ಷಾ ಪೂರ್ವ ತರಬೇತಿಯನ್ನು ನುರಿತ ವಿಷಯ ಪರಿಣಿತದಿಂದ ಕೊಡಲಾಗುತ್ತಿದೆ.

**-ಬೂದೆಪ್ಪ ಎನ್.ಶೆಟ್ಟಿ** ಎಂ.ಎಸ್ಸಿ, ಬಿ.ಈಡಿ., ಸುರಪುರ.

## ಹೊಟೆಲ್ ಮಾಲೀಕರಿಗೆ

ನನ್ನ ಪ್ರೀತಿಯ ನ್ಯೂಶಾಂತಿ ಸಾಗರ ಗ್ರೂಪಿನ ಎಲ್ಲಾ ಮಾಲೀಕರ ವೃಂದಕ್ಕೂ ಹಾಗೂ ಕಾರ್ಮಿಕರ ವೃಂದಕ್ಕೂ ಮುಂದೆ ಬರುವ ಎಲ್ಲಾ ದಿನಗಳು 'ಬೆಸ್ಟ್ ಆಫ್ ಲಕ್' ಆಗಿರಲಿ. ಹಾಗೆಯೇ ಹೊಸ ವರ್ಷದ ಶುಭಾಶಯಗಳು.

**-ಎಂ. ಅಶೋಕ ಅಸೋಡು,** ಬೆಂಗಳೂರು.

## ಪ್ರೇಮಿಗಳ ದಿನ

ಫೆಬ್ರವರಿ 14 ರಂದು ಪ್ರೇಮಿಗಳ ದಿನ. ಸಕಲ ಪ್ರೇಮಿಗಳಿಗೂ ನನ್ನ ಹಾರ್ದಿಕ ಶುಭಾಶಯಗಳು.

**- ಟಿ. ಪ್ರಭಾಕರ ,** ಇಲಕಲ್ಲ.

## ಹೊಸ ವರ್ಷ

'ಹೊಸ ವರ್ಷದ ಶುಭಾಶಯಗಳು - 1999' ಶುಭ ಕೋರುವವರು

**-ಚಂದ್ರಕಾಂತ ಬಡಿಗೇರ ಹಟ್ಟಿ ಹಾಗೂ ವಿಶ್ವಕರ್ಮ ವೆಲ್ಡಿಂಗ್ ಮತ್ತು ಲೇಥ ವರ್ಕ್ಸ್, ಹಟ್ಟಿ.**

## ಹೊಸ ವರ್ಷ

ನಮ್ಮ ಬಂಧು ಬಳಗದವರಿಗೆ, ಸ್ನೇಹಿತರಿಗೆ ಹಾಗು ಬಿಸಿಲ ಬದುಕು ಪತ್ರಿಕೆಯ ಸಂಪಾದಕರ ವರ್ಗಕ್ಕೆ ನಮ್ಮೆಲ್ಲರ ಹೊಸ ವರ್ಷದ ಶುಭಾಶಯಗಳು.

**-ಕೆ. ರಮೇಶ್ ಬಾಬು, ಕೃಷಿ ಇಲಾಖೆ,** ಹರಪನಹಳ್ಳಿ

## ಸೈಕಲ್ ಸವಾರರಿಗೆ

ಅಡವಿಸೋಮಪುರದಿಂದ ಧರ್ಮಸ್ಥಳಕ್ಕೆ ಹೋಗುವ ಸೈಕಲ್ ಸವಾರರಿಗೆ ಹಾಗೂ ಪಾದಯಾತ್ರಿಗಳಿಗೆ ಪ್ರಯಾಣ ಸುಖಕರವಾಗಲೆಂದು ಹಾರೈಸುವ ಮತ್ತು ಮಂಜುನಾಥ ಸ್ವಾಮೀ ಅವರಿಗೆ ಆ ಶಕ್ತಿಯನ್ನು ನೀಡಲೆಂದು ಹಾರೈಸುವ

**- ಎಸ್.ಡಿ. ಹದ್ದಣ್ಣವರ,** ಅಡವಿ ಸೋಮಾಪುರ.

## ವಿವಾಹ ಬಂಧನ

ಈ ತಿಂಗಳ 22ನೇ ತಾರೀಖಿನಂದು ವಿವಾಹ ಬಂಧನದಲ್ಲಿ ಸಿಲುಕಲಿರುವ ನಮ್ಮ ನೆಚ್ಚಿನ ಮಿತ್ರ ಕೆ.ವೆಂಕಟೇಶ್ ಹಾಗು ಸವಿತಾರಾಣಿ ದಂಪತಿಗಳಿಗೆ ನಮ್ಮ ಶುಭಾಶಯಗಳು. ಇವರು ಸುಖ ಸಂತೋಷದ ಜೀವನವನ್ನು ತಮ್ಮದಾಗಿಸಿಕೊಳ್ಳಲಿ ಎಂದು ಹಾರೈಸುವ ಎಲ್ಲ ಮಿತ್ರವೃಂದ

**- ಅನಿಲ್‌ಕುಮಾರ,** ಎಸ್.ಎಲ್.ವಿ. ಮೆಡಿಕಲ್ ಸ್ಟೋರ್ಸ್, ಮುದಗಲ್.

## ಹುಟ್ಟು ಹಬ್ಬ

ಪ್ರೀತಿಯ ಕಾವ್ಯಳಿಗೆ ಹುಟ್ಟು ಹಬ್ಬದ ಶುಭಾಶಯಗಳು ಹಾಗೂ ನೂತನ ವರ್ಷದ ಹಾರ್ದಿಕ ಶುಭ ಕಾಮನೆಗಳು.

**-ರಘುನಾಥ್ ಚ.ಹ.,** ಶಿರಾ.

## ಹೊಸ ವರ್ಷ

ಹೊಸ ವರ್ಷದ ಹರುಷ ಸುಖ ತರಲಿ ಎಂದು ಶುಭ ಹಾರೈಸುವೆ

**- ಬೂತಾಳಿ ಎಂ.ರಾವ್. ಆನೂರ,** ಶಿಕ್ಷಕರು, ಸ.ಹಿ. ಪ್ರಾ. ಶಾಲೆ, ಹಡಲಗಿ.

## ಸಂಕ್ರಮಣ

ಕುಸುರೆಳ್ಳಿನ ಮುಳ್ಳು ಕರಗಿ ನೀರಾಗುವಂತೆ, ನಾಡಿನ ಜನರ ಕಷ್ಟ, ಚಿಂತೆ ಕರಗಿ ನೀರಾಗಲಿ ನಾಡಿನ ಜನತೆಗೆ ಮಕರ ಸಂಕ್ರಮಣದ ಶುಭಾಶಯಗಳೊಂದಿಗೆ

**- ಶಿವಪ್ಪ, ಹುರುಳಿಹಾಳ್,** B.A. B.Lib & I.Sc ಶ್ರೀ ಕೊಟ್ಟೂರೇಶ್ವರ ಮಹಾವಿದ್ಯಾಲಯ, ಕೊಟ್ಟೂರು.

## ಪ್ರೀತಿಯ ಅಭಿಗೆ

ಪ್ರೀತಿಯ ಅಭಿ, ನೀನು ನಮ್ಮಿಂದ ದೂರದ ಗುಲ್ಬರ್ಗಾದಲ್ಲಿದ್ದರೂ ನಿನ್ನ ತುಂಟಾಟಗಳು ನಮ್ಮೆಲ್ಲರ ಕಣ್ಮುಂದೆಯೇ ಸುಳಿಯುತ್ತಿವೆ. ಏನೋ ಅಭಿ ಇಪ್ಪಿಟ್ಟು ಆಲು, ಅನ್ನುವುದನ್ನು ಕಲಿತಿರುವಿಯಂತೆ. ಹೊಸ ವರ್ಷದ ಶುಭಾಶಯಗಳು.

**-ಹಾರ್ಕನಾಳ್ ಶಿವಕುಮಾರ ಗೌಡ,** ಕಿರಿಯ ತರಬೇತಿ ಅಧಿಕಾರಿ, ಹಗರಿಬೊಮ್ಮನಹಳ್ಳಿ,

## ಹೊಸ ವರ್ಷ

ಪ್ರೀತಿಯ ಗುರುಗಳಾದ ಸೈಯದ್ ಮೆಹಬೂಬ ಸರ್ ಮತ್ತು ಗೆಳೆಯ - ಗೆಳತಿಯರಿಗೆ 1999ನೇ ವರ್ಷದ ಶುಭಾಶಯಗಳು. ಈ ವರ್ಷ ಎಲ್ಲರಿಗೂ ಸುಖ ಸಮೃದ್ಧಿ ಸಿಗಲೆಂದು ಹಾರೈಸುತ್ತೇನೆ.

**- ಕೆ. ಬಸವರಾಜು, ( ದ್ವಿತೀಯ ಪಿ.ಯು.ಸಿ.)** ಸಿ. ಎಮ್.ಎನ್. ಕಾಲೇಜ್, ಕಾರಬಗಿ.

## ಹೊಸ ವರ್ಷ

I wish a Happy New Year to Sulochana, Kavitha Kavadimatti, Pushpa K.Chetan Agnoor, Sneha, Sumalatha, Vijaykumar P. Bharati, Neelkantappa, Girija.

**-ರಾಜಶೇಖರ್ ಸಿರವಾರ್,** ಕಾರಟಗಿ

## ಧನ್ಯವಾದಗಳು

ನಮ್ಮೂರು ಕರಿಭಾವಿಯಲ್ಲಿ 21. 12. 1998 ರಂದು ಡೆನಿಡಾ ಯೋಜನೆ ಬಗ್ಗೆ ತಿಳಿಸಿಕೊಟ್ಟ ಅಧಿಕಾರಿಗಳಾದ ಹಂಪಣ್ಣ ಹಾಗು ಆರ್.ಎಸ್. ಹಿರೇಮಠ ಅವರಿಗೆ ಊರವರ ಪರವಾಗಿ ಧನ್ಯವಾದಗಳು.

**-ಸಿದ್ದಣ್ಣ ಬಸಣ್ಣ. ಪೂಜಾರಿ, ಕರಿಭಾವಿ.**

# ಉಚಿತ ವರ್ಗೀಕೃತ ಜಾಹೀರಾತು

## ಹುಟ್ಟು ಹಬ್ಬ

ನನ್ನ 23ನೇ ವರ್ಷದ ಹುಟ್ಟುಹಬ್ಬ ದಿನಾಂಕ 10.2.1999 ರಂದು ಇರುತ್ತದೆ. ಈ ಸಂದರ್ಭದ ಸಂತಸವನ್ನು ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೇನೆ.

**-ನಾಗರಾಜ ವಿ. ಬೇತೂರ, ಹೊನ್ನತ್ತಿ.**

## ಶಿವರಾತ್ರಿ ಶುಭಾಶಯ

'ಬಿಸಿಲ ಬದುಕು' ಓದುಗರಿಗೆ ಶಿವರಾತ್ರಿಯ ಹಾರ್ದಿಕ ಶುಭಾಶಯಗಳು. ನಮ್ಮ ಶಾಲೆಯ ಹೊಸ ಗುರುಗಳಾದ ಕೆ. ಎ. ದೂಡುತಿ ಅವರಿಗೂ ಹೊಸ ವರ್ಷದ ಶುಭಾಶಯಗಳು.

**-ಗೋವಿಂದಪ್ಪ ಲಕ್ಷ್ಮಣ, ಬಿ. ಪಾಟೀಲ ಬೆಳಗಲಿ,**
ವಿದ್ಯಾವರ್ಧಕ ಪ್ರೌಢಶಾಲೆ, ಬೆಳಗಲಿ.

## ಶುಭ ಹಾರೈಕೆ

ಶಿಲ್ಪಾ ನಾಯಕ್, ಯಾದಗಿರಿ, ಇವರಿಗೆ ಹೊಸ ವರ್ಷ ಮತ್ತು ಮಕರ ಸಂಕ್ರಾಂತಿಯ ಶುಭಾಶಯಗಳು. ನಿಮ್ಮ ಬಾಳು ಬಂಗಾರವಾಗಲಿ ಎಂದು ಹಾರೈಸುವ

**-ಗಿರಿಜಾ ಶ್ರೀಶೈಲ ವೈ. ಜಾಲಿಹಾಳ್,**
ತುಂಗಭದ್ರಾ ಗ್ರಾಮೀಣ ಬ್ಯಾಂಕ್,
ಸಂತೆ ಕಲ್ಲೂರು.

## ಜಾತ್ರೆಗೆ ಸ್ವಾಗತ

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಕಿಲ್ಲಾತೊರಗಲ್ಲ ಗ್ರಾಮದಲ್ಲಿ ಜರುಗುವ ಶ್ರೀ ದುರ್ಗಾದೇವಿಯ ಜಾತ್ರಾ ಮಹೋತ್ಸವಕ್ಕೆ ಭಕ್ತ ವೃಂದಕ್ಕೆಲ್ಲ ಹಾರ್ದಿಕ ಶುಭ ಹಾರೈಕೆಗಳೊಂದಿಗೆ ಆದರದ ಸುಸ್ವಾಗತ.

**-ಮಹಾಂತೇಶ ಬ. ಶಿದ್ದಿಭಾವಿ,**
ಗ್ರಾ.ಪಂ.ಸದಸ್ಯರು, ಕಿಲ್ಲಾತೊರಗಲ್ಲ

## ಅಭಿನಂದನೆ

ಶ್ರೀ ರಾಮೇಶ್ವರ ಯುವಕ ಸಂಘ (ರಿ) ಕೋಳೂರು ಹುಲಿದೇವರಬನ, ಇದರ 1999-2000 ಸಾಲಿನ ಅಧ್ಯಕ್ಷರ ಸ್ಥಾನವನ್ನು ವಹಿಸಿಕೊಂಡಿರುವ ಕೆ.ಎಚ್. ಗಂಗಾಧರ ಗೌಡ್ರು, ಕುಂಬಾರ ಗೊಳ್ಳಿ, ಇವರಿಗೆ ಸಂಘದ ಪರವಾಗಿ ಸದ್ಯಸರ ಪರವಾಗಿ ಹಾಗು ಪದಾಧಿಕಾರಿಗಳ ಪರವಾಗಿ ಅಭಿನಂದನೆ ತಿಳಿಸುತ್ತಿದ್ದೇನೆ.

**-ಕೆ.ಎಂ. ದಿನಕರ ಶೆಟ್ಟಿ, ಆದರ್ಶ ಸ್ಟೋರ್ಸ್,**
ಹುಲಿದೇವರಬನ.

## ಮಕರ ಸಂಕ್ರಾಂತಿ

ಸಮಸ್ತ ಕನ್ನಡ ಕುಲ ಕೋಟಿಗೆ, ನಮ್ಮೆಲ್ಲ ಸಂಬಂಧಿಗಳಿಗೆ, ಗೆಳೆಯರಿಗೆ ಹಾಗೂ 'ಬಿಸಿಲ ಬದುಕು' ಪತ್ರಿಕೆಯ ಓದುಗರಿಗೆ ಹಾಗೂ ಸಂಪಾದಕರಿಗ ಮತ್ತು ಅವರ ಮಂಡಳಿಗೆ, ನಿಮ್ಮೆಲ್ಲರಿಗೂ ನನ್ನ ಪರವಾಗಿ ಮಕರ ಸಂಕ್ರಮಣದ ಹಾರ್ದಿಕ ಶುಭಾಶಯಗಳು.

**-ಕೃಪಾ ನಾ. ರಾಯಬಾಗಿ, ಬೆಟಗೇರಿ.**

## ಶುಭಾಶಯ

With best compliments from J.S. Karadi (The Hindu paper Agent) Opposite K.S.R.T.C. Bus Stand, Jamakhandi, Bagalkota.

**- Jagadisha S. Karadi,**
Jamakhandi

## ಯಶಸ್ವಿಗೆ ಹಾರೈಕೆ

ಹೈದರಾಬಾದ್ ಕರ್ನಾಟಕಕ್ಕೆ ತವರುಮನೆ ಉಡುಗೊರೆ ಚಲನಚಿತ್ರದ ವಿತರಕರಾದ ರಾಚಪ್ಪ ಎಂ. ಭಾಸ್ಕರ C/o ಪವನ ಕಿರಾಣಾ ಸ್ಟೋರ್ಸ್ ಯಾದಗಿರಿ. ಇವರಿಗೆ ವ್ಯಾಪಾರದಲ್ಲಿ ಯಶಸ್ಸು ಸಿಗಲಿ ಎಂದು ಹಾರೈಸುವ

**-ಉದಯ ಶೆಟ್ಟಿ, ಪ್ರಶಾಂತ ಹೋಟಲ್,**
ಯಾದಗಿರಿ.

## ವಿವಾಹ ವಾರ್ಷಿಕೋತ್ಸವ

1999 ಜನವರಿ 25ಕ್ಕೆ ತಮ್ಮ ವಿವಾಹದ ಪ್ರಥಮ ವಾರ್ಷಿಕೋತ್ಸವ ಆಚರಿಸುವ ಗುರುಮೂರ್ತಿ ಎಸ್. ಹೆಬ್ಬಾರ ಮತ್ತು ರೇಖಾ ಗುರುಮೂರ್ತಿ ಇವರಿಗೆ ಶುಭಾಶಯಗಳು. ಇಂದ : ಎಸ್.ಬಿ. ಮಲ್ಲೂರ್, ಮನೋಜಕುಮಾರ್, ಎ.ಜಿ. ಸುರೇಶ.

**-ಜಿ.ಎಸ್. ಹೆಬ್ಬಾರ, ಶಿಕ್ಷಕರು, S.T.J.J.T,**
ರಾಣೆಬೆನ್ನೂರು.

## ರಮ್‌ಜಾನ್ ಶುಭಾಶಯಗಳು

ಪವಿತ್ರ ರಮ್‌ಜಾನ್ ಹಬ್ಬವು ಸಕಲ ಜೀವಿಗಳಿಗೆ ಶುಭವನ್ನು ತರಲಿ.

**- ಇಸ್ಮಾಯಿಲ್ ಎಸ್. ಕೊಡಗಾನೂರ,** ಹಿರಿಯ ಪಾರ್ಮಾಸಿಸ್ಟ್, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಾರ್ಯಾಲಯ,
ಬಾಗಲಕೋಟೆ.

## ಸಾಹಿತ್ಯ ಸಮ್ಮೇಳನ

ಬೆಂಗಳೂರು ಜಿಲ್ಲೆಯ ಕನಕಪುರದಲ್ಲಿ ಫೆಬ್ರವರಿ 26, 27, 28ರಂದು 3 ದಿನಗಳ ಕಾಲ ನಡೆಯುವ 67 ನೇಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ನಮ್ಮ ಹಾರ್ದಿಕ ಶುಭಾಶಯಗಳು. ಹೆಚ್ಚು ಹೆಚ್ಚು ಸಾಹಿತ್ಯಾಸಕ್ತರಿಗೆ ಕರ್ನಾಟಕದ ಸಾಂಸ್ಕೃತಿಕ, ಧಾರ್ಮಿಕ, ಪರಂಪರೆ ಬಿಂಬಿಸುವಲ್ಲಿ ಯಶಸ್ವಿಯಾಗಲೆಂದು ಹಾರೈಸುವ

-ಶ್ರೀರಾಮಲಿಂಗೇಶ್ವರ,
ಯುವಕ ಮಂಡಳಿ,
ಅರಳಹಳ್ಳಿ.

## ಹುಟ್ಟುಹಬ್ಬದ ಶುಭಾಶಯ

ಚಿ. ಗಂ.ಜ. ಹರ್ಷವರ್ಧನಿಗೆ, ದಿನಾಂಕ 15ನೇ ಫೆಬ್ರವರಿ 1999ರಂದು 14ನೇ ಹುಟ್ಟಹಬ್ಬದ ಶುಭ ಸಂದರ್ಭದಲ್ಲಿ ನಿನಗೆ ಆ ಭಗವಂತ ಹೆಚ್ಚಿನ ಶ್ರೇಯಸ್ಸು ಹಾಗೂ ತುಂಬು ಆರೋಗ್ಯ, ಸುಖ ಸಂತೋಷ ದಯಪಾಲಿಸಲೆಂದು ಹಾರೈಸುವೆವು. ಕುಟುಂಬದ ಸದಸ್ಯರು ಹಾಗು ಗೆಳೆಯರು.

- ಜಿ.ಬಿ. ಜಗದೀಶ್,
ಬೆಂಗಳೂರು.

## ಹುಟ್ಟು ಹಬ್ಬ

Wish you happy Birthday Shabana & Wish you all happy & Cheerful new year. Shabana, Chitra, Savitri Sunanda

**- Krishna Hucharaddi,**
Hubli.

## ಹೊಸ ವರ್ಷ

Wishes his Sister Shreelata Sappandi a very happy and a prosperous new year and be successful in all her goals.

**-Sunil S. Sappandi,**
Ilkal.

## ಹೊಸ ವರ್ಷ

ರಮೇಶ್ ಹಾಗೂ ಡಾ. ಕೃಷ್ಣಾ ಅವರಿಗೆ ಹೊಸ ವರ್ಷದ ಶುಭಾಶಯಗಳು. ಅವರು ತಮ್ಮ ವೃತ್ತಿಯಲ್ಲಿ ನಿಷ್ಠೆಯಿಂದ ಕಾರ್ಯ ನಿರ್ವಹಿಸಲಿ ಎಂದು ಹಾರೈಸುವ.

- ಉಮೇಶ್ ಯ. ಚೌದ್ರಿ,
ಚಿಕ್ಕವಣಗಿ.

# ಉಚಿತ ಜಾಹೀರಾತು ಕೂಪನ್!

ಜಾಹೀರಾತು ನೀಡಲು ಹಣ ಕೊಡಬೇಕು ಎಂಬುದು ನಿಮಗೆಲ್ಲಾ ಗೊತ್ತಿರುವ ಸತ್ಯ. ಆದರೆ ಈಗ ನಿಮ್ಮ ಈ ನಂಬಿಕೆಯನ್ನೇ ಸುಳ್ಳು ಮಾಡುತ್ತಿದ್ದೇವೆ! ನೀವು ಒಂದು ಪೈಸೆಯನ್ನೂ ಖರ್ಚು ಮಾಡದೆ 'ಬದುಕು' ಮಾಸ ಪತ್ರಿಕೆಗೆ ವರ್ಗೀಕೃತ ಜಾಹೀರಾತು ನೀಡಬಹುದು.

**ಜಾಹೀರಾತಿನ ವಿಷಯ**

ಮದುವೆ, ಹುಟ್ಟುಹಬ್ಬ, ವಿದೇಶ ಪ್ರಯಾಣ, ಹಬ್ಬ, ಹೊಸವರ್ಷ, ವಿವಾಹ ವಾರ್ಷಿಕೋತ್ಸವ, ಪರೀಕ್ಷೆಯ ಯಶಸ್ಸು, ವ್ಯಾಪಾರದಲ್ಲಿ ಯಶಸ್ಸು, ಪ್ರಶಸ್ತಿ-ಪುರಸ್ಕಾರ.... ಹೀಗೆ ಯಾವುದೇ ಸಂದರ್ಭದಲ್ಲಿ ನೀವು ನಿಮ್ಮ ಆಪ್ತರಿಗೆ, ಗೆಳೆಯರಿಗೆ, ಸಂಬಂಧಿಕರಿಗೆ, ಪರಿಚಿತರಿಗೆ ಶುಭಾಶಯ ಕೋರಲು ಈ ಅವಕಾಶವನ್ನು ಬಳಸಿಕೊಳ್ಳಬಹುದು. ಉಚಿತ ಜಾಹೀರಾತು ಕೂಪನ್‌ನ್ನು ವೈಯಕ್ತಿಕ ಜಾಹೀರಾತುಗಳಿಗೆ ಮಾತ್ರ ಉಪಯೋಗಿಸಿ. ವ್ಯಾಪಾರ, ವೈವಾಹಿಕ ವಿಷಯಗಳಿಗೆ ಈ ಉಚಿತ ಸೌಲಭ್ಯ ಲಭ್ಯವಿಲ್ಲ.

**ಹೇಗೆ ಕಳಿಸುವುದು?**

ಈ ಕೆಳಗಿನ ಕೂಪನ್‌ನಲ್ಲಿ ಜಾಹೀರಾತು ವಿಷಯವನ್ನು 20 ಶಬ್ದಗಳಿಗೆ ಮೀರದಂತೆ ಬರೆದು 'ಬದುಕು' ವಿಳಾಸಕ್ಕೆ ಕಳಿಸಿದರೆ ನಿಮ್ಮ ಕೆಲಸ ಮುಗಿಯಿತು.

ಮುಂದಿನ ತಿಂಗಳ ಸಂಚಿಕೆಯಲ್ಲಿ ನೀವು ನಿಮ್ಮ ಜಾಹೀರಾತನ್ನು ನೋಡಿ ಆನಂದಿಸಬಹುದು. ಜಾಹೀರಾತಿನ ವಿಷಯ ಕನ್ನಡ ಅಥವಾ ಇಂಗ್ಲಿಷ್‌ನಲ್ಲಿರಬಹುದು. ಹಾಂ! ನೆನಪಿಡಿ! ನಮ್ಮ ಕಚೇರಿಯನ್ನು ತಲುಪುವ ಮೊದಲ 50 ಜಾಹೀರಾತುಗಳಿಗೆ ಮಾತ್ರ ಈ ಅವಕಾಶ ಸಿಗುತ್ತದೆ. ಆದ್ದರಿಂದ ತಡ ಮಾಡದೆ ತಕ್ಷಣ ಕೂಪನ್ ಭರ್ತಿ ಮಾಡಿ ಇಂದೇ ಕಳಿಸಿಕೊಡಿ.

**ಕೂಪನ್ ಕಳಿಸಬೇಕಾದ ವಿಳಾಸ**

'ಬಿಸಿಲ ಬದುಕು' ಮಾಸಪತ್ರಿಕೆ, ಅಂಚೆಪೆಟ್ಟಿಗೆ: 7951, ಬಸವೇಶ್ವರನಗರ, ಬೆಂಗಳೂರು - 560 079.

---

## ಉಚಿತ ಜಾಹೀರಾತು ಕೂಪನ್

ದಯವಿಟ್ಟು ಈ ಕೆಳಗಿನ ವರ್ಗೀಕೃತ ಜಾಹೀರಾತನ್ನು ಮಾರ್ಚ್ 99ರ 'ಬಿಸಿಲ ಬದುಕು' ಮಾಸಪತ್ರಿಕೆಯಲ್ಲಿ ಪ್ರಕಟಿಸಲು ಕೋರಿಕೆ.

| | | | |
|---|---|---|---|
| 1 | 2 | 3 | 4 |
| 5 | 6 | 7 | 8 |
| 9 | 10 | 11 | 12 |
| 13 | 14 | 15 | 16 |
| 17 | 18 | 19 | 20 |

ಜಾಹೀರಾತು ನೀಡುವವರ ಪೂರ್ಣ ವಿಳಾಸ..........................................................................

..........................................................................................................

..........................................................................................................

ಪಿನ್‌ಕೋಡ್.................................... ದೂರವಾಣಿ ಸಂಖ್ಯೆ..........................................

ಜಾಹೀರಾತುದಾರರ ಸಹಿ



■ ಕೋ.ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
127, ಪಶ್ಚಿಮ ಕಾರ್ಡ್ ರಸ್ತೆ,
ಮಹಾಲಕ್ಷ್ಮಿಪುರ, ಬೆಂಗಳೂರು - 86

# ಇದು ಎಲ್ಲಿಗೆ ಬಂತು! ಎಲ್ಲಿಗೆ ಹೋಗುತ್ತದೆ?

ಡಿಸೆಂಬರ್ 27 ರಂದು ರಾ.ಬ. ಗುಬ್ಬಿ ತೋಟದಪ್ಪ ಛಾರಿಟೀಸ್ ಧರ್ಮದರ್ಶಿಗಳ ಸಭೆ ನಡೆಯಿತು. ಆ ಸಂದರ್ಭದಲ್ಲಿ ತೋಟದಪ್ಪ ಧರ್ಮಛತ್ರದ ಮುಂದೆ 'ನಿಲುಗಡೆ ನಿಷೇಧಿಸಿದೆ' ಎಂಬ ಫಲಕದ ಅಡಿಯಲ್ಲೆ ಖಾಸಗಿ ಬಸ್ಸುಗಳ ಸಾಲೇ ನಿಂತಿರುವ ಬಗ್ಗೆ, ಛತ್ರಕ್ಕೆ ಸೇರಿದ ಮಳಿಗೆಗಳ ಬಾಗಿಲಲ್ಲೇ ಪ್ರವಾಸೋದ್ಯಮದ ಏಜೆಂಟರು ತಮ್ಮ ವ್ಯವಹಾರ ನಡೆಸುತ್ತಿದ್ದಾರೆಂದು ಅವರನ್ನು ಈ ಅನಧಿಕೃತ, ಕಾಯಿದೆ ಬಾಹಿರ ಕೃತ್ಯ ಮಾಡಬಾರದಂತೆ ಏನು ಕ್ರಮ ಕೈಕೊಳ್ಳಬೇಕೆಂಬ ಪ್ರಶ್ನೆ ಬಂತು. ಸಹಜವಾಗಿ ನಾನು ಕಾಯಿದೆ ಕ್ರಮ, ಪೊಲೀಸರಿಗೆ ಫಿರ್ಯಾದಿ ಕೊಡುವ ಸಲಹೆ ಮಾಡಿದೆ. ಈ ರಾಜ್ಯದ ಪ್ರಥಮ ಡಿಜಿಪಿ ಆಗಿದ್ದ ಶ್ರೀ ಹೆಚ್. ವೀರಭದ್ರಯ್ಯನವರೆ ನಮ್ಮ ಟ್ರಸ್ಟಿನ ಅಧ್ಯಕ್ಷರಾಗಿರುವುದರಿಂದ, ಪೊಲೀಸರು ಅವರ ಫಿರ್ಯಾದಿಯನ್ನು ಲಘುವಾಗಿ ಕಾಣಲಾರರೆಂದು ಒಬ್ಬಿಬ್ಬರು ಧರ್ಮದರ್ಶಿಗಳು ಸೂಚಿಸಿದರು.

ಆಗ ಟ್ರಸ್ಟಿನ ಕಾಯಿದೆ ಸಲಹೆಗಾರರು ಹೇಳಿದರು. ಈ ಪ್ರವಾಸೋದ್ಯಮ ಕಾಯಿದೆ ಬಾಹಿರವಾಗಿ ದಿನಂಪ್ರತಿ ಕೋಟಿ ಗಟ್ಟಲೆ ನಡೆಯುತ್ತಿದೆ. ಯಾವ ಪೊಲೀಸರೂ ಏನೂ ಮಾಡುವುದಿಲ್ಲ. ಫಿರ್ಯಾದಿ ಕೊಟ್ಟರೆ ಪೊಲೀಸರಿಗೆ ಲಾಭ ಮಾಡಿಕೊಟ್ಟಂತೆ. ಉನ್ನತ ಅಧಿಕಾರಿಗಳೂ ಏನೂ ಮಾಡಲಾರರು... ದೊಡ್ಡ ಮಾಫಿಯಾ ಈ ಕೃತ್ಯದಲ್ಲಿ ತೊಡಗಿದೆ. ಜೀವದ ಹಂಗು ತೊರೆದವರು ಮಾತ್ರ ಅವರನ್ನು ತಡವಬಹುದು ಎಂದು ಎಚ್ಚರಿಸಿದರು!

ಈ ಸಮಾಲೋಚನೆ ಆದ ಒಂದೇ ವಾರದೊಳಗಾಗಿ ತುಮಕೂರಿನ ಒಂದು ಸುದ್ದಿ ಬಹು ಅಬ್ಬರವಾಗಿ ಪ್ರಕಟವಾಯಿತು. ತುಮಕೂರಿನ ಬಸ್‌ಸ್ಟಾಂಡಿನ ಮುಂದೆಯೆ ಒಂದು ಖಾಸಗಿ ಬಸ್ಸಿನಲ್ಲಿ ಪ್ರಯಾಣಿಕರನ್ನು ಹತ್ತಿಸುತ್ತಿದ್ದರು. ಆಗ ಮೋಟಾರ್ ವಾಹನ ಇನ್ಸ್‌ಪೆಕ್ಟರ್ (ಎಂ.ವಿ.ಐ) ಅಲ್ಲಿಗೆ ಬಂದು, ಡ್ರೈವರ್‌ನನ್ನು ಬಸ್ಸಿಗೆ ಸಂಬಂಧಿಸಿದ ರಹದಾರಿ ಇ.... ಕಾಗದ ಪತ್ರಗಳನ್ನು ಕೇಳಿದರು. ಡ್ರೈವರ್ ಓಡಿ ಹೋದ. ಹಿಂದಿದ್ದ ಕಂಡಕ್ಟರನನ್ನು ಕೇಳಿದರೆ ಅವನೂ ಓಡಿಹೋದ. ಎಂ.ವಿ. ಐ. ತಮ್ಮ ಇಲಾಖೆಯ ಡ್ರೈವರನ್ನು ಕರೆಸಿ, ಬಸ್ಸನ್ನು ತಮ್ಮ ಕಛೇರಿಗೆ ಕ್ಕೊಂಡೊಯ್ಯಲು ಬಸ್ಸಿನಲ್ಲಿ ಕುಳಿತರು. ಇನ್ನು ಮುಂದಾದುದನ್ನು ಕೇಳಿ.

ಬಸ್ಸಿನ ಕೆಳಗಿದ್ದ ಯಾರೊ ಬಸ್ಸಿನ ಬಾಗಿಲಿಗೆ ಹೊರಗಿನಿಂದ ಬೀಗ ಹಾಕಿ, ಬಸ್ಸಿಗೆ ಪೆಟ್ರೋಲ್ ಉಗ್ಗಿ ಬೆಂಕಿ ಹಚ್ಚಲು ಹವಣಿಸಿದರು. ಬಸ್ಸು ಸುಟ್ಟು ಹೋಗುವ ಮುಂಚೆ ಸ್ಟಾಂಡಿನಲ್ಲಿದ್ದವರು ಬೆಂಕಿ ಆರಿಸಿ, ಒಳಗಿದ್ದ ಎಂ.ವಿ.ಐ. ಮತ್ತು ಡ್ರೈವರನ್ನು ಕೆಳಗಿಳಿಸಿ ಪ್ರಾಣಾಪಾಯದಿಂದ ಪಾರು ಮಾಡಿದರು! ಡಿಸೆಂಬರ್ 27ರಂದು ನಾವು ಶಂಕಿಸಿದ್ದ ಪ್ರಾಣಾಪಾಯ ಬೆಂಗಳೂರಿನಲ್ಲಿ ಆಗದಿದ್ದರೂ, ಹತ್ತಿರದ ರಾಜಧಾನಿಗೆ ಕೇವಲ 70 ಕಿ.ಮೀ. ದೂರದ ತುಮಕೂರಿನಲ್ಲಿ ಹಾಡು ಹಗಲೇ ನಡೆಯಿತು! ಅಂದರೆ ಇದು ಎಲ್ಲಿಗೆ ಬಂತು?

ಭಾರತ ಸರ್ಕಾರ ರೇಷ್ಮೆ ಆಮದು ಮಾಡಿಕೊಳ್ಳಲು ನಿರ್ಧರಿಸಿ ಆಜ್ಞೆಯನ್ನು ಹೊರಡಿಸುತ್ತದೆ. ವಿದೇಶೀ ರೇಷ್ಮೆ ಆಮದು ನೀತಿಯಿಂದ ಕರ್ನಾಟಕದ ರೇಷ್ಮೆ ಬೆಳೆಗಾರರಿಗೆ ಅಪಾರ ನಷ್ಟವಾಗುತ್ತದೆ ಎಂದು ಪ್ರತಿಭಟಿಸುತ್ತಾರೆ. ಅವರನ್ನು ಬೆಂಬಲಿಸಿ ಮಾಜಿ ಪ್ರಧಾನಿಗಳಂಥವರು ಹೋರಾಟ ನಡೆಸುವುದಕ್ಕಾಗಿ ಪ್ರೋತ್ಸಾಹ ಕೊಡುತ್ತಾರೆ. ಬೆಂಗಳೂರಿನಲ್ಲಿ ಬೃಹತ್ ಸಮಾವೇಶ ಜರುಗಿ ಜನ ಮೆರವಣಿಗೆ ತೆಗೆಯುತ್ತಾರೆ. ಆ ಮೆರವಣಿಗೆಗಾರರು ಕೇಂದ್ರ ವಾಣಿಜ್ಯ ಮಂತ್ರಿ ರಾಮಕೃಷ್ಣ ಹೆಗಡೆಯವರ ಮನೆಯ ಮೇಲೆ ದಾಳಿ ಮಾಡುತ್ತಾರೆ! ಯಾರೂ ಏನೂ ಮಾಡುವಂತಿಲ್ಲ! ಇದು ಎಲ್ಲಿಗೆ ಬಂತು?

ಅದೇ ದಿನ ಇನ್ನೊಂದು ಪ್ರದರ್ಶನ. ಹಂಪಿಯಲ್ಲಿ ಜರುಗಿದ ಸಮಾರಂಭದಲ್ಲಿ ವರನಟರಿಗೆ ಹಾಡಲು ಅವಕಾಶ ಕೊಡದೆ ಅವಮಾನ ಮಾಡಿದರೆಂದು ಆ ನಟರ ಅಭಿಮಾನಿಗಳ ಸಂಘದವರು ಪ್ರದರ್ಶನ ನಡೆಸುತ್ತಾರೆ. ವಿಧಾನಸೌಧದತ್ತ ನುಗ್ಗಿ ಅಲ್ಲಿದ್ದ ಮಂತ್ರಿಗಳ ಕಾರುಗಳನ್ನು ಹತ್ತಿ ತುಳಿದು, ಗಾಜುಗಳನ್ನು ಒಡೆದು, ಹೂ ಮತ್ತು ಗಿಡಗಳ ಕುಂಡಗಳನ್ನು ಧ್ವಂಸ ಮಾಡುತ್ತಾರೆ. ಇದು ಹಾಡು ಹಗಲೇ ನಡೆಯುತ್ತದೆ. ವಿಧಾನ ಸೌಧದ ಮುಂದೆಯೆ ನಡೆಯುತ್ತದೆ! ಇದು ಎಲ್ಲಿಗೆ ಬಂತು!!

ಇನ್ನೂ ಪಿ.ಯು.ಸಿ. ಓದುತ್ತಿರುವ ಮೂವರು ಬಾಲಕರು, ಉತ್ತರ ಪ್ರದೇಶದ ಪ್ರವಾಸ ಮಾಡುವ ಉತ್ಸುಕತೆಯಲ್ಲಿ, ಹಾಡು ಹಗಲು ಪರಿಚಿತರ ಮನೆಗೆ ಹೋಗಿ ಅಜ್ಜಿಯ ಕುತ್ತಿಗೆಗೆ ಉರುಳು ಹಾಕಿಕೊಂದು ಸೊಸೆಯನ್ನು ಚಾಕಿನಿಂದ ಇರಿದು, ಹಸುಳೆ ಮೊಮ್ಮಗಳನ್ನು ಬಾಯಿಪ್ಪಿ ಮೂಲೆಗೆಸೆದು ಎಪ್ಪತ್ತು ಸಾವಿರ ರೂ. ದೋಚಿಕೊಂಡು ಪರಾರಿಯಾಗುತ್ತಾರೆ. ಅದೂ ಬೆಂಗಳೂರಿನಲ್ಲಿ. ಇದು ಎಲ್ಲಿಗೆ ಬಂತು!

ಕಾನೂನು ಉಲ್ಲಂಘನೆಯ ಇಂಥ ಕೃತ್ಯಗಳು -ರಾಜಾರೋಷ, ಹಾಡುಹಗಲು, ಜನ ನಿಬಿಡ ಪ್ರದೇಶದಲ್ಲಿಯೆ ಆಗುತ್ತಿರುವುದು ದಿನದಿನವೂ ಹಗಲು ಇರುಳು ರಾಜ್ಯದ ಎಲ್ಲೆಡೆಯಲ್ಲೂ ನಡೆಯುತ್ತಿರುವುದನ್ನು ಪತ್ರಿಕೆಗಳು ಮುಖಪುಟದಲ್ಲಿ ಪ್ರಕಟಿಸುತ್ತಿವೆ. ಹಿಂದೆ ಎಲ್ಲೊ ಯಾವಾಗಲೋ ಕದ್ದು ಮುಚ್ಚಿ ಹೆದರಿ ಹೆದರಿ ಮಾಡುತ್ತಿದ್ದ ಕಳವು ದೊಂಬಿ ದರೋಡೆ ಕೊಲೆಕೊಳ್ಳಿ ಸ್ತ್ರೀಮಾನ ಭಂಗ ಮುಂತಾದ ದುಷ್ಕೃತ್ಯಗಳು ಈಗ ಯಾವ ಅಂಜಿಕೆಯೂ ಇಲ್ಲದೆ ದಿನದಿನವೂ ನಡೆಯುತ್ತಿವೆ. ರಾಮಚಂದ್ರ, ಕೊತ್ವಾಲ, ಜಯರಾಜ್, ಮುತ್ತಪ್ಪರೈ... ಮುಂತಾದವರ ಸಂತತಿಯ ಉಪಟಳ ಈಗ ಬೀದಿ ಬೀದಿಯಲ್ಲಿ ಪ್ರತಿ ಬಡಾವಣೆಯಲ್ಲಿ ನಡೆಯುತ್ತಿವೆ.

ನಮ್ಮ ಅಜ್ಜಂದಿರ ಬಾಯಿಂದ ಕಳೆದ ಶತಮಾನದಲ್ಲಿ ಪಂಜುಗಳ್ಳರು, ಪಿಂಡಾರಿಗಳು, ಠಕ್ಕರು.......ಮುಂತಾದವರು ಮಾಡುತ್ತಿದ್ದ ದರೋಡೆ ದೊಂಬಿಗಳ ಕತೆಯನ್ನು ನಾವು ಕೇವಲ ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ಕೇಳುತ್ತಿದ್ದ ನಮಗೆ ಅವುಗಳನ್ನು ನಂಬಲು ಕಷ್ಟವಾಗಿತ್ತು. ಬಳ್ಳಾರಿಯ ಬೇಸಿಗೆಯಲ್ಲಿ ನೂರಕ್ಕೆ 70-80 ಜನ

ರಾತ್ರಿ ಮನೆಯ ಕದ ಹಾಕದೆ ಮಲಗುತ್ತಿದ್ದರು. ಆದರೆ ಈಗ ಬೆಂಗಳೂರಿನಲ್ಲಿ ಹಗಲು ಮನೆಯ ಕದ ತೆಗೆಯುವುದು ಪ್ರಾಣಾಪಾಯದ ಮಾತು! ಇದು ಎಲ್ಲಿಗೆ ಬಂತು?

ಹಳ್ಳಿಗಳಲ್ಲಿ ಹೊಲಗಳನ್ನು ಒತ್ತುವರಿ ಮಾಡುವುದು ಬಹು ಅಪರೂಪದ ದೌರ್ಜನ್ಯ ವೆನಿಸಿತ್ತು. ಈಗ ಯಾರ ಹೊಲವನ್ನು ಯಾರಾದರೂ ಬೆಂಗಳೂರಿನಲ್ಲಿ ಮಾರಬಹುದು. ಮಾರದಿದ್ದರೂ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಬೆಂಗಳೂರಿನ ನಗರಪಾಲಿಕೆ-ಸರ್ಕಾರದ ಜಾಗದಲ್ಲಿ ಮೂರಂತಸ್ತಿನ ಮನೆ ಕಟ್ಟಿಸಿಕೊಳ್ಳ ಬಹುದು. ಸರ್ಕಾರಿ ಜಮೀನನ್ನು ತೋಳ್ ಬಲದಿಂದ ಆಕ್ರಮಿಸಿ ಕೋಟಿ ಕೋಟಿ ಹಣ ದೋಚಬಹುದು! ನಗರ ಪಾಲಿಕೆಯ ನಿಯಮ ಗಳನ್ನು ಮುರಿದು ಎಲ್ಲೆಂದರಲ್ಲಿ ವ್ಯಾಪಾರ ಮಳಿಗೆ [illegible] [illegible] [illegible] ವ್ಯಾಪಾರವನ್ನು [illegible] ನಡೆಸಬಹುದು! ಅಷ್ಟೇಕೆ [illegible] ರೊಮೇಶಶರ್ಮಾ ಯಾರ ಮನೆಯನ್ನಾದರೂ ತೋಳ್ ಬಲದಿಂದ ಆಕ್ರಮಿಸ ಬಹುದು!! ಮೈಸೂರಿನಲ್ಲಿ ಯಾರಿಗೊ ಸೇರಿದ ನಿವೇಶನವನ್ನು ಯಾರಿಂದಲೋ ಕೊಂಡು, ನ್ಯಾಯಾಲಯದ ತಡೆ ಆಜ್ಞೆಯನ್ನು ದಿಕ್ಕರಿಸಿ ಮನೆಕಟ್ಟಿಸಬಹುದು! ಮೈಸೂರು ಮಹಾನಗರ ಪಾಲಿಕೆ, ಕಸಕೊಳೆಯನ್ನು ಸಾಗಿಸಲು ಕೋಟಿ ಕೋಟಿ ಖರ್ಚು ಮಾಡಿತಂತೆ! ತಪಾಸಣೆ ಮಾಡಿದರೆ ಯಾವ ಲಾರಿಗಳಲ್ಲಿ ಕಸಕೊಳೆ (ಗಾರ್ಬೇಜ್) ಸಾಗಿಸಿದೆವೆಂದು ಬಿಲ್ ಕೊಟ್ಟಿದ್ದರೂ ಆ ಲಾರಿಗಳೇ ಇಲ್ಲ! ಬಿಹಾರ್‌ನಲ್ಲಿ 950 ಕೋಟಿ ರೂಪಾಯಿಗಳ ಮೇವು ಖರೀದಿಸಿ ಖಜಾನೆ ಲೂಟಿ ಮಾಡಿದರು. ಒಂದೇ ಒಂದು ಹಿಡಿ ಮೇವು ದನಗಳಿಗೆ ಸಿಗಲಿಲ್ಲ...!. ದನಗಳ ಸೆಗಣಿಯೂ ಸಿಗಲಿಲ್ಲ..!ಹೀಗೆ ಪಟ್ಟಿಮಾಡ ಬಹುದು. ಇದು ಎಲ್ಲಿಗೆ ಬಂತು!



ಎನ್ರೀ ಅರ್ಜಿಫಾರ್ಮ್‌ನಲ್ಲಿ ನಿಮ್ಮ ಹವ್ಯಾಸ ಅನ್ನೊ ಕಾಲಂನಲ್ಲಿ ಗುಟುಕಾ ತಿನ್ನೋದು ಅಂತಾ ಬರೆದಿದ್ದೀರಲ್ಲಾ

ಹೀಗೇಕೆ? ಕಾನೂನನ್ನು ಜಾರಿಮಾಡುವ ಶಾಸಕರು, ಆ ಕಾನೂನನ್ನು ಕಾರ್ಯಗತಗೊಳಿಸುವ ಆಡಳಿತ ವರ್ಗ ಎಲ್ಲರೂ ಈ ಹಗಲು ದರೋಡೆಯಲ್ಲಿ ಶಾಮೀಲು ಆಗಿದ್ದಾರೆಂದು ಸದನ ಸಮಿತಿಗಳು, ವೃತ್ತಪತ್ರಿಕೆಗಳು, ಸಮಾಜದ ಮುಖಂಡರು... ಬೊಬ್ಬೆ ಹೊಡೆಯುತ್ತಾರೆ. ಕೃಷ್ಣಾ ಮೇಲ್ದಂಡೆ ಕಾಮಗಾರಿಯಲ್ಲಿ ಕಂಟ್ರಾಕ್ಟರ್‌ಗಳು ಸಹಸ್ರಾರು ಕೋಟಿ ನುಂಗಿದ್ದಾರೆಂದು ವೈಜನಾಥ ಪಾಟೀಲ್ ಸಮಿತಿ ವರದಿ ಮಾಡಿತು. ಸರ್ಕಾರ ಆ ವರದಿಯನ್ನು ತಿರಸ್ಕರಿಸಿತು! ಕಾಂಗ್ರೆಸ್ ಕಛೇರಿಯಲ್ಲಿ ಸ್ವಯಂ ಸೇವಕರಾಗಿ ಸೇರಿದವರು ನಿತ್ಯ ಜೀವನಕ್ಕಾಗಿ ಸಣ್ಣ ಪುಟ್ಟ ಕೆಲಸ ಮಾಡುತ್ತಿದ್ದವರು, ಊರಿಂದೂರಿಗೆ ಹೋಗಲು ಬಸ್ ಚಾರ್ಜಿಗಾಗಿ ಮತ್ತೊಬ್ಬರ ಮುಂದೆ ಕೈ ಚಾಚುತ್ತಿದ್ದ ಬೀದಿ ಭಿಕಾರಿಗಳು ಈಗ ಬೆಂಗಳೂರಿನ ಒಂದೊಂದು ಬಡಾವಣೆಗಳಲ್ಲಿ ಅರಮನೆಯನ್ನು ನಾಚಿಸುವಂಥ ಭವ್ಯಸೌಧಗಳನ್ನು ಕಟ್ಟಿಸಿಕೊಂಡು ರಾಜರಿಗಿಂತ ರಾಜರಾಗಿದ್ದಾರೆ! ಇದು ಎಲ್ಲಿಗೆ ಬಂತು!

ಇಂಥ ಪರಿಸ್ಥಿತಿಯಿಂದ ಈ ದೇಶವನ್ನು ಪಾರುಮಾಡುವವರು ಯಾರು? ಕಾನೂನು ಭಂಗವಾಗದಂತೆ ನೋಡಿಕೊಳ್ಳಬೇಕಾದವರು, ಅಧಿಕಾರ ವಹಿಸಿದವರು, ನೌಕರಿವರ್ಗ. ಆದರೆ ಈಗ ದೇಶದಲ್ಲಿ ಆಗುತ್ತಿರುವ ಭ್ರಷ್ಟಾಚಾರಗಳ ತಾಯಿಬೇರು ಚುನಾಯಿತ ಪ್ರತಿನಿಧಿಗಳು. ಅವರ ಆಶ್ರಯ, ಕುಮ್ಮಕ್ಕು, ಪ್ರೋತ್ಸಾಹದಿಂದಲೇ ಸರ್ಕಾರಿ ನೌಕರರು ಕಾನೂನಿನ ಉಲ್ಲಂಘನೆ ಮಾಡುತ್ತಿದ್ದಾರೆ! ಅಂದರೆ ಪರಿಸ್ಥಿತಿಯನ್ನು ಸುಧಾರಿಸುವುದು ಸಾಧ್ಯವೆ? ಈ ಅಧೋಗತಿಗೆ ಕಾರಣರಾದ ಶಾಸಕರಿಂದ, ಸರ್ಕಾರಿ ನೌಕರರಿಂದ ಇದನ್ನು ಪರಿಹರಿಸುವುದಾಗದು ಎಂದೇ ತೀರ್ಮಾನ. ಹಾಗಾದರೆ ಧರ್ಮಗುರುಗಳು, ಮಠಾಧೀಶ್ವರರು ಜನರಲ್ಲಿ ನೈತಿಕ ಮೌಲ್ಯಗಳನ್ನು ಬಿತ್ತರಿಸಿ ಸುಧಾರಿಸಬಹುದೆ? ದೈವ ಭಕ್ತಿಯನ್ನು ಬೆಳೆಸಿ ಧರ್ಮಭೀರುವನ್ನಾಗಿ ಮಾಡಲು ಸಾಧ್ಯವಾದೀತೆ?

ಕೆಲವು ಮಠಗಳು ರಾಜಕಾರಣಿಗಳ ಕಳ್ಳಗಂಟಿನ ಕಣಜಗಳಾಗಿವೆ! ಅಲ್ಲಿ ಬಚ್ಚಿಟ್ಟರೆ ಕ್ಷೇಮ ಎಂದು ರಾಜಕಾರಣಿಗಳು ಭ್ರಷ್ಟ ನೌಕರರು ಮಠಾಧೀಶ್ವರರ ಮರೆ ಹೊಗುತ್ತಾರೆ. ಅಷ್ಟೇಕೆ? ಮಠಗಳಲ್ಲಿಯೆ -- ಹಿರಿ-ಕಿರಿಯ ಸ್ವಾಮಿಗಳಲ್ಲಿ ಮನಸ್ತಾಪ ಬೆಳೆದು ಮಧ್ಯರಾತ್ರಿಯಲ್ಲಿ ಪಟ್ಟಾಧಿಕಾರ ಪಡೆದು,ಹಗಲು ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿಸಿಕೊಳ್ಳುವ ಮಟ್ಟಕ್ಕೆ ಬಂದಿದೆ! ಅವರಿಗೆ ಅತ್ತ ಕೆಲವರು ಇತ್ತ ಕೆಲವರು ರಾಜಕಾರಣಿಗಳು, ಮುಖಂಡರೆಂಬ ಜನ ಬೆಂಬಲ ಕೊಟ್ಟು ಬಂದ್, ರಸ್ತೆರೋಖೊ...ಇ....ಇ... ಚಳವಳಿ ನಡೆಸುತ್ತಾರೆ! ಅಂದ ಮೇಲೆ ನೈತಿಕ ಅದಃಪತನ ಹೊಂದುತ್ತಿರುವ ಈ ಕ್ಷಯ/ಕ್ಯಾನ್ಸರ್ ಪೀಡಿತ ಸಮಾಜವನ್ನು ಮೇಲೆತ್ತುವ ಧರ್ಮ ಸಂಸ್ಥಾಪಕರು ಯಾರಿದ್ದಾರೆ?! ಬಾಬ್ರಿ ಮಸೀದಿ ಧ್ವಂಸಕ್ಕೆ ಮೊದಲು ಇಟ್ಟಿಗೆ ಮೆರವಣಿಗೆ, ಚಿತಾಭಸ್ಮದ ಮಾರಾಟ ಮುಂತಾದ ಜಾತಿದ್ವೇಷದ ಬೀಜ ಬಿತ್ತಿದವರೂ ಕೆಲವು ಧೂರ್ತ ಧರ್ಮ ಗುರುಗಳೇ! ಬಾಬ್ರಿ ಮಸೀದಿ ಕೆಡಹುವಾಗ, ಆ ಬರ್ಬರ ಕೃತ್ಯಕ್ಕೆ ಪ್ರೋತ್ಸಾಹ ಕೊಡುತ್ತಿದ್ದ ಸ್ವಾಮಿಗಳ ಚಿತ್ರವನ್ನು ಐ ವಿಟ್‌ನೆಸ್ ವಿಡಿಯೊ ಸಂಸ್ಥೆ ಶಾಶ್ವತವಾಗಿ ದಾಖಲೆ ಮಾಡಿದೆ... ಆಗ ಉಲ್ಬಣವಾದ ಈ ಜಾತಿ ದ್ವೇಷ ಗುಜರಾತಿಗೂ ಕರ್ನಾಟಕಕ್ಕೂ ಹಬ್ಬುವಂತೆ ಮಾಡಿದ ರಕ್ಕಸ ಕೃತ್ಯಕ್ಕೂ ಕೆಲವು ಧರ್ಮ ಗುರುಗಳು, ಮಠಾಧೀಶ್ವರರು, ಪೂಜ್ಯ ಪಾದರು ಕಾರಣರಾಗಿದ್ದಾರೆ. ಬಡಿದೆಬ್ಬಿಸಿದ ದ್ವೇಷವನ್ನು ತಗ್ಗಿಸಲು ಸಭಾಂಗಣದಲ್ಲಿ ಕುಳಿತು ಇದೇ ಧರ್ಮಗುರುಗಳು ಉಪದೇಶ ಮಾಡುತ್ತಿದ್ದಾರೆ? ದ್ವೇಷವನ್ನು ಹುಟ್ಟಿಸುವುದು, ಮನಸ್ಸನ್ನು ಕೆರಳಿಸುವುದು ಒಂದು ನಿಮಿಷದ ಕೆಲಸ. ಕೆಟ್ಟ ಮನಸ್ಸನ್ನು ಸರಿಪಡಿಸುವುದು ವರುಷ ವರುಷ ಯುಗ ಯುಗಗಳಕಾಲ ಸಾಧ್ಯವಾಗಲಿಕ್ಕಿಲ್ಲ. ಅಂದ ಮೇಲೆ ಈ ಧರ್ಮಗುರುಗಳಿಂದಲೂ ಈ ದೇಶದ ನೈತಿಕ ಅದಃಪತನವನ್ನು ತಡೆ ಹಿಡಿಯಲು ಸಾಧ್ಯವಿಲ್ಲ ಎಂದೇ ಆಗುತ್ತದೆ.

ಇನ್ನು ದೇವಾಲಯಗಳಲ್ಲಿರುವ ಕಲ್ಲು ಕಂಚು ಮರ ಕಬ್ಬಿಣ ಹಿತ್ತಾಳೆ, ಕೆಲವು ಬೆಳ್ಳಿ ಬಂಗಾರದ ದೇವ ವಿಗ್ರಹಗಳಾದರೂ ಇದನ್ನು ಸುಧಾರಿಸಬಹುದೆ? ತಿರುಪತಿ ಮುಂತಾದ ದೇವಾಲಯಗಳಿಗೆ ಹೋಗಿ ಆ ವಜ್ರವೈಡೂರ್ಯ ರತ್ನ ಖಚಿತ ವಿಗ್ರಹ ದರ್ಶನ ಮಾಡಿ 'ಪುಣ್ಯ'ವನ್ನು-ಆ ಅರ್ಥವಿಲ್ಲದ, ಕಣ್ಣಿಗೆಕಾಣದ, ಕೈಗೆ ಸಿಕ್ಕದ ಪುಣ್ಯವನ್ನು ಕಟ್ಟಿಕೊಳ್ಳಬೇಕೆಂದರೆ ಅಲ್ಲಿಯೂ

ಪೂಜಾರಿಗಳ ಪಿಡುಗು. ಪುರೋಹಿತರ ಹಾವಳಿ! ದೇವರೆಂದು ಜನ ನಂಬಿರುವ, ಅಲ್ಲಿ ದೇವರಿಲ್ಲವೇ ಇಲ್ಲವೆಂದು ಖಂಡಿತವಾಗಿ ನಂಬಿರುವ ಪೂಜಾರಿ ಪುರೋಹಿತರೇ ಧಾರ್ಮಿಕ ವೇಷದ ಪ್ರಚಂಡ ಧರ್ಮ ದ್ರೋಹಿಗಳು! ಅವರು ಜನರಲ್ಲಿ ಧರ್ಮ ಬುದ್ಧಿಯನ್ನು ಹುಟ್ಟಿಸುತ್ತಾರೆ. ದಾರಿತಪ್ಪಿದ ಈ ಸಮಾಜವನ್ನು ದಾರಿಗೆ ಹಚ್ಚುತ್ತಾರೆ ಎಂಬುದು ಬರೀ ಭ್ರಮೆ! ಅಂದ ಮೇಲೆ ನೈತಿಕ ಅದಃಪತನಕ್ಕೆ ಧುಮ್ಮುಕ್ಕುತ್ತಿರುವ ಈ ಸಮಾಜವನ್ನು ಎತ್ತಿ ಹಿಡಿದಾರೆಯೆ?

ಇನ್ನು ನ್ಯಾಯಾಲಯಗಳಿಂದಲೂ ಈ ನ್ಯಾಯಬಾಹಿರ ಕೃತ್ಯಗಳನ್ನು ಕೆಲಮಟ್ಟಿಗಾದರೂ ತಡೆಗಟ್ಟುವುದು ಸಾಧ್ಯವಾದೀತೆ? ರಾಜಕಿಯ ಪುಢಾರಿಗಳು, ಅವರ ಆಶ್ರಯಪಡೆದ ಭ್ರಷ್ಟ ನೌಕರರನ್ನು ದಂಡಿಸುವುದರ ಮೂಲಕ ಈ ದೇಶವನ್ನು ನ್ಯಾಯಾಂಗ ಉಳಿಸಬಹುದೆ ಎಂದು ಕೆಲವರಾದರೂ ನ್ಯಾಯದೇಗುಲದತ್ತ ಕತ್ತು ಹೊರಳಿಸಿ ನೋಡುತ್ತಿದ್ದಾರೆ! ಆದರೆ ಅಲ್ಲಿಯೂ ನ್ಯಾಯ ಜ್ಯೋತಿ ಕ್ಷೀಣವಾಗುತ್ತ ನಡೆದಿದೆ. ನಮ್ಮ ರಾಜ್ಯದಲ್ಲಿಯೆ ನ್ಯಾಯಾಧೀಶರುಗಳಿಗೆ ನಿವೇಶನವನ್ನು ಹಂಚುವಾಗ ಕಾನೂನಿನ ಉಲ್ಲಂಘನೆ ಆಗಿದೆ ಎಂದು ನ್ಯಾಯಾಲಯದ ಮರೆಹೊಕ್ಕಾಗ ನಿರಾಶೆಯೆ ಫಲವಾಯಿತು! ನ್ಯಾಯಾಧೀಶರು ನ್ಯಾಯವಲ್ಲದ ರೀತಿಯಲ್ಲಿ ಸೌಲಭ್ಯಗಳನ್ನು ಗಿಟ್ಟಿಸಿಕೊಂಡರೆಂದು ಮಾತನಾಡಿಕೊಳ್ಳುತ್ತಿರುವುದು ನ್ಯಾಯಾಧೀಶರ ಕಿವಿಗೂ ಬಿದ್ದಿದೆ! ಅಂದ ಮೇಲೆ ನ್ಯಾಯಾಲಯಕ್ಕೆ ಹೋಗಿ ನ್ಯಾಯ ದೊರಕಿಸಿಕೊಳ್ಳುವ ಕನಸುಕಂಡವರು ಕನಸುಣಿಗಳಾಗುವ ಕಾಲ ಇದು! ಹಾಗಾದರೆ ಗತಿ?!

ಸರ್ವ ಸಾಧಾರಣ ಜನರು - ಹೂವು, ಹಾಲು ತರಕಾರಿ ಮಾರುವ ಸಾಧಾರಣ ಜನ ಈಗಲೂ ಸತ್ಯ ಪ್ರೇಮ ಪ್ರಾಮಾಣಿಕತೆಗೆ ಬೆಲೆ ಕೊಡುತ್ತಾರೆಂಬುದು ಸ್ವಲ್ಪ ಮಟ್ಟಿಗೆ ನಿಜ. ಆದರೆ ಅಂಥವರಿಂದ ಕುಸಿದು ಕುಣಿಸೇರಿರುವ ಪ್ರಾಮಾಣಿಕತೆಯನ್ನು ಎತ್ತಿ ಗಟ್ಟುವುದು ಸಾಧ್ಯವಾಗುತ್ತಿಲ್ಲ. ಅವರು ಅಸಹಾಯಕರಾಗಿ ದುಷ್ಟರಿಗೆ ತಲೆಬಾಗುವಂತಾಗಿದೆ. ಸತ್ಯವಂತರಿಗೆ ಕಾಲವಲ್ಲ ಎಂಬುದು ನಿತ್ಯಾನುಭವವಾಗುತ್ತಿದೆ. ಅಲ್ಪ ಸಂಖ್ಯಾತರಾಗಿರುವ ಸತ್ಯವಂತರು, ಬಹುಸಂಖ್ಯಾತ ಭ್ರಷ್ಟರ ಮಧ್ಯೆ ಬದುಕುವುದೆ ಅಸಾಧ್ಯವಾಗಿದೆ. ಹಿಂದೆ ಅಲ್ಲಲ್ಲಿ ಕೆಲವರೆ ಪಂಜುಗಳ್ಳರು, ಪಿಂಡಾರಿಗಳು, ಠಕ್ಕರು ಇರುತ್ತಿದ್ದರು. ಅವರಿಂದ ತಪ್ಪಿಸಿಕೊಂಡು ಬದುಕಲು ಸಾಧ್ಯವಿತ್ತು. ಈಗ ಊರೂರಲ್ಲೂ ನಾಗರಿಕ ವೇಷದಲ್ಲಿ ಚುನಾಯಿತ ಸ್ಥಾನದಲ್ಲೊ ಧನ ಬಲ, ಕುಟಿಲ ಬುದ್ಧಿ ಬಲದಿಂದಲೊ ದೌರ್ಜನ್ಯ ನಡೆಸುವವರ ಮಧ್ಯೆ ಬದುಕುವುದು ಹೇಗೆ? ಜಾತಿ ಜಾತಿಗಳಲ್ಲಿ ದ್ವೇಷ ಮಸೆಯುತ್ತಿರುವಾಗ ಬದುಕುವುದು ಹೇಗೆ?

ಇದಕ್ಕೇನಾದರೂ ಪರಿಹಾರ ಇದೆಯೆ? ಸ್ವಾತಂತ್ರ್ಯವೆಂದರೆ ಸ್ವೇಚ್ಛೆ ಎಂದು ತಿಳಿದುಕೊಂಡು ವರ್ತಿಸುವ ನಮ್ಮ ದೇಶದ ಭ್ರಷ್ಟರು, ದುಷ್ಟರು, ಎಂದೂ-ಇತಿಹಾಸದಲ್ಲಿ ಎಂದೂ- ಪ್ರಜಾಪ್ರಭುತ್ವದಡಿಯಲ್ಲಿ ಬದುಕಿದವರಲ್ಲ. ಈ ದೇಶದ ಜನ ರಾಜರು, ಪಾಳೆಯಗಾರರ ಆಳ್ವಿಕೆಯ ನೆರಳಲ್ಲೇ ಬದುಕಿದವರು. ಅವರು ವಿಜಯನಗರದ ಅರಸನಾಗಿರಬಹುದು. ಮೊಘಲರಾಗಿರಬಹುದು. ಅವರಾದ ಮೇಲೆ ಬಂದ ಬ್ರಿಟಿಷರಾಗಿರಬಹುದು. ಈ ದೇಶದ ಜನ ರಾಜರ ಅಂಕುಶ, ಚಾಟಿ ಏಟು, ಬ್ರಿಟಿಷರ ಬೂಟ ನೇಟಿಗೆ ಮಣಿಯುತ್ತಾರೆಯೆ ಹೊರತು ಸ್ವತಃ ಶಾಸನಕ್ಕೆ ತಲೆಬಾಗಿದವರಲ್ಲ. ಈ ಮಾತನ್ನು ಬಂಕಿಮಚಂದ್ರ ಚಟರ್ಜಿ ಸುಂದರ ಮಾತಿನಲ್ಲಿ ಹೇಳಿದ್ದಾರೆ. ಶ್ರೀ ರಾಮಕೃಷ್ಣ ಪರಮಹಂಸರು ಒಮ್ಮೆ ಬಂಕಿಮನನ್ನು 'ಬಂಕಿಮ ಯಾಕೆ ಬಂಕಿಮ (ಬಾಗಿದವ)ನಾದ? ಎಂದು ಕೇಳಿದರಂತೆ; ಅದಕ್ಕೆ ಬಂಕಿಮ 'ಬ್ರಿಟಿಷರ ಬೂಟನೇಟಿನಿಂದ' ಎಂದು ಉತ್ತರಿಸಿದನಂತೆ! ಅಂದರೆ ನಮ್ಮ ಜನರಿಗೆ ಆಳುವವರ ಬೂಟಿನ ಏಟೇ ಮದ್ದು. ಅದಕ್ಕೇ ಅವರು ಮಣಿಯುವುದು. 'ಮಣಿಯುವವರಿಗೆ ಮಣಿದೀತು ಕಣ್ಣೇಕಲ್ಲು ಕೋಣ' ಎಂಬುದು ಬಳ್ಳಾರಿ ಚಿತ್ರದುರ್ಗ ಜಿಲ್ಲೆಗಳಲ್ಲಿ ಪ್ರಚಲಿತ ಇರುವ ಗಾದೆ. ಮಣಿಸುವ ಆ ಸಮರ್ಥರು ಯಾರು?

ಅಂಥ ಒಬ್ಬ ನಾಯಕಿ ಕೇವಲ 25 ವರ್ಷಗಳ ಹಿಂದೆ ಈ ದೇಶದಲ್ಲಿ ಆಗಿಹೋದಳು. ಇಂದಿರಾಗಾಂಧಿ 1975ರಲ್ಲಿ ತುರ್ತುಪರಿಸ್ಥಿತಿಯನ್ನು ಹೇರಿದಾಗ ಎರಡುವರೆ ವರ್ಷಗಳ ಕಾಲ ಕುನ್ನಿಯಂತೆ ಈ ಜನ ಬಿದ್ದಿದ್ದರು. ಸರ್ಕಾರಿ ನೌಕರರು ತುಟಿಪಿಟಿಕ್ ಎನ್ನಲಿಲ್ಲ. ಈಗ ಧರಣಿ, ರಸ್ತೆ ರೋಖೋ, ಮುಷ್ಕರ, ಬಹಿಷ್ಕಾರದ ಆಟಾಟೋಪದ ಮಾತುಗಳನ್ನಾಡುವ ಮಹಾಶೂರರು ಬಾಯಿ ಮುಚ್ಚಿಕೊಂಡು ಬಾಲ ಮುದುಡಿಕೊಂಡು ಬಿದ್ದಿದ್ದರು! ಅಂಥ ದಂಡ ಶಾಸನಕ್ಕೆ ಮಾತ್ರ ಈ ಜನ, ಜಾತಿ ಪ್ರಧಾನವಾದ ಈ ಸಮಾಜ, ಮಣಿದೀತು. ಆ ದಂಡಶಾಸನ ಎಷ್ಟೇ ಅಪ್ರಿಯವಾಗಲಿ, ಕೆಲವರಿಗೆ ಅಸಹನೀಯವಾಗಲಿ, ಕೆಲಕಾಲ ಕಷ್ಟದಾಯಕವಾಗಲಿ ಸದ್ಯದ ಪರಿಸ್ಥಿತಿಯಲ್ಲಿ ಅದೇ ಪರಿಹಾರವೆಂದು ಹತಾಶೆಯಿಂದ ಬೇರೆ ಗತಿಯಿಲ್ಲದೆ ಹೇಳಬೇಕಾಗುತ್ತದೆ. ಇಂದಿರಾಗಾಂಧಿ ತಪ್ಪಿದ್ದು ತಮ್ಮ ಗದ್ದುಗೆಯನ್ನು ಉಳಿಸಿಕೊಳ್ಳುವ ಸ್ವಾರ್ಥಕ್ಕಾಗಿ ರಾಜ್ಯದಂಡವನ್ನು ಉಪಯೋಗಿಸಿದ್ದು, ತಮ್ಮ ವಂಶಪಾರಂಪರ್ಯ ಆಳ್ವಿಕೆಯನ್ನು ಮುಂದುವರಿಸಲು ದಂಡ ಶಾಸನವನ್ನು ತಂದದ್ದು ಅವರಿಗೆ ಕುತ್ತಾಯಿತು. ಅಲ್ಲದೆ ನಮ್ಮ ಸಂವಿಧಾನದತ್ತ ಅಧಿಕಾರವನ್ನು ಸ್ವಾರ್ಥಕ್ಕೆ ದುರುಪಯೋಗ ಪಡಿಸಿಕೊಂಡದ್ದು ಇಂದಿರಾಗಾಂಧಿಯ ತಪ್ಪು ಹೆಜ್ಜೆ. ಆ ಸ್ವಾರ್ಥ ಇಲ್ಲದೆ ಹೋಗಿದ್ದರೆ ಆ ದಂಡಶಾಸನ ಅಗತ್ಯವಾಗಿತ್ತು.

ಈಗ ತುರ್ತು ಪರಿಸ್ಥಿತಿ ತರುವುದು ಉಚಿತವೆ? ಶಾಸನೋಲ್ಲಂಘನೆ, ದೊಂಬಿ, ಡಕಾಯಿತಿ, ಕೋಮುಗಲಭೆ, ಸರ್ಕಾರಿ ಖಜಾನೆಯ ಲೂಟಿ, ಅಧಿಕಾರ ಶಾಹಿಯ ಅಪ್ರಾಮಾಣಿಕತೆ ಇ..... ಸಮಾಜ ವಿಛಿದ್ರಕಾರಕ ಶಕ್ತಿಗಳಿಂದ ಉಳಿಯಬೇಕೋ? ಅಥವಾ ಪ್ರಜಾಸತ್ತೆಯೆಂಬ ಆವೇಶವಿಲ್ಲದ ವೇಷದಿಂದ ಕೂಡಿದ ಈ ದುರಾಡಳಿತೆ ಮುಂದುವರಿಯಬೇಕೋ? ಪ್ರಜ್ಞಾವಂತ, ನಾಗರಿಕ ಕರ್ತವ್ಯ ನಿಷ್ಠೆಯುಳ್ಳ ಪ್ರಜೆಗಳಿದ್ದರೆ ಪ್ರಜಾಪ್ರಭುತ್ವವೆ ಲೇಸು. ಅದಿಲ್ಲದಿದ್ದರೆ - ಪುಂಡರು, ಪಿಂಡಾರಿಗಳು, ಠಕ್ಕರು, ಭ್ರಷ್ಟರು ಇರುವಂಥ ಪ್ರಜೆಗಳಾದರೆ, ಧರ್ಮನಿಷ್ಠರಾದ ಸತ್ಪ್ರಜೆಗಳನ್ನು ಕಾಪಾಡುವುದಕ್ಕೆ ಕೆಲವು ಕಾಲ ಆದರೂ ದಂಡನೀತಿಯೆ ಗತಿಯೆಂದು ಕಾಣುತ್ತದೆ. ■



ಅರಣ್ಯ ಸಚಿವ ಸ್ಥಾನ ಕೊಟ್ರೆ ಮಾತ್ರ ಶರಣಾಗ್ತೀನಿ......




## ಹೆಜ್ಜೆ-19

■ ಕೃಶಾಂಗ

# ಹೆಣ್ಣು ಹೆಣ್ಣಿನಂತೆ ಗಂಡು ಗಂಡಿನಂತೆ

**ಈ ಒತ್ತಡದ ಕಾರಣ ನಮ್ಮಲ್ಲನೇಕರು ನಮ್ಮ ಪೂರ್ವಜರು ಹೊಂದಿದ್ದ ಲೈಂಗಿಕ ಬಯಕೆಯ ಶಕ್ತಿಯಿಂದ ವಂಚಿತರಾಗುತ್ತಿದ್ದೇವೆಯೇ ಎಂಬ ಸಂಶಯ ಹುಟ್ಟುತ್ತದೆ.**

**ಜೈ**ವಿಕವಾಗಿ ಲೈಂಗಿಕಾಕರ್ಷಣೆ ವಂಶಾಭಿವೃದ್ಧಿಯಲ್ಲಿ ಅನಿವಾರ್ಯ. ನಾಗರಿಕತೆಯ ಬೆಳವಣಿಗೆಗೆ, ಲೈಂಗಿಕ ಸುಖದ ಬಯಕೆಯ ಜತೆ ಜತೆಗೇ ಅದಕ್ಕೆ ಪೂರಕವಾದ ಪ್ರೀತಿ ಪ್ರೇಮಗಳೂ ಕಾರಣ. ಹಸಿವೆಯನ್ನು ಬಿಟ್ಟರೆ ಕಾಮತೃಷೆಯೇ ಮಾನವ ಜಾತಿಯ ಪ್ರಮುಖ ಮೂಲ ಪ್ರವೃತ್ತಿ. ಈ ಎರಡೂ ಹಸಿವೆಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನ ಎಂಬುದು ಗಮನಾರ್ಹ.

ಮಾನವನ ಲೈಂಗಿಕ ಹಸಿವಿನ ಸ್ವರೂಪ ಸಮಾಜದ ನಿಯಮಗಳಿಗನುಸಾರವಾಗಿ ಕಾಲ ಕಾಲಕ್ಕೆ ಪರಿವರ್ತಿತವಾಗುತ್ತಲಿದೆ. ಯಾವುದೋ ಕಾಲದ ಭಾವನಾರಹಿತವಾದ, ಹುಟ್ಟಿನಿಂದಲೇ ಬಂದ ದೈಹಿಕಕ್ರಿಯೆ ಇಂದು ವಿವಿಧ ಗುಣಲಕ್ಷಣಗಳಿಂದೊಡಗೂಡಿದ 'ವಿವಾಹ' ವೆಂಬ ಕವಚ ತೊಟ್ಟಿದೆ. ಗಂಡು ಹೆಣ್ಣು ವಿವಾಹ ಯೋಗ್ಯರಾಗುವುದು. ವಧೂ-ವರ ಪರೀಕ್ಷೆ, ವಿವಾಹ ನಿಶ್ಚಯ, ವಿವಾಹ ವಿಧಿ ಇವಕ್ಕೆಲ್ಲ ಪ್ರಮುಖ ಸಾಮಾಜಿಕ ಸ್ವರೂಪ ಬಂದಿರುವುದನ್ನು ನಮ್ಮ ಅತಿ ಪೂರ್ವದ ಗಂಡು ಹೆಣ್ಣುಗಳಿಗೆ ನೋಡುವ ಅವಕಾಶವಿದಿದ್ದರೆ, ಅವರು ಏನೆಂದುಕೊಳ್ಳುತ್ತಿದ್ದರೋ? 'ವಿವಾಹ' ಒಂದು ರೂಢಿಗತ ಮತ್ತು ಸ್ವಾಭಾವಿಕ ಸಂಸ್ಥೆಯಾಗಿ ತಳವೂರುತ್ತಿದ್ದಂತೆಯೇ, ದರ್ಜಿಗಳು, ಆಭರಣ ಕಾರರು, ಸೌಂದರ್ಯವೃದ್ಧಿಗೃಹಗಳು, ತಂತ್ರ ಜ್ಞಾನ ಸಮೂಹಗಳು ಸ್ಥಿರಗೊಂಡಿವೆ. ಲೈಂಗಿಕ ಬಯಕೆಯೊಂದೇ ಉಳಿದು ಅದು ಪ್ರೇಮ ವಂಚಿತವಾದರೆ, ಇಂಥ ಸಮಸ್ಯೆಯ 'ಬಂಧಿ'ಯ ಭಕ್ತಿಮಾರ್ಗಕ್ಕೆಳೆಯಲ್ಪಟ್ಟು ಧರ್ಮ ದೇವರುಗಳ ನಿಕಟವರ್ತಿಯಾಗುವ ಸಂಭವವೂ ಇದೆ. ಪ್ರೇಮಕ್ಕಾಗಿ ಯುದ್ಧಗಳಾಗಿವೆ; ಪ್ರೇಮಾಕರ್ಷಣೆಗಾಗಿ ಬಗೆ ಬಗೆ ಶೈಲಿಯ ಪೋಷಾಕುಗಳು ಹುಟ್ಟಿಕೊಂಡಿವೆ; ಲೈಂಗಿಕತೆ ಹಾಗು ಪ್ರೇಮ ಕಲೆಗಳ ಮೂಲ ವಸ್ತುಗಳಾಗಿವೆ. ನಮ್ಮ ಸಮಗ್ರ ನಾಗರಿಕತೆಯಲ್ಲಿ ನಾವು ಸಾಧಿಸುತ್ತಿರುವ ಪ್ರಗತಿಯ ಸಂಕೇತಗಳಿಗೆಲ್ಲ ಮೂಲ ಪ್ರೇರಣೆ ಇವೆರಡೂ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ನಾಗರಿಕತೆಯ ಬೆಳವಣಿಗೆಗೆ ಮೊದಲು ಜೀವಿಗಳು ನಿಸರ್ಗದ ಮಡಿಲಲ್ಲಿದ್ದರು. ಆದರೆ ಇಂದು ನಮ್ಮಲ್ಲನೇಕರನ್ನು ಮಾನಸಿಕ ಒತ್ತಡ ಕಾಡುತ್ತದೆ. ಇದಕ್ಕೆ ಕಾರಣ ಒಂದಕ್ಕೊಂದು ವಿರುದ್ಧವಾದ ನಮ್ಮ ಅಭಿರುಚಿಗಳು ಮತ್ತು ಅನನುಕೂಲವಾದ ಸಾಮಾಜಿಕ ವಾತಾವರಣ. ಈ ಒತ್ತಡದ ಕಾರಣ ನಮ್ಮಲ್ಲನೇಕರು ನಮ್ಮ ಪೂರ್ವಜರು ಹೊಂದಿದ್ದ ಲೈಂಗಿಕ ಬಯಕೆಯ ಶಕ್ತಿಯಿಂದ ವಂಚಿತರಾಗುತ್ತಿದ್ದೇವೆಯೇ ಎಂಬ ಸಂಶಯ ಹುಟ್ಟುತ್ತದೆ. ಯಶಸ್ಸು ಸಾಧಿಸಬೇಕಾದ ನಮಗೆ ಅನಿವಾರ್ಯವಾದ 'ಹುಚ್ಚು ಕುದುರೆಯ ಓಟ' ಅವರಿಗೆ ಅನಿವಾರ್ಯವಾಗಿರಲಿಲ್ಲ. ಆದುದರಿಂದಲೇ 'ಬಲವಿದ್ದವನೇ ಬದುಕುತ್ತಾನೆ' ಎಂಬ ಕಾಲದಲ್ಲಿಯ ಈ ಲೈಂಗಿಕ ಬಯಕೆಯ ಶಕ್ತಿ ಈಗ ತುಸು ತುಸುವಾಗಿ ಕ್ಷೀಣಗೊಳ್ಳುತ್ತಿರ ಬಹುದೇ? 'ಬಲ ಮತ್ತು ಬದುಕಿನ ಸಾಧ್ಯತೆ' ಎಂಬ ನೈಸರ್ಗಿಕ ನಿಯಮ ಚಲಾವಣೆಯಲ್ಲಿದ್ದ ಕಾಲದಲ್ಲಿ ಬಲವಂತನ ವಂಶಜರೆಲ್ಲ ಲೈಂಗಿಕ ಶಕ್ತಿಯನ್ನೊಳಗೊಂಡಂತೆ ಸಕಲ ಬಲ ಸಂಪನ್ನ ರಾಗಿರುತ್ತಿದ್ದರು. ಈ ನಿಯಮ ಸಾಮಾಜಿಕವಾಗಿ, ರಾಜಕೀಯವಾಗಿ ಸಡಿಲುಗೊಂಡಂತೆಲ್ಲ ದುರ್ಬಲರಿಗೆ ಸಿಕ್ಕ ರಕ್ಷಣೆ ಅಂಥವರ ದೊಡ್ಡ ವರ್ಗವನ್ನೇ ಸೃಷ್ಟಿಸಿತು. ಹಾಗಾಗಿ ಹುಟ್ಟಿನಿಂದಲೇ ಪಡೆದ ಲೈಂಗಿಕ ಶಕ್ತಿಯೂ ಕ್ಷೀಣಿಸುತ್ತ ಸಾಗಿರಬೇಕು.

ಪರಂಪರಾಗತವಾದ ನಮ್ಮ ಮನೆ ಸಮಾಜಗಳಲ್ಲಿ ಗಂಡು ಹೆಣ್ಣಿನ ಪಾತ್ರಗಳು ಚಲನಶೀಲವಾಗಿರಲಿಲ್ಲ. ಆದರೆ ಹಳ್ಳಿಗಳಿಂದ ನಗರಗಳಿಗೆ ಸ್ಥಾನಾಂತರಗೊಂಡ ನಾಗರಿಕತೆ, ವಿಭಕ್ತ ಕುಟುಂಬದ ಜನನ, ಕರಕುಶಲತೆಯಿಂದ ಆಧುನಿಕ ತಂತ್ರಜ್ಞಾನದತ್ತ ದಾಪುಗಾಲು ಇವು ಈ ಪಾತ್ರಗಳಲ್ಲಿಯ ಚಲನಶೀಲತೆಗೆ ಕಾರಣವಾಗಿವೆ. 'ಸ್ವಂತ ಶಕ್ತಿ, ಬುದ್ಧಿ, ಬಲಗಳಿಂದ ಸಾಧನೆ ಮಾಡುವುದು ಗಂಡಿನ ಪಾತ್ರ. ಭಾವನಾತ್ಮಕ ಬೆಸುಗೆ, ಸಂಸಾರ ಸಾಮರಸ್ಯ ಸಾಧನೆ, ತಂದೆ, ಗಂಡ, ಮಗ ಇವರ ಸಾಧನೆಗಳ ಮೂಲಕ ತೃಪ್ತಿಹೊಂದುವ ಪಾತ್ರ ಹೆಣ್ಣಿನದು' ಮೊದಲಾದ ವಿಚಾರಗಳು ಇಂದು ಅಪ್ರಸ್ತುತವಾಗಿವೆ. ಅವರೀರ್ವರ ಪಾತ್ರಗಳು ಇಂದಿಗೂ ಭಿನ್ನವಾಗಿದ್ದರೂ ಅವು ಒಂದಕ್ಕೊಂದು ಅಧೀನವಾಗಲಿ, ಒಂದು ಶ್ರೇಷ್ಠ, ಇನ್ನೊಂದು ಕನಿಷ್ಠ ಎಂದಾಗಲಿ ತಿಳಿಯಲ್ಪಟ್ಟಿಲ್ಲ. ಬಟ್ಟೆಯ ಆಯ್ಕೆ, ಅವುಗಳ ಬಣ್ಣ, ಕೂದಲಿನ ಉದ್ದ, ಓದುವ ಪುಸ್ತಕಗಳು, ಕಲಿಯುವ ವಿಷಯಗಳು, ವೃದ್ಧಿಸಿಕೊಳ್ಳುವ ಕೌಶಲ್ಯಗಳು ಇವೆಲ್ಲವುಗಳಲ್ಲಿಯೂ ಎರಡೂ ಜಾತಿಗಳಲ್ಲಿ ಸಾಮ್ಯತೆ ಒಡೆದು ಕಾಣುತ್ತಿದೆ. ಆದರೂ ಸಹ ಗಂಡು ನಿಭಾಯಿಸುವ ಪಾತ್ರಗಳಲ್ಲಿ ತಂದೆ, ಗಂಡ, ಮಗ ಆತನಿಗೆ ಆಗುವ ಅನಾನುಕೂಲಕ್ಕಿಂತ ಹೆಚ್ಚು ಅನಾನುಕೂಲ ಮಗಳ ಪಾತ್ರವಹಿಸುತ್ತಿದ್ದವಳಿಗೆ ಬೇರೊಂದು ಮನೆಯಲ್ಲಿ ಗೃಹಿಣಿಯ ಪಾತ್ರ ವಾಡುವುದು, ಸ್ವತಂತ್ರ ವೃತ್ತಿನಿರತಳಿಗೆ ಹೆಂಡತಿಯಾಗಿ ಜವಾಬ್ದಾರಿ ಹೊರುವುದು, ಆಕಸ್ಮಿಕವಾಗಿ ಅನಿವಾರ್ಯವಾದಾಗ ವಿಧವೆಯ ಪಟ್ಟ ನಿಭಾಯಿಸುವುದಲ್ಲಾಗುತ್ತದೆ. ಅಂದರೆ ಅವರವರ ಪಾತ್ರಗಳಿಗಾಗಿ ಅವರನ್ನು ತರಬೇತಿಗೊಳಿಸಬೇಕೆಂದಾಯಿತು.

ಗಂಡು ಗಂಡಿನಂತಿರಬೇಕು; ಹೆಣ್ಣು ಹೆಣ್ಣಿನಂತಿರಬೇಕು. ಸಮಾಜ ಸ್ವೀಕರಿಸಿದ ಲಕ್ಷಣ ನಡಾವಳಿಗಳನ್ನು ಹೊಂದದಿರುವ ಗಂಡು ಹೆಣ್ಣುಗಳು ತಿರಸ್ಕೃತರಾಗುತ್ತಾರೆ. ಆದುದರಿಂದಲೇ ಮುಂದುವರಿದ ದೇಶಗಳಲ್ಲಿ ಬಾಲ್ಯದಿಂದಲೇ ತರಬೇತಿ ಪ್ರಾರಂಭವಾಗುತ್ತದೆ. ಮಗುವಿನ ಮೊದಲ ಮಾಹಿತಿ ಮೂಲ: ತಂದೆ-ತಾಯಿ; ಮಗನಿಗೆ ತಂದೆ, ಮಗಳಿಗೆ ತಾಯಿ. ಅವರು ತಮ್ಮ ಮಕ್ಕಳಿಗೆ ಪೂರೈಸುವ ಮಾಹಿತಿ-ಅವರ ಜ್ಞಾನದ ಮಟ್ಟ, ಸಂವಹನ ಶಕ್ತಿ, ದೃಷ್ಟಿಕೋನಗಳನ್ನವಲಂಬಿಸಿದೆ. ಎರಡನೆಯದಾಗಿ, ದೊಡ್ಡವರಾದಾಗ ಓದು ಇತ್ಯಾದಿ ಅವರ ಸಹಾಯಕ್ಕೆ ಬರುತ್ತವೆ.

ಹೆಣ್ಣು ಹೆಣ್ಣಿನಂತೆ ಕಾಣಬೇಕು, ಯೋಚಿಸಬೇಕು, ವರ್ತಿಸಬೇಕು. ಗಂಡೂ ಸಹ. ಇದು ಸಮಾಜ ಬಯಸುವ ರೀತಿ. ಗಂಡು ಹೆಣ್ಣಿನ

ಬಗೆಗೆ ನಾವು ತಾಳಿದ ಅಭಿಪ್ರಾಯಗಳ ಮೂಲಕ ಮೂಡುವ ಚಿತ್ರಕ್ಕೆ ವಿರುದ್ಧವಾದ ಚಿತ್ರವನ್ನು ನಾವು ಕಾಣಬಹುದು. ಮನೆಹೊರಗಿನ ಜೀವನ ನಿಭಾಯಿಸುವ ಗಂಡಿಗೆ ಈ ಅನಾನುಕೂಲ ಹೆಚ್ಚಾಗಿ ಕಾಡಬಹುದು.

ಒಬ್ಬ ಅಮ್ಮಾವ್ರ ಗಂಡ ಸುಖೀ ಸಂಸಾರಕ್ಕೆ ಕಾರಣನಾಗಿರಬಹುದು. ಆದರೆ ಸಮಾಜ ಆತನನ್ನಾಗಲೀ ಆತನ ಹೆಂಡತಿಯನ್ನಾಗಲೀ ಹೀಗೆ ಕಾಣದು. ಮನೆಯಲ್ಲಿಯ ಗಂಡು ಹೆಣ್ಣಿನ ಮಾದರಿಗಳು ಸಮಾಜ ನಿರ್ಧರಿಸಿದವುಗಳಿಗಿಂತ ಭಿನ್ನವಾಗಿದ್ದರೆ ಅವು ಗಂಡು ಹುಡುಗಿಯರನ್ನೂ ಹೆಣ್ಣು ಹುಡುಗರನ್ನೂ ಸೃಷ್ಟಿಸುವ ಭಯವಿದೆ.

ಗಂಡಸರ ಮರಣದ ಸರಾಸರಿ ವಯಸ್ಸು ಹೆಂಗಸರದಕ್ಕಿಂತ ಕಡಿಮೆ ಎಂಬ ತಿಳಿವಳಿಕೆಯಿದೆ. ಇದರ ಪ್ರಮುಖ ಕಾರಣವೇನಿರಬಹುದು? 'ಗಂಡು ಸಶಕ್ತ, ರೋಗ-ದಣಿವುಗಳನ್ನರಿಯದ ಜಾತಿ' ಎಂದು ತಿಳಿದ ಸಮಾಜದಲ್ಲಿ ಗಂಡುಗಳು ಈ ನಂಬುಗೆಯನ್ನು ಸಾರ್ವಜನಿಕವಾಗಿ ಮತ್ತು ಸ್ವಂತಕ್ಕೆ ಸಿದ್ಧಗೊಳಿಸಲು ಅನಾರೋಗ್ಯದ ಲಕ್ಷಣಗಳನ್ನು ಬಚ್ಚಿಡುವುದೇ ಇರಬಹುದು. ಸಂಗೀತಾಸಕ್ತನಾದ ಗಂಡಿನ ಆಸಕ್ತಿಯನ್ನು ಗಂಡಿಗೆ ಹೊಂದದ್ದೆಂದು ಹೀಗಳೆದು ಆತನನ್ನು ಒತ್ತಾಯದಿಂದ ವಾಣಿಜ್ಯ-ವ್ಯವಹಾರ ಕ್ಷೇತ್ರಗಳಿಗೆ ಅಟ್ಟುವ ತಂದೆ, ಎಂಜನಿಯರಗಳ ವೃತ್ತಿ ಹೆಣ್ಣಿಗೆ ಹೇಳಿ ಮಾಡಿಸಿದ್ದಲ್ಲವೆಂದು ಪ್ರತಿಪಾದಿಸಿ ಅವಳನ್ನು ಅಡುಗೆ ಮನೆಗೇ ನೂಕುವ ಗಂಡ-ಇಬ್ಬರನ್ನೂ ಅಸುಖಿಗಳನ್ನಾಗಿ ಮಾರ್ಪಡಿಸುತ್ತಾರೆ.

ಬನ್ನಿ, 'ಸ್ವಲಿಂಗದೃಷ್ಟಿ'- ತನ್ನ ಮತ್ತು ತನ್ನ ಜಾತಿಗೆ ಸೇರಿದ ಇತರರ ಬಗೆಗಿನ ಅನಿಸಿಕೆ-ಅಭಿಪ್ರಾಯ ಬಗೆಗಿಷ್ಟು ತಿಳಿಯೋಣ. ಸ್ವಂತದ ಬಗೆಗೆ ಹಾಗೂ ಸ್ವಜಾತಿಯ ವ್ಯಕ್ತಿಗಳ ಬಗೆಗೆ ನಾವು ಆರೋಗ್ಯಕರ ದೃಷ್ಟಿಕೋನವನ್ನು ಬೆಳೆಸಿಕೊಳ್ಳಬೇಕು. ಇದು ಸಾಧ್ಯವಾಗದಿದ್ದರೆ ಸಾಮಾಜಿಕ ಹೊಂದಾಣಿಕೆ ಇಲ್ಲವಾಗಿ ವ್ಯಕ್ತಿ ಕಂಗಾಲಾಗಬಹುದು. ಮಗುವು ಸುಮಾರು ನಾಲ್ಕು ವರ್ಷದ್ದಾಗುತ್ತಲೇ ಅದಕ್ಕೆ ಎರಡು ವಿಷಯಗಳು ಅರಿವಿಗೆ ಬರುತ್ತವೆ; ಎರಡು ಜಾತಿಯ ವ್ಯಕ್ತಿಗಳಿದ್ದಾರೆ. ಅದರಲ್ಲಿ ಒಂದಕ್ಕೆ ನಾನು ಸೇರಿದ್ದೇನಲ್ಲದೆ ನನ್ನಂತೆ ಇತರ ಅನೇಕರು ಇದ್ದಾರೆ. ಹೆಣ್ಣು ಮಗು ಗಮನಿಸುತ್ತದೆ; ಸಾಂಸ್ಕೃತಿಕವಾಗಿ, ಕೌಟುಂಬಿಕವಾಗಿ, ಅದೂ ತನ್ನ ತಾಯಿಯಿಂದಲೇ-ತನ್ನ ಅಣ್ಣ-ತಮ್ಮಂದಿರಿಗೆ ಹೆಚ್ಚಿನ ಆದ್ಯತೆ, ಆದರ, ಉಪಚಾರ, ಮಹತ್ವ ದೊರೆಯುತ್ತಿದೆ. ಇದೇ ಅತಾರ್ಕಿಕವಾದ ಪಕ್ಷಪಾತ ಮನೋಭಾವ ಹೊರಗಿನವರು, ಶಿಕ್ಷಕರು ಹಿರಿಯರಿಂದ ವ್ಯಕ್ತವಾಗುತ್ತದೆ. ಈ ಪಕ್ಷಪಾತ ವೃತ್ತಿಯ ಆಯ್ಕೆ, ಶೈಕ್ಷಣಿಕ ರಂಗಗಳ ಆಯ್ಕೆ, ಸಾಧನೆಗಳ ಪ್ರಚಾರಗಳಿಗೂ ಹಬ್ಬುತ್ತದೆ. ಇಂಥ ವಾತಾವರಣದ ಮೊದಲ ಪರಿಣಾಮ ಹೆಣ್ಣಿನ ಮನಸ್ಸಿನಲ್ಲಿ, 'ನಾನೂ ಗಂಡಾಗಿ ಹುಟ್ಟಬಾರದಿತ್ತೇ!' ಎಂಬ ಪ್ರತಿಕ್ರಿಯೆಗೆ ಕಾರಣವಾಗುತ್ತದೆ. 'ನನ್ನನ್ನು ಹುಡುಗನನ್ನಾಗಿ ಮಾಡಿಬಿಡಿ' ಎಂದು ತಾಯಿಯನ್ನು ಅಂಗಲಾಚುವುದರಿಂದ ಪರಿಸ್ಥಿತಿ ಸುಧಾರಿಸೀತು ಎಂದು ನಂಬುವ ವಯಸ್ಸದು! ಇಂಥ ತೀವ್ರ ಅತೃಪ್ತಿಯ ಅಭಿವ್ಯಕ್ತಿ ಕಲಾವಿದೆಯರ ಚಿತ್ರಕಲೆಯಲ್ಲಿ, ಅವರು ನಟಿಸುವ ಪಾತ್ರಗಳಲ್ಲಿ, ಪುರುಷ ಚಟುವಟಿಕೆಗಳಲ್ಲಿಯ ಆಸಕ್ತಿಯ ಮೂಲಕ ಬಹಿರಂಗಗೊಳ್ಳಬಹುದು. ಹೆಣ್ಣು ಬೆಳೆದಂತೆಲ್ಲ ಹೆಚ್ಚೆಚ್ಚಾಗಿ ಹೆಣ್ಣಾಗಿಯೇ ನಡೆದುಕೊಳ್ಳಬೇಕಾದ ಅನಿವಾರ್ಯತೆಯಿಂದಾಗಿ, 'ಕೈಲಾಗದವಳು ಮೈ ಪರಚಿದಳು' ಎಂಬಂತೆ ಸ್ವಜಾತಿಯ ಬಗೆಗೂ ಅನಪೇಕ್ಷಣೀಯವಾದ ಮನೋಧರ್ಮ ಬೆಳೆಯಬಹುದು. ಗಂಡು ತಾನು ಗಂಡಾದುದರ ಬಗೆಗಾಗಲೀ, ಇತರ ಗಂಡುಗಳ ಬಗೆಗಾಗಲೀ ಇಷ್ಟು ತೀವ್ರ ಭಾವನೆ ತಾಳುವುದಿಲ್ಲ. ಏಕೆಂದರೆ ಆತನ ಹುಟ್ಟಿನಿಂದಲೇ ಆತನಿಗೆ ಅನುಕೂಲವಾದ, ಲಾಭದಾಯಕವಾದ ಪ್ರತಿಕ್ರಿಯೆ ಆತನದಾಗಿರುತ್ತದೆ.

ನಾವು ಈಗಾಗಲೇ ಚರ್ಚಿಸಿದ ಅತೃಪ್ತಿ ಕೆಲವು ತೀಕ್ಷ್ಣ ಮನಸ್ಸಿನ ಮಹಿಳೆಯರಲ್ಲಿ ಆತ್ಮಗೌರವಕ್ಕೆ ಪೆಟ್ಟನಂತಾಗಿ ಒಂದು ರೀತಿಯ ಸೇಡಿನ ಭಾವನೆಯನ್ನುಂಟು ಮಾಡಬಹುದು. ಪ್ರೀತಿ-ಪ್ರೇಮಗಳ ವಿಷಯದಲ್ಲಿ ಗಂಡನ್ನು ಹೀಯಾಳಿಸುವುದು, ಮನೆಗೆಲಸಗಳನ್ನು ಕಡೆಗಣಿಸಿ ಗಂಡಸಿಗೆ ತಕ್ಕ ವೃತ್ತಿಗಳಲ್ಲಿ ತೊಡಗುವುದು, ಅವರಂತೆ ಪೋಷಾಕು ಧರಿಸುವುದು, ಪುರುಷರ ಸಾಧನೆಗಳನ್ನು ಅಲಕ್ಷಿಸುವುದು ಮುಂತಾದುವುಗಳನ್ನು ನಾವು ಹೆಚ್ಚಾಗಿ ಕಾಣುತ್ತಿರುವುದಕ್ಕೆ ಆ ಅತೃಪ್ತಿಯೇ ಕಾರಣ. ಪುರುಷನಷ್ಟೇ ಅವರು ಯೋಗ್ಯರಾಗಿದ್ದರೂ ಕಡಿಮೆ ಜವಾಬ್ದಾರಿ, ಕಡಿಮೆ ವೇತನ, ಕಡಿಮೆ ಘನತೆಯ ಸೇವೆಗಳಲ್ಲಿ ಸ್ತ್ರೀಯರು ತೊಡಗಿಕೊಳ್ಳಬೇಕಾಗುತ್ತದೆ ಅಥವಾ ಬಹಳಷ್ಟು ಗಂಡಸರಿಗೆ ಬೇಡವಾದ ಶಿಕ್ಷಕ, ಗ್ರಂಥಾಲಯ ಪಾಲಕ, ಸಮಾಜ ಸೇವಕ ಮುಂತಾದ ರಂಗಗಳನ್ನು ಅವರು ಆಯ್ದುಕೊಳ್ಳಬೇಕಾಗುತ್ತದೆ. ವೃತ್ತಿ ಜೀವನದಲ್ಲಿಯ ಈ ಕಡ್ಡಾಯವಾದ ಮುಖಭಂಗವನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಹಲವು ಸ್ತ್ರೀಯರು ಹೆಂಡತಿ-ತಾಯಿಯಾಗಿ 'ಯಶಸ್ವಿ ಗಂಡಸಿನ ಹಿಂದಿನ ಅವಶ್ಯಕ ಸ್ಫೂರ್ತಿ'ಯಾಗಿ ಜೀವನದ ಅನಿವಾರ್ಯತೆಯೊಡನೆ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಗಂಡಿಗಾದರೂ ಇಂಥ ಸಾಂಸ್ಕೃತಿಕವಾಗಿ 'ಗೃಹಿತವಾದ' ಹೆಚ್ಚುಗಾರಿಕೆಯಿಂದ ಪ್ರಯೋಜನವುಂಟೇ? ಇಲ್ಲವೆಂಬುದು ದುಃಖದಾಯಕ ಉತ್ತರ. ಅವರು ತಮ್ಮ ಕಾರ್ಯಶಕ್ತಿಯ ಪೂರ್ಣ ಪ್ರಯೋಜನ ಪಡೆಯದೇ ಅಂಶಿಕ ಯಶಸ್ವಿಗೆ ಭಾಜನರಾಗುತ್ತಾರೆ; ಮಧ್ಯ ವಯಸ್ಸಿಗೆ ಹಣ್ಣಾಗಿ ಕೈ ಚೆಲ್ಲುತ್ತಾರೆ.

ವ್ಯಕ್ತಿತ್ವದ ಮೇಲೆ ಲಿಂಗಭೇದದ ಪರಿಣಾಮ ಎಂಥದು? ವ್ಯಕ್ತಿಯ ಲಿಂಗ ಜಾತಿಯು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಆತ, ಆಕೆಯ ನಡತೆಯನ್ನು ಪ್ರಭಾವಿಸುತ್ತದೆ. 'ಎಂಡ್ರೋಜೆನ್' ಮತ್ತು 'ಎಸ್ಟ್ರೋಜೆನ್' ಎಂಬ ಲೈಂಗಿಕ ಚೋದಕಗಳೆರಡೂ ಗಂಡು-ಹೆಣ್ಣುಗಳಲ್ಲುತ್ಪತ್ತಿಯಾದರೂ ಗಂಡಿನಲ್ಲಿ ಮೊದಲನೆಯದು ಹಾಗೂ ಹೆಣ್ಣಿನಲ್ಲಿ ಎರಡನೆಯದು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಇವು ವ್ಯಕ್ತಿಯ ದೇಹರಚನೆ, ಬೆಳವಣಿಗೆಯ ಪ್ರಮಾಣ, ಕಾರ್ಯವಿಧಾನ, ನಡತೆಯ ಗುಣಮಟ್ಟಗಳನ್ನು ನಿಯಂತ್ರಿಸುತ್ತದೆ. ಚೋದಕಗಳ ಬಿಡುಗಡೆ ಅಸಾಮಾನ್ಯ ರೀತಿಯದಾಗಿದ್ದರೆ, ಗಂಡಿನಲ್ಲಿ ಹೆಣ್ಣಿನ ಲಕ್ಷಣ ಮತ್ತು ನಡತೆಯನ್ನು ಹಾಗೂ ಹೆಣ್ಣಿನಲ್ಲಿ ಗಂಡಿನ ಲಕ್ಷಣ ಮತ್ತು ನಡತೆಯನ್ನು ಪ್ರಮುಖವಾಗಿ ನಾವು ಕಾಣಬಹುದು. ಯುರೋಪ್ ಹಾಗೂ ಏಶಿಯಾದ ಕೆಲ ರಾಷ್ಟ್ರಗಳಲ್ಲಿ ಬಾಲಕರನ್ನು ರೂಪ-ನಡತೆಗಳಲ್ಲಿ ಹೆಣ್ಣುಗಳಾಗಿ ಕಾಣುವಂತೆ ಕೃತ್ರಿಮವಾಗಿ ಮಾರ್ಪಡಿಸಲಾಗುತ್ತಿದ್ದುದಾಗಿ ತಿಳಿದಿದೆ. ಗರ್ಭಸ್ಥ ಸ್ಥಿತಿಯಿಂದಲೂ, ದೇಹರಚನೆ, ಹೊಂದಾಣಿಕೆ, ಬುದ್ಧಿ, ಮನೋಧರ್ಮ ಇವೆಲ್ಲವುಗಳಲ್ಲಿ ಗಂಡು-ಹೆಣ್ಣಿನ ನಡುವೆ ಮೂಲಭೂತ ಭಿನ್ನತೆಯಿರುವುದು ಕಂಡುಬರುತ್ತದೆ. ಪ್ರೌಢಾವಸ್ಥೆಗಿಂತ ಮೊದಲು ನೋಟ-ನಡಾವಳಿಗಳಲ್ಲಿ ಅಂಥ ಭಿನ್ನತೆ ತೋರದು. ಅದರಂತೆಯೇ ಋತುಚಕ್ರದ ಸ್ಥಗಿತದ ನಂತರ ಹೆಣ್ಣಿನ ಹೆಣ್ಣುತನ, ಅರವತ್ತರ ನಂತರ ಗಂಡಿನ ಗಂಡುತನ ಕ್ಷೀಣಿಸತೊಡಗುವುದು ಮೇಲ್ನೋಟಕ್ಕೆ ಕಾಣುತ್ತದೆ.

ಲಿಂಗಭೇದವು ವ್ಯಕ್ತಿತ್ವವನ್ನು ಮೂರು ಪ್ರಮುಖ ವಿಧವಾಗಿ ಪ್ರಭಾವಿಸಬಹುದು. ನಿಮ್ಮ ಲೈಂಗಿಕ ಚಟುವಟಿಕೆಗಳ ಪ್ರೇರಣೆಯ ಮಟ್ಟ ಸಾಂಸ್ಕೃತಿಕ ಕಾರಣಗಳಿಗೊಳಪಡಬಹುದು; ಪ್ರಮುಖ ವ್ಯಕ್ತಿಗಳು ನಿಮ್ಮ ಜೊತೆಗೆ ನಡೆದುಕೊಳ್ಳುವುದು, ನಿಮ್ಮ ಬಗೆಗೆ ವಿಶಿಷ್ಟ ಮನೋಭಾವ ತಾಳುವುದು ನೀವು ಸೇರಿದ ಲೈಂಗಿಕ ಜಾತಿಯನ್ನು ಅವಲಂಬಿಸಿರಬಹುದು; ನಿಮ್ಮ ವ್ಯಕ್ತಿತ್ವವನ್ನು ಆಯಾ ಸಮಾಜ ಅಂಗೀಕರಿಸಿದ ರೀತಿಯಲ್ಲೇ ನೀವು ರೂಪಿಸಿಕೊಳ್ಳಬೇಕಾಗಬಹುದು. ■

# ಕಡಿಮೆಯಾಗುತ್ತಿರುವ ಟೆಸ್ಟ್ ಕ್ರಿಕೆಟ್‌ನ ಜನಪ್ರಿಯತೆ

■ ಗರ್ತಿಕೆರೆ ವಿ.ಪ್ರಕಾಶ್

ಒಂದು ಕಾಲದಲ್ಲಿ ಕ್ರೀಡಾಭಿಮಾನಿಗಳು ಟೆಸ್ಟ್ ಕ್ರಿಕೆಟನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದರು. ಟೆಸ್ಟ್ ಪಂದ್ಯಗಳಲ್ಲಿ ಮಾತ್ರವೇ ನಿಜವಾದ ಸತ್ವ ಅಡಗಿದೆ ಎಂಬ ವಿಚಾರ ಆಗಿತ್ತು.

ಪ್ರಸ್ತುತ ದಿನಗಳಲ್ಲಿ ಟೆಸ್ಟ್ ಕ್ರಿಕೆಟ್‌ನ ಪರಿಸ್ಥಿತಿ ನೋಡಿದಾಗ ಮರುಕ ಹುಟ್ಟುತ್ತದೆ. ಶತಮಾನಗಳ ಇತಿಹಾಸ ಹೊಂದಿರುವ ಟೆಸ್ಟ್ ಪಂದ್ಯಗಳು ಇಂದು ಮಸುಕಾಗತೊಡಗಿರುವುದು ಕಣ್ಣೆದುರಿನ ಸತ್ಯ. ದಿನೇ ದಿನೇ ಕಳೆದಂತೆ ಟೆಸ್ಟ್ ಪಂದ್ಯಗಳು, ಅವುಗಳನ್ನು ನೋಡುವ ಪ್ರೇಕ್ಷಕರ ಸಂಖ್ಯೆ ಗಣನೀಯವಾಗಿ ಕುಗ್ಗುತ್ತಿದೆ.

ಟೆಸ್ಟ್ ಕ್ರಿಕೆಟ್‌ನ ಜನಪ್ರಿಯತೆ ಮಂಕಾಗುತ್ತಿರಲು ಕಾರಣವೇನು? ಎಂಬ ಪ್ರಶ್ನೆಗೆ ನೀಡಬಹುದಾದ ಉತ್ತರಗಳು ಹಲವಾರು. ಇವುಗಳಲ್ಲಿ ಪ್ರಮುಖವಾಗಿ ಹೇಳಬೇಕೆಂದರೆ ಅನಿಯಮಿತ ಏಕದಿನ ಸರಣಿಗಳು. ನಿಗದಿತ ಓವರ್‌ಗಳ ಪಂದ್ಯಗಳು ಇಂದು ಪ್ರತಿಷ್ಠೆಯ ಮುಗಿಲು ಮುಟ್ಟಿವೆ. ಆಟಗಾರರು, ಪ್ರೇಕ್ಷಕರು ಈ ಪಂದ್ಯಗಳತ್ತಲೇ ಗಮನಹರಿಸಿರುವುದು ಟೆಸ್ಟ್ ಪಂದ್ಯಗಳ ಜನಪ್ರಿಯತೆ ಕುಗ್ಗಲು ಪ್ರಧಾನ ಕಾರಣವಾಗಿವೆ.

70ರ ದಶಕದಲ್ಲಿ ಏಕದಿನ ಪಂದ್ಯಗಳು ಆರಂಭವಾದಾಗ ಜನತೆ ಅವುಗಳ ಯಶಸ್ಸಿನ ಬಗ್ಗೆ ಸಂದೇಹ ಪಟ್ಟಿತ್ತು. ಆದರೆ 1983ರಲ್ಲಿ ಭಾರತ ವಿಶ್ವಕಪ್ ಗೆದ್ದಾಗ ಅನಿಶ್ಚಿತತೆಯ ಈ ಕ್ರಿಕೆಟ್‌ಗೆ ಎಲ್ಲಿಲ್ಲದ ಜನಪ್ರಿಯತೆ ದೊರೆಯ ತೊಡಗಿತು. ಇಂದು ಒಂದು ದಿನದ ಪಂದ್ಯಗಳನ್ನು ನಿಯಂತ್ರಿಸಬೇಕು ಎಂಬಷ್ಟರ ಮಟ್ಟಿಗೆ ಪರಿಸ್ಥಿತಿ ಉದ್ಭವಿಸಿದೆ. ಇದಲ್ಲದೆ 1998ರಲ್ಲಿ ಅತಿ ಹೆಚ್ಚು ಏಕದಿನ ಪಂದ್ಯಗಳನ್ನಾಡಿದ (41) ಭಾರತ ಪಾಲ್ಗೊಂಡ ಟೆಸ್ಟ್‌ಗಳು ಮಾತ್ರ ಕೇವಲ 4.

ಒಂದು ದಿನದ ಪಂದ್ಯಗಳಲ್ಲಿ ನಿಖರ ಫಲಿತಾಂಶಕ್ಕಾಗಿ ಆಡುವ ರೀತಿಯಲ್ಲಿ ಟೆಸ್ಟ್‌ನಲ್ಲಿ ಆಡುವುದು ಸಾಧ್ಯವಿಲ್ಲ. ಹೆಚ್ಚಿನ ತಂಡಗಳು ನಕಾರಾತ್ಮಕ ಆಟವನ್ನು ಆಡುತ್ತಿರುವುದು ಖೇದಕರ. ಪಂದ್ಯವನ್ನು ಗೆಲ್ಲುವುದಕ್ಕಾಗದಿದ್ದರೂ ಡ್ರಾ ಮಾಡಿಕೊಳ್ಳುವುದೇ ಲೇಸು ಎಂಬ ಭಾವನೆ ಒಡಮೂಡಿದೆ. ಜತೆಗೆ ವೈಯಕ್ತಿಕ ದಾಖಲೆಗಳು ತಂಡದ ಗೆಲುವಿಗಿಂತಲೂ ಪ್ರಮುಖವಾಗಿವೆ.

ಪ್ರಸಕ್ತ ಟೆಸ್ಟ್ ಕ್ರಿಕೆಟ್‌ನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅನೇಕ ಅನುಮಾನಗಳು ಕಾಡುತ್ತವೆ. ಏಕೆಂದರೆ ಪ್ರತಿಯೊಂದು ತಂಡಗಳು ತಾಳ್ಮೆಯಿಂದ ಆಡುವ ಪರಿಪಾಠ ಕಲಿತಿಲ್ಲ. ಹಿಂದೆಲ್ಲಾ ಫಲಿತಾಂಶ ಸಿಗಲು ಐದು ದಿನಗಳು ಬೇಕಾಗುತ್ತಿತ್ತು. ಆದರೆ ಇತ್ತೀಚೆಗೆ ಮೂರ್ನಾಲ್ಕು ದಿನಗಳಲ್ಲಿಯೇ ಎಲ್ಲಾ ಇನ್ನಿಂಗ್ಸ್‌ಗಳು ಮುಗಿದು ಫಲಿತಾಂಶ ಹೊರಬಿದ್ದಿರುತ್ತದೆ. ದೀರ್ಘ ಇನ್ನಿಂಗ್ಸ್ ರೂಪಿಸುವ, ಮುನ್ನಡೆ ಪಡೆದು ಎದುರಾಳಿಗೆ ಒತ್ತಡ ಹೇರುವ ವಿಚಾರಗಳು ಅರ್ಥರಹಿತವಾಗಿವೆ.

ಇಂದಿನ ಟೆಸ್ಟ್ ಕ್ರಿಕೆಟ್‌ನಲ್ಲಿ ಒಂದು ಬಲಿಷ್ಠ ತಂಡವೆಂದರೆ ಅದು ಆಸ್ಟ್ರೇಲಿಯಾ ಮಾತ್ರ. ಪ್ರತಿ ಪಂದ್ಯದಲ್ಲೂ ಗೆಲುವಿಗಾಗಿ ಹಾತೊರೆಯುವ ಅಪ್ಪಟ ಕ್ರೀಡಾ ಸ್ಫೂರ್ತಿ ಆ ತಂಡದಲ್ಲಿದೆ. ಆದ್ದರಿಂದ ಅದು ಹೆಚ್ಚು ಹೆಚ್ಚು ವಿಜಯಗಳನ್ನು ಸಂಪಾದಿಸುತ್ತಿದೆ.

ಟೆಸ್ಟ್ ಪಂದ್ಯಗಳ ಸ್ಥಿತಿ ಡೋಲಾಯಮಾನವಾಗಿರುವ ಈ ದಿನಗಳಲ್ಲಿ ಅದರ ಉಳಿವು ಅತಿ ಅಗತ್ಯವಾಗಿದೆ. ಐ.ಸಿ.ಸಿ. ಈ ಬಗ್ಗೆ ತೀವ್ರವಾಗಿ ಯೋಚಿಸಬೇಕಾಗಿದೆ. ಪ್ರತಿ ವರ್ಷ ಹೆಚ್ಚಿನ ಸಂಖ್ಯೆಯಲ್ಲಿ ಟೆಸ್ಟ್ ಪಂದ್ಯಗಳನ್ನಾಡಿಸುವುದು ಒಳಿತು. ಇಲ್ಲವಾದಲ್ಲಿ ಒಂದು ಒಸವ ಪಂದ್ಯಗಳು ಟೆಸ್ಟ್ ಕ್ರಿಕೆಟನ್ನು ನುಂಗಿ ಹಾಕುವುದರಲ್ಲಿ ಸಂಶಯವಿಲ್ಲ. ■



# ಭಾರತದ ಅಥ್ಲೆಟ್‌ನಲ್ಲೊಂದು ಆಶಾಕಿರಣ ಪರಮಜೀತ್‌ಸಿಂಗ್



■ ಅಶೋಕ ಜಿ. ಸಜ್ಜನ್

**400** ಮೀಟರ್ಸ್ ಓಟದಲ್ಲೀಗ ಭಾರತಕ್ಕೆ ಮತ್ತೊಬ್ಬ ಹಾರುವ ಸಿಖ್ ದೊರಕಿದ್ದಾನೆ. ಆತನೆ ಪರಮ್‌ಜೀತ್‌ಸಿಂಗ್. ಪಂಜಾಬಿನ ಹೊಷಿಯಾರ್‌ಪುರ ಜಿಲ್ಲೆಯ ನೆನೋವಾಲ್ ಜತ್ತನ್ ಗ್ರಾಮಕ್ಕೆ ಸೇರಿದ 26 ವರ್ಷದ ಯುವಕ. ಪರಮ್‌ಜೀತ್ ಬಾಲ್ಯದಲ್ಲಿ ಆಡುತ್ತಿದ್ದುದು ಕೇವಲ ಖೋಖೋ, ಕಬ್ಬಡಿ ಮತ್ತು ವಾಲಿಬಾಲ್ ಮಾತ್ರ. ಪರಮ್‌ಜೀತ್ ಅಥ್ಲೆಟಿಕ್ಸ್ ಕಡೆ ಹೊರಳಿದ್ದು ತನ್ನ ಶಾಲಾ ದಿನಗಳ ಕೊನೆಯ ವರ್ಷದಲ್ಲಿ.

38 ವರ್ಷಗಳ ಹಿಂದೆ ರೋಮ್ (1960) ನಲ್ಲಿ ನಡೆದ ಒಲಿಂಪಿಕ್ಸ್‌ನಲ್ಲಿ ಭಾರತದ ಮಿಲ್ಖಾಸಿಂಗ್ 400 ಮೀ. ಓಟವನ್ನು 45.73 ಸೆಕೆಂಡ್‌ಗಳಲ್ಲಿ ಓಡುವ ಮೂಲಕ ಕೂದಲೆಳೆಯ ಅಂತರದಿಂದ ಪದಕ ಪಡೆಯುವಲ್ಲಿ ವಂಚಿತರಾಗಿದ್ದರು. ಅವರು ಓಡಿದ ಸಮಯದ ಅಂತರ 38 ವರ್ಷಗಳವರೆಗೂ ರಾಷ್ಟ್ರೀಯ ದಾಖಲೆಯಾಗಿ, ಅಭಾದಿತವಾಗಿ ಉಳಿದಿತ್ತು.

ಏರ್‌ಫೋರ್ಸ್‌ನಲ್ಲಿ ಅಧಿಕಾರಿಯಾಗಿದ್ದ ಪರಮ್‌ಜೀತ್‌ಸಿಂಗ್‌ರ ತಂದೆ ಕೃಪಾಲ್‌ಸಿಂಗ್‌ರಿಗೆ ದಾಖಲೆಗಳ ಪುಸ್ತಕದಲ್ಲಿ ಹಾರುವ ಸಿಖ್ ಮಿಲ್ಖಾಸಿಂಗರು ಸ್ಥಾಪಿಸಿದ್ದ ಆ ದಾಖಲೆ ಆಕಸ್ಮಿಕವಾಗಿ ಅವರ ಕಣ್ಣಿಗೆ ಬಿತ್ತು. ಆ ದಾಖಲೆಯನ್ನು ತನ್ನ ಮಗ ಪರಮ್‌ಜಿತ್ ಮುರಿಯಬೇಕೆಂದು ಬಯಸಿದರು. ತನ್ನ ತಂದೆಯ ಬಯಕೆಯಂತೆ ಪರಮಜೀತರ ಕಣ್ಣು ಸದಾ ಮಿಲ್ಖಾಸಿಂಗರ ದಾಖಲೆಯ ಮೇಲೆ ಇತ್ತು. ಅದನ್ನು ಕೊನೆಗೊಂದು ದಿನ ಮುರಿದು ಹೊಸ ದಾಖಲೆ ನಿರ್ಮಿಸಿದ್ದಾರೆ.

ಕಳೆದ ನವೆಂಬರ್‌ನಲ್ಲಿ ಕಲ್ಕತ್ತಾದ ಸಾಲ್ಟ್‌ಲೇಕ್ ಸ್ಟೇಡಿಯಂನಲ್ಲಿ ನಡೆದಿದ್ದ 38ನೇ ರಾಷ್ಟ್ರೀಯ ಅಥ್ಲೆಟಿಕ್ಸ್ ಚಾಂಪಿಯನ್‌ಶಿಪ್‌ನಲ್ಲಿ ಪರಮ್‌ಜೀತ್‌ಸಿಂಗ್ 400 ಮೀ. ಓಟವನ್ನು 45.70 ಸೆಕೆಂಡ್‌ಗಳಲ್ಲಿ ಓಡುವ ಮೂಲಕ ಮಿಲ್ಖಾಸಿಂಗರ 45.73 ಸೆಕೆಂಡ್‌ಗಳ ದಾಖಲೆಯನ್ನು ಅಳಿಸಿ ಹಾಕಿ, ಹೊಸ ರಾಷ್ಟ್ರೀಯ ದಾಖಲೆಯನ್ನು ಬರೆದರು.

ಪರಮ್‌ಜೀತ್‌ಸಿಂಗ್ 1992ರಲ್ಲಿ ಸೆಂಟ್ರಲ್ ರಿಸರ್ವ್ ಪೊಲೀಸ್ ಫೋರ್ಸ್ (ಸಿಆರ್‌ಪಿಎಫ್)ನ್ನು ಸೇರಿದರು. ಮರು ವರ್ಷವೇ ಜಯಪುರದಲ್ಲಿ ನಡೆದ ಪೊಲೀಸ್ ಕ್ರೀಡಾಕೂಟದಲ್ಲಿ ಚಾಂಪಿಯನ್ ಆಗಿ ಅವತರಿಸಿದರು. ಪ್ರಸ್ತುತ ಪರಮ್‌ಜೀತ್‌ರ ಕೋಚ್ ಆಗಿರುವ ಹರ್ಬನ್ಸ್‌ಸಿಂಗ್, ಪರಮ್‌ಜೀತ್‌ಗೆ ಬೇಕಾದ ಎಲ್ಲವನ್ನು ಕಲ್ಪಿಸಿಕೊಟ್ಟರು. ಹರ್ಬನ್ಸ್ ಮಿಲ್ಖಾಸಿಂಗರ ದಾಖಲೆಯನ್ನು ಮುರಿಸುವುದಾಗಿ ಒಮ್ಮೆ ಚಾಲೆಂಜ್ ಮಾಡಿದ್ದರು. ಆ ದಾಖಲೆಯನ್ನು ಪರಮ್‌ಜೀತ್ ಮುರಿಯುತ್ತಾನೆಂಬ ಭರವಸೆ ಹೊಂದಿದ್ದರು. ಅವರ ಕನಸು ಕಡೆಗೂ ನನಸಾಯಿತು.

ಪರಮ್‌ಜೀತ್‌ಸಿಂಗ್ 1994ರ ಹಿರೋಷಿಮಾ ಏಶಿಯನ್ ಗೇಮ್ಸ್‌ನಲ್ಲಿ ಭಾರತದ ರಿಲೇ ತಂಡದಲ್ಲಿ ಸ್ಥಾನಪಡೆದುಕೊಂಡಿದ್ದರು. ಆಗ ಆ ರಿಲೇ ತಂಡ 5ನೇ ಸ್ಥಾನ ಪಡೆದಿತ್ತು. 1995ರಲ್ಲಿ ಚೆನ್ನೈನಲ್ಲಿ ನಡೆದಿದ್ದ ದಕ್ಷಿಣ ಏಶಿಯನ್ ಫೆಡರೇಶನ್ (ಎಸ್.ಎ.ಎಫ್) ಗೇಮ್ಸ್‌ನಲ್ಲಿ 400 ಮೀ. ಓಟವನ್ನು 46.33 ಸೆಕೆಂಡ್‌ಗಳಲ್ಲಿ ಓಡುವ ಮೂಲಕ ರಜತ ಪದಕ ಪಡೆದುಕೊಂಡು ಎಲ್ಲರ ಗಮನ ಸೆಳೆದರು. ಅನಂತರ ಮೂರು ವರ್ಷಗಳ ಕಾಲ ಕಠಿಣ ಪರಿಶ್ರಮದ ಅಭ್ಯಾಸದಲ್ಲಿ ತೊಡಗಿದರು. ಸತತ ತರಬೇತಿಯಿಂದ ಕಲ್ಕತ್ತಾದಲ್ಲಿ ಮಿಲ್ಖಾಸಿಂಗ್‌ರ ದಾಖಲೆಯನ್ನು ಮುರಿಯಲು ಸಾಧ್ಯವಾಯಿತು.

ಪರಮ್‌ಜೀತ್‌ನ ಈ ಸಾಧನೆಯನ್ನು ಶ್ಲಾಘಿಸಿರುವ ಮಿಲ್ಖಾಸಿಂಗ್ ತಾವು ಹಿಂದೆ ಹೇಳಿದಂತೆಯೇ ಒಂದು ಲಕ್ಷ ರೂಪಾಯಿ ಬಹುಮಾನ ನೀಡುವುದಷ್ಟೇ ಅಲ್ಲದೇ, ಆತ ವಿದೇಶದ ನೆಲದಲ್ಲಿ ಇದೇ ಸಾಧನೆಯನ್ನು ಮುಂದುವರೆಸಿದರೆ ತಾವು ಇನ್ನೂ ಒಂದು ಲಕ್ಷ ರೂಪಾಯಿಯನ್ನು ಪರಮ್‌ಜೀತ್‌ಸಿಂಗ್‌ಗೆ ನೀಡುವುದಾಗಿ ಮಿಲ್ಖಾಸಿಂಗ್ ಹೇಳಿದ್ದಾರೆ. ಈ ಬಹುಮಾನವನ್ನು ಘೋಷಿಸುವ ಮೂಲಕ ಮಿಲ್ಖಾ ಬೆನ್ನು ಚಪ್ಪರಿಸುವ ಕೈಯಲ್ಲೇ ಪರಮ್‌ಜೀತ್‌ಗೆ ಹೊಸ ಪಣವನ್ನು ಮುಂದಿಟ್ಟಿದ್ದಾರೆ.

ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಗೆಲುವು ಸಾಧಿಸಬೇಕಾದರೆ 45 ಸೆಕೆಂಡುಗಳ ಒಳಗೆ 400 ಮೀಟರ್ಸ್ ದೂರವನ್ನು ಕ್ರಮಿಸಲು ಶ್ರಮಿಸಬೇಕು ಎನ್ನುವ ಅರಿವು ತಮಗಿದೆ ಎನ್ನುವ ಪರಮ್‌ಜೀತ್ ಮುಂಬರುವ ಏಷ್ಯನ್ ಕ್ರೀಡಾ ಕೂಟದೊಳಗಾಗಿ ತಾವು ಅದಕ್ಕೆ ತಕ್ಕ ಸಿದ್ಧತೆಯನ್ನು ಹೊಂದುವ ಆತ್ಮ ವಿಶ್ವಾಸವನ್ನು ಅವರು ವ್ಯಕ್ತಪಡಿಸಿದ್ದಾರೆ. ■

ಪದ ಬಂಧ 13



## ಪದಬಂಧ 12 ರ ಸರಿಯುತ್ತರ

**ಎಡದಿಂದ ಬಲಕ್ಕೆ:**

1. ಜೀವದಾನ 4. ಅರಮನೆ 6. ಗಮ 8. ಗಜ 9. ರಕ್ತ 10. ವಿಮಾನ 12. ಲಿಗಾ 15. ಹೊಸವರುಷ 18. ತರ್ಕ 19. ತ್ರಿಪದಿ 21. ಶವ 22. ಜಲ 23. ಸಪಿ 25. ಹಗೆತನ 26. ಮಹಾಗರ್ವ.

**ಮೇಲಿನಿಂದ ಕೆಳಕ್ಕೆ :**

2. ವಧುವರರು 3. ನಗ 4. ಅಜ 5. ಮರಳುಗಾಡು 7. ಮನವಿ 8. ಗಗನ 11. ಮಾನವರೂಪ 13. ಐಹೊಳೆ 14. ಔಷಧ 16. ಮತಪೆಟ್ಟಿಗೆ 17. ಸುವರ್ಣಯುಗ 19. ತ್ರಿಶೂಲ 20. ದಿವಸ 22. ಜನ 24. ಹಿಮ.

**ಎಡದಿಂದ ಬಲಕ್ಕೆ**

1. ಹಾಡಿನ ದಾಟಿಯಲ್ಲಿ ಕೊಳಲು ಬಾರಿಸುತ್ತ ಸರ್ಪಗಳನ್ನಾಡಿಸುವಾತ (4)
4. ಕೊನೆಗೆ ಗಂಡ ಎನಿಸಿಕೊಂಡ ಇವರು ದೇಶದ ಅಧ್ಯಕ್ಷರು.......... (4)
6. ಸಮತಾವಾದಿಯ ಜನರು ನೀಡಿದ ಓಟು ........................ (2)
8. ಗಮನ ವಿಟ್ಟು ಕಾಯ್ದುಕೊಂಡ ಒಡವೆ ಆಭರಣ ................ (2)
9. ರಮಿಸಿ ಕಸಿದು ಕೊಂಡ ಬೆಲೆ ಬಾಳುವ ಹರಳು .................. (2)
10. ಮಸಕು ಮಸಕಾಗಿ ಕಂಡ ಸ್ವಪ್ನ.................................. (3)
12. ಬಾಯಿಮಾಡಿ ಕಳ್ಳರನ್ನು ಓಡಿಸಿದ ಶ್ವಾನ.......................... (2)
15. ಪ್ರಪಂಚದಲ್ಲಿ ಕೋಲಾಹಲ ಮಾಡುವ ಉಗ್ರರೂಪದ ಬಿರುಗಾಳಿ (5)
18. ಜಂತರ - ಮಂತರ ಎಂದು ಮಾಯಾವಿ ಮಾಡಿದ ಇಂದ್ರಜಾಲ .. (2)
19. ಅಧಿಕಾರ ಮುಗಿಯಲು ಬೇಕಾದ ಸಮಯ. ........................ (3)
21. ಗದ್ದರಿಸಿ ಮೈ ಕೊಡವಿದಾಗ ಉದುರಿ ಬಿದ್ದ ರೆಕ್ಕೆ ತಿರುಗಿದೆ......... (2)
22. ಸತಿ ಸತ್ತ ನಂತರ ಮಾಡಿದ ಶ್ರಾದ್ಧ............................... (2)
23. ಅರಸರು ಕುಡಿದ ಹಣ್ಣಿನ ದ್ರವ.................................. (2)
25. ಸರದ ನಡುವೆ ಒಬ್ಬರಿಗೊಬ್ಬರು ನೀಡಿದ ಪರಸ್ಪರ ಸಹಾಯ...... (4)
26. ತಪ್ಪಿದಾಗ ಸರಿ ಪಡಿಸಿದ್ದು ........................................ (4)

**ಮೇಲಿನಿಂದ ಕೆಳಕ್ಕೆ**

2. ವರದಿ ನೀಡಿದ ನಂತರ ಸಿಕ್ಕ ಸಪ್ತಾಹದ ಸೂಚಿ..................... (5)
3. ಗಮನ ವಿಲ್ಲದ ಸುಪುತ್ರ ತಿರುಗಿದ್ದಾನೆ ............................ (2)
4. ಅನುರಾಗದಿಂದ ಮೂಡಿ ಬಂದ ಸಂಗೀತದ ಸ್ವರ ............... (2)
5. ಅಪರೂಪಕ್ಕಾಗಿ ಬಂದವರನ್ನು ಇತರರಿಗೆ ಗುರುತು ಮಾಡಿ ಕೊಡು (5)
7. ತಕ ತಕನೇ ಕುಣಿಯುವ ಆತುರ.................................. (3)
8. ನಸುಕಿನಲ್ಲಿ ಎದ್ದು ನಮಸ್ಕರಿಸು ................................. (3)
11. ನವದ ನಡುವೆ ಕಾಣಿಸಿಕೊಂಡ ಹೊಸ ಮನುಷ್ಯ.................. (5)
13. ಪ್ರಪಂಚದಲ್ಲಿ ಕಂಡಿದ್ದು ಸಾಧಾರಣವಲ್ಲ. ಅತೀ ಉಗ್ರ ........... (3)
14. ನ್ಯೂನತೆಗಳನ್ನು ಸರಿ ಪಡಿಸಿದಾಗ ಸಿಕ್ಕ ಹೊಸತು .................. (3)
16. ಪ್ರವಾಹದಂತೆ ಮುನ್ನುಗ್ಗಿ ಬಂದ ಜನರ ಗುಂಪು ..................... (5)
17. ಗರ ಬಡಿದಾಗ ಕಂಡು ಬರುವ ಕಡಲ ಜ್ಯೋತಿ .................. (5)
19. ಆಹ್ವಾನ ನೀಡಿದಾಗ ಅತೀ ವಿನಯಪೂರ್ವಕವಾಗಿ ಬಂದವರು ಇವರು ............................................................ (3)
20. ಜೈಕಾರ ಮಾಡುವ ಬದಲಾಗಿ ವ್ಯಕ್ತ ಪಡಿಸಿದ ವಿರೋಧ........... (3)
22. ಸುರ ಸುಂದರಿಯಂತೆ ಕಾಣುವ ಕಾಮನ ಸತಿ ತಿರುಗಿದ್ದಾಳೆ........ (2)
24. ಸಂತೋಷದಿಂದ ಜೀವನ ನಡೆಸಿದ ಪತ್ನಿ ......................... (2)

■ ಜವಳಿ ವೀರಣ್ಣ

(ಉತ್ತರ : ಮುಂದಿನ ಸಂಚಿಕೆಯಲ್ಲಿ )

# ವಿಚಾರಣಾ ಆಯೋಗಗಳ ರಾಜಕೀಯ

**ವಿಚಾರಣಾ ಆಯೋಗಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು ನ್ಯಾಯಾಧೀಶರೇ ಆಗಿದ್ದರೂ ಸಹ ಅವರು ತಮ್ಮ ವಿಚಾರಣೆಯ ಮೂಲಕ ತಪ್ಪಿತಸ್ಥರನ್ನು ಗುರುತಿಸಬಲ್ಲರೇ ವಿನಾ ಅವರನ್ನು ಶಿಕ್ಷಿಸುವ ಹಕ್ಕನ್ನು ಹೊಂದಿಲ್ಲ. ಇಂದಿನ ವಿವಾದಿತ ವರದಿಗಳನ್ನು ನೀಡಿದ ಶ್ರೀಕೃಷ್ಣ, ಜೈನ್ ಇಬ್ಬರೂ ನ್ಯಾಯಮೂರ್ತಿಗಳೇ. ಅವರಿಗೆ ಏಕಕಾಲದಲ್ಲಿ ವಿಚಾರಣೆ ನಡೆಸುವ ಹಾಗೂ ಶಿಕ್ಷೆ ನೀಡುವ ಹಕ್ಕನ್ನು ನೀಡಬಾರದೇಕೆ?**

ರಾಜಕಾರಣಿಗಳ ಯೋಚನೆಗಳು ಸದಾ ತಮ್ಮ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲೇ ಸಾಗುತ್ತಿರುತ್ತವೆ. ಅಂತೆಯೇ ಅವರು ತಮ್ಮ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಿರಂತರವಾಗಿ ಯಾವುದಾದರೊಂದು ಸಮಸ್ಯೆಯ ಅನ್ವೇಷಣೆಯಲ್ಲಿ ತೊಡಗಿರುತ್ತಾರೆ. ಸಮಾಜದಲ್ಲಿ ಸಮಸ್ಯೆಗಳು ಇಲ್ಲದಿದ್ದಲ್ಲಿ ತಾವೇ ಹುಟ್ಟು ಹಾಕುತ್ತಾರೆ. ಜನಮನದಿಂದ ಮರೆಯಾದ ಹಳೆಯ ಸಮಸ್ಯೆಗಳಿಗೆ ಪುನರ್ ಜೀವ ನೀಡಿ ತಮ್ಮ ರಾಜಕೀಯ ಬೇಳೆ ಬೇಯಿಸಿಕೊಳ್ಳುತ್ತಿರುತ್ತಾರೆ.

ಪ್ರಸ್ತುತ ರಾಷ್ಟ್ರದ ರಾಜಕಾರಣಿಗಳ ದೃಷ್ಟಿಯೆಲ್ಲಾ ಇತ್ತೀಚಿನ ದಿನಗಳಲ್ಲಿ ಭಾರೀ ಸುದ್ದಿ ಮಾಡಿದ ಎರಡು ವಿಚಾರಣಾ ಆಯೋಗಗಳು ನೀಡಿದ ವರದಿಗಳ ಮೇಲೆ ಕೇಂದ್ರೀಕೃತಗೊಂಡಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಅವುಗಳಲ್ಲಿ ಒಂದು ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರ ಹತ್ಯೆ ಕುರಿತು ನ್ಯಾಯಾಂಗ ತನಿಖೆ ನಡೆಸಿದ ಜೈನ್ ಆಯೋಗದ ವರದಿ. ಮತ್ತೊಂದು ಐದು ವರ್ಷಗಳ ಹಿಂದೆ ಮುಂಬೈನಲ್ಲಿ ನಡೆದ ಕೋಮು ಗಲಭೆಗೆ ಕಾರಣಗಳನ್ನು ವಿವರಿಸಿದ ಶ್ರೀ ಕೃಷ್ಣ ಆಯೋಗದ ವರದಿ.

ಎರಡು ವರದಿಗಳನ್ನು ಕ್ರಮವಾಗಿ ಲೋಕಸಭೆ ಮತ್ತು ಮಹಾರಾಷ್ಟ್ರ ವಿಧಾನ ಸಭೆಗಳಲ್ಲಿ ಬಹಿರಂಗಗೊಳಿಸಿದ ನಂತರ ಉಭಯ ಆಡಳಿತ ವಿರೋಧ ಪಕ್ಷಗಳೆರಡು ತಮ್ಮ ಪಕ್ಷಗಳ ಒಳಿತನ್ನು ದೃಷ್ಟಿಯಲ್ಲಿಟ್ಟುಕೊಂಡು ರಾಜಕೀಯ ನಡೆಸುತ್ತಿರುವುದು ಬಹಿರಂಗ ರಹಸ್ಯ.

ಶ್ರೀಕೃಷ್ಣ ಆಯೋಗದ ವರದಿ ತಮ್ಮ ರಾಜಕೀಯ ಗುರು ಬಾಳಠಾಕ್ರೆಯವರನ್ನು ಆರೋಪಿಯನ್ನಾಗಿ ಚಿತ್ರಿಸಿರುವುದನ್ನು ಜೀರ್ಣಿಸಿಕೊಳ್ಳದ ಮಹಾರಾಷ್ಟ್ರ ಮುಖ್ಯಮಂತ್ರಿ ಮನೋಹರ ಜೋಷಿ ಇಡೀ ವರದಿಯನ್ನು ಏಕಪಕ್ಷೀಯವಾಗಿ ಹಿಂದೂ ವಿರೋಧಿ ಎಂದು ತಿರಸ್ಕರಿಸಿದ್ದಾರೆ.

ವಿವಿಧ ಅವ್ಯವಹಾರಗಳಲ್ಲಿ ಭಾಗಿಗಳೆಂಬ ಆರೋಪ ಹೊತ್ತು, ತಮ್ಮ ಮೇಲೆ ನ್ಯಾಯಾಂಗ ತನಿಖೆ ನಡೆಯುತ್ತಿರುವುದನ್ನು ವಿರೋಧಿಸುವ ಲಾಲೂ ಪ್ರಸಾದ್ ಯಾದವ್, ಮುಲಾಯಂ ಸಿಂಗ್ ಯಾದವ್ ಅಂತಹ ವ್ಯಕ್ತಿಗಳು ಕೃಷ್ಣ ಆಯೋಗದ ವರದಿಯನ್ನು ಜಾರಿಗೆ ತರುವುದಕ್ಕಾಗಿ ಜೀವ ತೆರುವ ಮಾತನಾಡುತ್ತಿದ್ದಾರೆ.

ಜೈನ್ ಆಯೋಗದ ವರದಿಯ ಬಗ್ಗೆ ಹೆಚ್ಚು ಮಾತನಾಡಲು ಇಚ್ಛಿಸದ ಕಾಂಗ್ರೆಸ್ ನಾಯಕರು ಶ್ರೀ ಕೃಷ್ಣ ಆಯೋಗದ ಜಾರಿಗೆ ಆಗ್ರಹಿಸಿ ರಾಜ್ಯಪಾಲರಿಗೆ ಮನವಿ ಸಲ್ಲಿಸಿದ್ದಾರೆ.

ಜೈನ್ ಆಯೋಗದ ವರದಿ ಬಗ್ಗೆ ತುಟಿ ಬಿಚ್ಚದ ಸುಬ್ರಹ್ಮಣ್ಯ ಸ್ವಾಮಿ, ವಿ.ಪಿ.ಸಿಂಗ್, ಚಂದ್ರಶೇಖರ್ ಅವರಿಗೆ ಕೃಷ್ಣ ಆಯೋಗದ ವರದಿ ಜಾರಿಗೆ ಬರಲೇಬೇಕು. ಅದು ಅವರ ದೃಷ್ಟಿಯಲ್ಲಿ ಪವಿತ್ರವಾದದು. ಈ ನಾಯಕರುಗಳಿಗೆ ನ್ಯಾಯಾಂಗ ತನಿಖೆ ನಡೆಸುವ ಆಯೋಗಗಳ ಬಗ್ಗೆ ಅದೆಷ್ಟು ಬದ್ಧತೆ ಎಂದರೆ ಅವು ನೀಡುವ ವರದಿಗಳು ತಮಗೆ, ತಮ್ಮ ಪಕ್ಷಗಳಿಗೆ ಅನುಕೂಲಕರ ಆಗಿದ್ದಲ್ಲಿ ಎತ್ತಿಹಿಡಿಯುವುದು ಇಲ್ಲವಾದಲ್ಲಿ ತಿರಸ್ಕರಿಸುವುದು ವಾಡಿಕೆಯಾಗಿದೆ.

ವಿಚಾರಣಾ ಆಯೋಗಗಳ ವರದಿಗಳಿಗೆ ಸಂಬಂಧಿಸಿದಂತೆ ರಾಜಕಾರಣಿಗಳ ಇಂತಹ ವರ್ತನೆ ಇಂದು ನಿನ್ನೆಯಿಂದ ರೂಢಿಸಿಕೊಂಡದ್ದಲ್ಲ.

ಸ್ವತಂತ್ರ ಭಾರತದಲ್ಲಿ ಮೊದಲ ಬಾರಿಗೆ ವಿಚಾರಣಾ ಆಯೋಗಗಳನ್ನು ನೇಮಿಸಲು ಆರಂಭಿಸಿದ್ದು ನೆಹರು ಸರ್ಕಾರ. ಮೊದಲ ಆಯೋಗದ ನೇತೃತ್ವ ವಹಿಸಿದವರು ನ್ಯಾಯಮೂರ್ತಿ ಎಂ.ಸಿ. ಚಾಗ್ಲಾ.

ನೆಹರು ಪ್ರಧಾನಿಯಾಗಿದ್ದ ಅವಧಿಯಲ್ಲಿ 'ಮುಂಧ್ರಾ' ಎನ್ನುವ ವ್ಯಕ್ತಿ ಆರ್ಥಿಕ ಇಲಾಖೆಯಲ್ಲಿ ನಡೆಸಿದ್ದ ಅವ್ಯವಹಾರದ ಕುರಿತು ತನಿಖೆ ನಡೆಸಲು ನ್ಯಾಯಮೂರ್ತಿ ಎಂ.ಸಿ. ಚಾಗ್ಲಾ ಅವರ ಅಧ್ಯಕ್ಷತೆಯಲ್ಲಿ ಒಂದು ಆಯೋಗವನ್ನು ನೇಮಿಸಲಾಗಿತ್ತು. ಆಯೋಗ ಆರ್ಥಿಕ ಇಲಾಖೆಯಲ್ಲಿ ನಡೆದ ಅವ್ಯವಹಾರಗಳೆಲ್ಲವನ್ನೂ ಬಯಲಿಗಿಟ್ಟಾಗ ಅಂದಿನ ಪ್ರತಿಪಕ್ಷಗಳು ವಿತ್ತ ಮಂತ್ರಿ ಟಿ.ಟಿ. ಕೃಷ್ಣಮಾಚಾರಿಯವರ ರಾಜೀನಾಮೆಗೆ ಆಗ್ರಹಿಸಿದವು.

ಆದರೆ ಸದರಿ ಕೃಷ್ಣಮಾಚಾರಿ ಪ್ರಧಾನಿ ನೆಹರು ಅವರ ಆಪ್ತನಾಗಿದ್ದ ಕಾರಣ, ನೆಹರು ತಮ್ಮ ವಿತ್ತ ಮಂತ್ರಿ ರಾಜೀನಾಮೆ ನೀಡುವ ಅಗತ್ಯವಿಲ್ಲ ಎಂದು ವಾದಿಸಿದ್ದರಲ್ಲದೇ, ಆಯೋಗದ ಅಧ್ಯಕ್ಷ ಎಂ.ಸಿ. ಚಾಗ್ಲಾರನ್ನು ದೂಷಿಸಿದ್ದರು. ನಂತರ ಪ್ರತಿಪಕ್ಷಗಳ ಒತ್ತಡಕ್ಕೆ ಮಣಿದು ಟಿ.ಟಿ.ಕೆ. ಯವರನ್ನು ಸಂಪುಟದಿಂದ ಕೈ ಬಿಡಬೇಕಾಯಿತು.

ಇಲ್ಲಿ ಒಂದು ಗಮನಾರ್ಹವಾದ ಸಂಗತಿಯೆಂದರೆ ಅಂದಿನ ಪ್ರಧಾನಿ ನೆಹರು ಅವರ ವರ್ತನೆಗೂ, ಇಂದಿನ ಮಹಾರಾಷ್ಟ್ರ ಮುಖ್ಯಮಂತ್ರಿ ಮನೋಹರ ಜೋಷಿಯವರ ವರ್ತನೆಗೂ ಭಾರಿ ವ್ಯತ್ಯಾಸ ಇಲ್ಲದಿರುವುದು.

ಈ ಇಬ್ಬರು ನಾಯಕರುಗಳಿಗೂ ತಮ್ಮ ಸರ್ಕಾರಗಳೇ ನೇಮಿಸಿದ್ದ ವಿಚಾರಣಾ ಆಯೋಗಗಳು ನೀಡಿದ ವರದಿಗಳು ತಮಗೆ ರುಚಿಸುತ್ತಿಲ್ಲ. ಅಂದು ತಮ್ಮ ಆತ್ಮೀಯನೆಂಬ ಕಾರಣಕ್ಕೆ ಟಿ.ಟಿ.ಕೆಯವರನ್ನು ದೋಷಿ ಎಂದು ಒಪ್ಪಿಕೊಂಡು, ಸಂಪುಟದಿಂದ ಕೈ ಬಿಡಲು ನೆಹರು ಇಷ್ಟ ಪಡಲಿಲ್ಲ. ಇಂದು ಮನೋಹರ ಜೋಷಿಯವರಿಗೆ ತಮ್ಮ ಗುರು ಬಾಳಠಾಕ್ರೆಯನ್ನು ತಪ್ಪಿತಸ್ಥರೆಂದು ಒಪ್ಪಿಕೊಳ್ಳುವ ಮನಸ್ಥಿತಿ ಇಲ್ಲ.

ಪಕ್ಷ, ಸಿದ್ಧಾಂತಗಳು ಬೇರೆ ಬೇರೆ ಆಗಿದ್ದರೂ, ರಾಜಕಾರಣಿಗಳ ಸ್ವಾರ್ಥ ಲಾಲಸೆ ಮಾತ್ರ ಒಂದೇ ಎನ್ನುವುದಕ್ಕೆ ಇಂತಹ ಹತ್ತು ಹಲವು ಘಟನೆಗಳು ನಮ್ಮ ದೇಶದಲ್ಲಿ ಕಾಣ ಸಿಗುತ್ತವೆ.

ವಿಚಾರಣಾ ಆಯೋಗದ ವರದಿಯನ್ನು ತಿರಸ್ಕರಿಸಿರುವುದು ಇದೇ ಮೊದಲ ಭಾರಿಯೇನೋ ಎಂಬಂತೆ ಹಲವು ರಾಜಕೀಯ

ಪಕ್ಷಗಳು ಹುಟ್ಟು ಹಾಕುತ್ತಿರುವ ರಾಜಕೀಯ ರಗಳೆ, ರಾಜಕೀಯ ಪರವಾದುದೇ ಹೊರತು ಮತ್ತೇನಲ್ಲ.

ನಮ್ಮ ದೇಶದಲ್ಲಿ ಬೆಳಕಿಗೆ ಬಾರದಿರುವ ವಿಚಾರಣಾ ಆಯೋಗಗಳ ವರದಿಗಳು ಸಾಕಷ್ಟಿವೆ. ಕೃಷ್ಣ ಆಯೋಗ ಬಾಳಠಾಕ್ರೆಯವರನ್ನು ತಪ್ಪಿತಸ್ಥರು ಎಂದಂತೆ, ಷಾ-ಆಯೋಗ ಇಂದಿರಾ ಗಾಂಧಿಯವರನ್ನು ದೋಷಿಯನ್ನಾಗಿ ಚಿತ್ರಿಸಿತ್ತು.

ಇಂದಿರಾ ಗಾಂಧಿಯವರು ತಮ್ಮ ರಾಜಕೀಯ ಲಾಭಕ್ಕಾಗಿ ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ತಂದು, ವಿರೋಧ ಪಕ್ಷಗಳ ನಾಯಕರನ್ನು ಸೆರೆಮನೆಗೆ ತಳ್ಳಿದ ನಾಯಕಿಯನ್ನಾಗಿ ಷಾ-ಆಯೋಗ ವರ್ಣಿಸಿತ್ತು. ಅದರಂತೆ 1963ರಲ್ಲಿ ಅಂದಿನ ಪಂಜಾಬ್ ಮುಖ್ಯಮಂತ್ರಿ ಪ್ರತಾಪ್‌ಸಿಂಗ್ ಕೈರಾನ್ ಮೇಲೆ ದಾಸ್ ಆಯೋಗ, 1967ರಲ್ಲಿ ಕಾಶ್ಮೀರದ ಮುಖ್ಯಮಂತ್ರಿ ಭಕ್ಷಿ ಗುಲಾಮ್ ಮೊಹಮ್ಮದ್ ಮೇಲೆ ಅಯ್ಯಂಗಾರ್ ಆಯೋಗ, ಕೇರಳದ ಕೆಲವು ಮಂತ್ರಿಗಳ ಅವ್ಯವಹಾರದ ಮೇಲೆ ಮುಲ್ಲಾ ಆಯೋಗ, 1977ರಲ್ಲಿ ಮುಖ್ಯಮಂತ್ರಿ ದೇವರಾಜ್ ಅರಸ್ ಮೇಲೆ ಗ್ರೋವರ್ ಆಯೋಗ ಹೀಗೆ ರಾಜಕಾರಣಿಗಳ ಮೇಲೆ ವಿಚಾರಣೆ ನಡೆಸಿದ ಆಯೋಗಗಳು ನೂರಕ್ಕೂ ಹೆಚ್ಚಿವೆ.

ಇವುಗಳಲ್ಲದೇ ಕೋಮು ಗಲಭೆಗಳು, ಲಾಕಪ್ ಸಾವು, ರೈಲ್ವೆ ಅಪಘಾತಗಳು, ಗೋಲಿಬಾರ್ ಮುಂತಾದವುಗಳ ಮೇಲೆ ಹಲವಾರು ಆಯೋಗಗಳು ತನಿಖೆ ನಡೆಸಿವೆ. ಒಟ್ಟಿನಲ್ಲಿ ಸುಮಾರು 5000ಕ್ಕೂ ಹೆಚ್ಚು ವಿಚಾರಣಾ ಆಯೋಗಗಳು ಕಾರ್ಯ ನಿರ್ವಹಿಸಿವೆ ಎಂಬ ಅಂದಾಜಿದೆ.

1952ರಲ್ಲಿ ಜಾರಿಗೆ ಬಂದ ಈ ವಿಚಾರಣಾ ಆಯೋಗಗಳ ಕಾನೂನು ಎಷ್ಟೊಂದು ದೋಷ ಪೂರಿತ ಎಂಬುದನ್ನು ಇಲ್ಲಿ ತಿಳಿಯಬಹುದು.

1952ರ ವಿಚಾರಣಾ ಆಯೋಗಗಳ ಕಾನೂನಿನ ಕಲಮು 3ರ ಪ್ರಕಾರ ಯಾವುದೇ ನಿರ್ದಿಷ್ಟ ಸಾರ್ವಜನಿಕರ ಮಹತ್ವದ ವಿಷಯದ ಮೇಲೆ ವಿಚಾರಣೆಯನ್ನು ನಡೆಸುವುದು ಅವಶ್ಯವೆಂದು ಕಂಡು ಬಂದರೆ, ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ಇಂತಹ ವಿಚಾರಣಾ ಆಯೋಗಗಳನ್ನು ನಿಯಮಿಸಬಹುದು.

ಆಯೋಗ ಒಬ್ಬರು ಅಥವಾ ಒಬ್ಬರಿಗಿಂತ ಹೆಚ್ಚು ಸದಸ್ಯರನ್ನು ಹೊಂದಿರಬಹುದು. ಒಬ್ಬರಿಗಿಂತ ಹೆಚ್ಚು ಸದಸ್ಯರು ಆಯೋಗದಲ್ಲಿ ಇದ್ದಲ್ಲಿ ಅವರಲ್ಲೇ ಒಬ್ಬರನ್ನು ಅಧ್ಯಕ್ಷರನ್ನಾಗಿ ನೇಮಿಸಬೇಕಾಗುತ್ತದೆ. ಆಯೋಗಕ್ಕೆ ಯಾರನ್ನು ಸದಸ್ಯರನ್ನಾಗಿ ನೇಮಿಸಬೇಕೆಂಬುದನ್ನು ಸರ್ಕಾರವೇ ನಿರ್ಧರಿಸುತ್ತದೆ. ಹಾಲಿ, ಮಾಜಿ ನ್ಯಾಯಾಧೀಶರು, ನಿವೃತ್ತ IAS ಅಧಿಕಾರಿಗಳು ಇವುಗಳ ನಾಯಕತ್ವವನ್ನು ವಹಿಸಲು ಅರ್ಹರಾಗಿರುತ್ತಾರೆ. ಆಯೋಗಗಳಿಗೆ ಅವಶ್ಯಕವಾದ ಧನ ಸಹಾಯವನ್ನು ಸರ್ಕಾರವೇ ಒದಗಿಸುತ್ತದೆ.

ಹೀಗೆ ನೇಮಕಗೊಂಡ ಆಯೋಗ ಸಾಕಷ್ಟು ಹಣ, ಸಮಯವನ್ನು ವ್ಯಯಿಸಿ ನೀಡಿದ ವರದಿಯು ಕೇವಲ ಶಿಫಾರಸು ಮಾತ್ರ ಆಗಿದ್ದು ಸರ್ಕಾರ ಅದನ್ನು ಒಪ್ಪಲೇ ಬೇಕೆಂಬ ನಿಯಮ ನಿಬಂಧನೆ ಇಲ್ಲದಿರುವುದು ಈ ಕಾನೂನಿನ ಲೋಪವೇ ಸರಿ. ಈ ಆಧಾರದ ಮೇಲೆಯೇ ಇಂದು ಮಹಾರಾಷ್ಟ್ರ ಸರ್ಕಾರ ಶ್ರೀಕೃಷ್ಣ ಆಯೋಗದ ವರದಿಯನ್ನು ತಿರಸ್ಕರಿಸಿದೆ.

ಇದರಲ್ಲಿರುವ ಮತ್ತೊಂದು ದೋಷ ಎಂದರೆ ಆಯೋಗಗಳು ನೀಡುವ ವರದಿಗಳನ್ನು ಸಂಸತ್ತು, ವಿಧಾನಸಭೆಗಳಿಗೆ ಒಪ್ಪಿಸಬೇಕೆಂಬ

**ನಮ್ಮ ದೇಶದಲ್ಲಿ ಬೆಳಕಿಗೆ ಬಾರದಿರುವ ವಿಚಾರಣಾ ಆಯೋಗಗಳ ವರದಿಗಳು ಸಾಕಷ್ಟಿವೆ. ಕೃಷ್ಣ ಆಯೋಗ ಬಾಳಠಾಕ್ರೆಯವರನ್ನು ತಪ್ಪಿತಸ್ಥರು ಎಂದಂತೆ, ಷಾ-ಆಯೋಗ ಇಂದಿರಾ ಗಾಂಧಿಯವರನ್ನು ದೋಷಿಯನ್ನಾಗಿ ಚಿತ್ರಿಸಿತ್ತು.**

ನಿಬಂಧನೆಯನ್ನು ಅಂದು ಕಾನೂನು ರಚನೆಗೊಂಡ ಸಂದರ್ಭದಲ್ಲಿ ಸೇರಿಸಿರಲಿಲ್ಲ.

1990ರಲ್ಲಿ ಈ ಕಾನೂನಿಗೆ ತಿದ್ದುಪಡಿ ತಂದ ನಂತರವೇ ಆಯೋಗಗಳು ನೀಡಿದ ವರದಿಗಳು, ಅವುಗಳ ಮೇಲೆ ಸರ್ಕಾರ ಕೈಗೊಂಡ, ಕೈಗೊಳ್ಳಬಹುದಾದ ಕ್ರಮಗಳನ್ನು ಬಹಿರಂಗ ಗೊಳಿಸುವುದು ನಡೆದಿದೆ.

ವಿಚಾರಣಾ ಆಯೋಗಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು ನ್ಯಾಯಾಧೀಶರೇ ಆಗಿದ್ದರೂ ಸಹ ಅವರು ತಮ್ಮ ವಿಚಾರಣೆಯ ಮೂಲಕ ತಪ್ಪಿತಸ್ಥರನ್ನು ಗುರುತಿಸಬಲ್ಲರೇ ವಿನಹ ಅವರನ್ನು ಶಿಕ್ಷಿಸುವ ಹಕ್ಕನ್ನು ಹೊಂದಿಲ್ಲ. ಇಂದಿನ ವಿವಾದಿತ ವರದಿಗಳನ್ನು ನೀಡಿದ ಶ್ರೀ ಕೃಷ್ಣ, ಜೈನ್ ಇಬ್ಬರೂ ನ್ಯಾಯಮೂರ್ತಿಗಳೇ. ಅವರಿಗೆ ಏಕಕಾಲದಲ್ಲಿ ವಿಚಾರಣೆ ನಡೆಸುವ ಹಾಗೂ ಶಿಕ್ಷೆ ನೀಡುವ ಹಕ್ಕನ್ನು ನೀಡಬಾರದೇಕೆ?

ಇಂತಹ ಆಯೋಗಗಳ ಜವಾಬ್ದಾರಿಯನ್ನು ಹೊರುವುದರಿಂದ ತಾವುಗಳು, ಇಲ್ಲ ಸಲ್ಲದ ಅಪವಾದಗಳಲ್ಲಿ ಸಿಲುಕುತ್ತಿರುವುದರ ಕುರಿತು ನ್ಯಾಯಾಧೀಶರಲ್ಲಿ ಪುನರ್ ಚಿಂತನೆ ಆರಂಭವಾಗಿದೆ.

ಸರ್ಕಾರಗಳು ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳಲು ಆಯೋಗಗಳನ್ನು ರಚಿಸಿ ನಂತರ ಅವುಗಳ ವರದಿಗಳನ್ನು ತಮ್ಮ ರಾಜಕೀಯ ಲಾಭಕ್ಕಾಗಿ ಉಪಯೋಗಿಸುತ್ತವೆ. ಇದೆಲ್ಲದರಿಂದ ಸಮಯ ಹಣ ಪೋಲಾಗುವುದು ಬಿಟ್ಟರೆ ಬೇರೆ ಯಾವ ಪ್ರಯೋಜನವಿಲ್ಲ ಎಂಬ ಮಾತುಗಳು ಜನಸಾಮಾನ್ಯರಿಂದ ಕೇಳಿ ಬರುತ್ತಿವೆ.

ಇದಲ್ಲದೇ ಈ ವಿಚಾರಣಾ ಆಯೋಗಗಳು ತಮ್ಮ ವರದಿಗಳನ್ನು ನೀಡಲು ಹಲವು ವರ್ಷಗಳನ್ನು ತೆಗೆದುಕೊಳ್ಳುತ್ತವೆ. ನಂತರ Prosecution ಹೀಗೆ ಎಲ್ಲಾ ಪ್ರಕ್ರಿಯೆಗಳು ಮುಗಿಯುವುದರೊಳಗೆ ಸಮಸ್ಯೆಯೇ ಜನಮನದಿಂದ ದೂರವಾಗಿರುತ್ತದೆ.

ಒಟ್ಟಾರೆ ಇಂತಹ ವಿಚಾರಣಾ ಆಯೋಗಗಳನ್ನು ಸರ್ಕಾರ ನೇಮಿಸುವುದು. ಅವುಗಳಿಗೆ ಯಾವ ಬದ್ಧತೆ ನೀಡದೆ ವರದಿಗಳನ್ನು ವಿವಾದಕ್ಕೆಳೆಯುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. ಇದರಿಂದ ಯಾರಿಗಾದರೂ ಪ್ರಯೋಜನವಿದೆಯೇ ಯೋಚಿಸಬೇಕಾದ ಸಂಗತಿ.

■ ಕೆ.ಎಂ. ಚಂದ್ರಮೌಳಿ



ಹೊಸ ವರ್ಷ '99'ರಲ್ಲಿ ಹಳ್ಳಕ್ಕೆ ಬೀಳುವ ಇನ್ನೊಂದು ಯೋಜನೆ ಈ ಒಂಬತ್ತನೆ ಯೋಜನೆ?

## ನೀವು ಕಥೆಗಾರರಾಗಬೇಕೆ?......................

**ನಿಮಗೂ ಕಥೆಗಾರರಾಗಬೇಕೆಂಬ ಆಸೆ ಇರಬಹುದಲ್ಲವೆ? ನಿಮ್ಮಂತಹ ಚಿಗುರು ಪ್ರತಿಭೆಗಳಿಗೆ ಪ್ರೋತ್ಸಾಹ ನೀಡಲಿಕ್ಕಾಗಿಯೇ ಈ ಅಂಕಣ ಮೀಸಲು. ನೀವು ಮಾಡಬೇಕಾದುದಿಷ್ಟೇ; ಈ ಕೆಳಗೆ ನಾವೊಂದು ಕಥೆ ನೀಡಿದ್ದೇವೆ. ಆದರೆ ಅದು ಅಪೂರ್ಣ. ಅದನ್ನು ಪೂರ್ಣಗೊಳಿಸಬೇಕಾದವರು ನೀವೇ!**

### ಅಪೂರ್ಣ ಕತೆ

ಅರಳಹಳ್ಳಿಯಲ್ಲಿ ಐದನೇ ತರಗತಿ ಓದುವ ವೀರೇಶ್ ತುಂಬಾ ಚುರುಕು ಬುದ್ಧಿಯುಳ್ಳವ, ಪಠ್ಯ ಹಾಗೂ ಪಠ್ಯೇತರ ವಿಷಯಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದನು. ಈತನೆಂದರೆ ಶಿಕ್ಷಕರಿಗೆ ಪ್ರೀತಿ. ಈತ ಬುದ್ಧಿವಂತ ಎಂದ ಮಾತ್ರಕ್ಕೆ ಚೇಷ್ಟೆ ಇಲ್ಲವೆಂದಲ್ಲ, ಈ ವಿಷಯದಲ್ಲೂ ಒಂದು ಹೆಜ್ಜೆ ಮುಂದೆ.

ಈಗಿರಲು ಜನವರಿ 26ರಂದು ಗಣರಾಜ್ಯೋತ್ಸವ ಪ್ರಯುಕ್ತ ಶಾಲೆಯಲ್ಲಿ ಪೂಜೆ ಇತ್ತು. ಶಾಲೆಯ ಮುಖ್ಯ ಗುರುಗಳಾದ ಬಸವಂತಪ್ಪ ಅವರು ವೀರೇಶ್‌ನನ್ನು ಕರೆದು ಐದು ರೂ. ಕೊಟ್ಟು ಒಂದು ತೆಂಗಿನ ಕಾಯಿ ತರಲು ಹೇಳಿದರು. ಅಂಗಡಿಗೆ ಹೋದ ವೀರೇಶ್ ಕಾಯಿ ದರ ಕೇಳಿದ. 4 ರೂ. ಅಂದ ಅಂಗಡಿ ಮಾಲೀಕ. ಈತ 3.ರೂ.ಗೆ ಕೇಳಿದ ಕೊಡಲ್ಲ ಎಂದ ಅಂಗಡಿ ಮಾಲೀಕ. ಇದರಲ್ಲಿ ದುಡ್ಡು ಉಳಿಸಿ ಸಿಹಿ ತಿಂಡಿ ತಿನ್ನಬೇಕೆನ್ನುವ ಆಸೆ ವೀರೇಶ್‌ನದು. ಮತ್ತೆ ಮುಂದಿನ ಅಂಗಡಿಗೆ ಹೋದ ಅಲ್ಲಿ 3ರೂ. ಹೇಳಿದರೆ, ಈತ 2 ರೂ.ಗೆ ಕೇಳಿದ ಕೊಡದಿದ್ದಕ್ಕೆ ಎಲ್ಲಾ ಅಂಗಡಿ ತಿರುಗಿ ಕೊನೆಗೆ ಊರಾಚೆಯ ಒಂದು ಅಂಗಡಿಯಲ್ಲಿ ಕೇಳಿದ. ಅವರು 50 ಪೈಸೆ ಎಂದರು. ಅತೀ ಚಾಣಾಕ್ಷನಾದ ಈತ ತನ್ನ ಬುದ್ಧಿ ಉಪಯೋಗಿಸಿ ನಾನೇನು ಮನೆಗೆ ತಗೊಂಡೋಗಲ್ಲ, ಶಾಲೆಗಂದ್ರೆ ಒಂದು ಫ್ರೀ ಕೊಡಕ್ಕಾಗಲ್ವಾ ಎಂದು ದಬಾಯಿಸಿದ. ಅದಕ್ಕೆ ಮಾಲೀಕ ನೋಡು, ಅಲ್ಲಿ ಕಾಣುವ ನಮ್ಮ ತೆಂಗಿನ ತೋಟದಲ್ಲಿ ಹೋಗಿ ಒಂದು ತಕ್ಕೊಂಡು ಹೋಗು ಎಂದ. ಫ್ರೀ ಎಂದ ತಕ್ಷಣ ಖುಷಿಯಿಂದ ತೋಟದ ಕಡೆ ಹೋದ. ಮರ ಹತ್ತಕ್ಕೆ ಬರಲ್ಲಾ, ಫ್ರೀ ಸಿಗುತ್ತಲ್ಲಾ ಎಂದು ಧೈರ್ಯಮಾಡಿ ಹತ್ತಿದ. ಆದರ ಕೆಳಗೆ ಬಾವಿ ಇರುವುದು ಆತ ಮೇಲಿನಿಂದ ನೋಡಿದಾಗಲೇ ತಿಳಿದಿದ್ದು. ಕಾಯಿ ಕಿತ್ತು ಕೆಳಗೆ ಇಳಿಯಬೇಕೆನ್ನುವಷ್ಟರಲ್ಲಿ..............

**ಸೂಚನೆಗಳು :**

- ಹತ್ತನೆಯ ತರಗತಿಯವರೆಗಿನ ವಿದ್ಯಾರ್ಥಿಗಳು ಮಾತ್ರ ಈ ಕಥೆಯನ್ನು ಪೂರ್ಣಗೊಳಿಸಿ ಕಳುಹಿಸಲು ಅರ್ಹರು.
- ನಿಮ್ಮ ಬರವಣಿಗೆ ಅರ್ಧ ಫೂಲ್‌ಸ್ಕೇಪ್ ಹಾಳೆ ಮೀರದಿರಲಿ.
- ಆ ಹಾಳೆಯ ಹಿಂಬದಿಯಲ್ಲಿ 'ಕಿಲ ಕಿಲ ಕೂಪನ್' ಅಂಟಿಸಿರಬೇಕು.
- ಮುಂದಿನ ಸಂಚಿಕೆಯಲ್ಲಿ ಫಲಿತಾಂಶ.
- ನಿಮ್ಮ ಬರವಣಿಗೆ ನಮಗೆ ತಲುಪಲು ಅಂತಿಮ ದಿನಾಂಕ 15.2.1999

**ಕಿಲ ಕಿಲ ಕೂಪನ್ – (ಫೆಬ್ರವರಿ 99)**

ಹೆಸರು.......................................................

ತರಗತಿ........................... ವಯಸ್ಸು...................

ತಂದೆ.........................................................

ತಾಯಿ........................................................

ವಿಳಾಸ.......................................................

.................................................................

.................................................................

.................................................................

### ಲಂಚ

ಈಗೀಗ ಜನ ತೊಗೋತಾರೆ ಲಂಚ
ಕಛೇರಿಗಳಲ್ಲಿ ಕೊಂಚ
ಒಳಗೊಳಗೆ ಮಾಡ್ತಾರೆ ಸಂಚ
ಇದೇ ಈಗಿನ ಪ್ರಪಂಚ

### ಬಸ್ಸು

ಬಸ್ಸಿನಲ್ಲಿ ಎಂದೂ ಹೋಗಿರಲಿಲ್ಲ
ಪಯಣದ ಸುಖವ ತಿಳಿದಿರಲಿಲ್ಲ
ಅಬ್ಬಾ! ಜನರ ನೂಕು ನುಗ್ಗಾಟ
ಸಿಗರೇಟು ಸೇದುವವರ ಕಾಟವೊ ಕಾಟ
ಚಿಲ್ಲರೆ ಕೊಡದ ಕಂಡಕ್ಟರ್‌ನಿಂದ ಸಂಕಟ
ಶಾಲಾ ಮಕ್ಕಳ ಅರಚಾಟ
ಫುಟ್‌ಬೋರ್ಡ್ ಮೇಲೆ ಜನರ ತೂಗಾಟ
ಹೀಗಿತ್ತು ನನ್ನ ಒಂದು ದಿನದ ಬಸ್ ಪ್ರಯಾಣ

### ರಾಜಕಾರಣಿ

ರಾಜಕಾರಣಿಗಳೆಂದರೆ
ಜನರಿಗೆ ಮೊದಲಿನಿಂದಲೂ ಇಷ್ಟ
ಆದರೆ ಇವರೀಗ ಭ್ರಷ್ಟರು
ಇವರಿಂದಾಗುತ್ತಿದೆ ದೇಶಕ್ಕೆ ನಷ್ಟ
ಜನರಿಗೂ ಆಗುತ್ತಿದೆ ಬಹಳಕಷ್ಟ

**–ಆರ್.ಕೆ. ಆಕರ್ಷ**
9ನೇ ತರಗತಿ
ವಿ.ವಿ. ಸರ್ದಾರ್ ಪಟೇಲ್
ಪ್ರೌಢಶಾಲೆ

## ಕಳೆದ ತಿಂಗಳ ಅಪೂರ್ಣ ಕಥೆಯ ಮುಕ್ತಾಯ

**1**

ನಂದಿನಿ ತನ್ನ ಗುರಿಯನ್ನು ಬಹಿರಂಗ ಪಡಿಸಿದಳು. ತಂದೆ ತಾಯಿಯರ ಜತೆ ನಂದಿನಿ ಪಕ್ಕದ ಊರಿನ ಜಾತ್ರೆಗೆ ಹೋಗಿ ಬರುವಾಗ ಅನಿರೀಕ್ಷಿತ ಅಪಘಾತದಿಂದ ನಂದಿನಿಯ ತಾಯಿ ತೀರಿಕೊಂಡಳು. ತಂದೆ ಕಾಲನ್ನು ಕಳೆದು ಕೊಂಡು ಅಸಹಾಯಕನಾದ. ನಂದಿನಿ ಅಪಾಯದಿಂದ ಪಾರಾದಳು. ಶ್ರೀಮಂತರ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಹಾಗೂ ಪಾತ್ರೆ ತೊಳೆಯುವುದನ್ನು ಮಾಡಿ ತಂದೆಯನ್ನು ಸಾಕಿದಳು. ಆಕೆಯ ಪ್ರತಿಭೆಗೆ ಸ್ಕಾಲರ್‌ಶಿಪ್ ದೊರೆಯಿತು. ಶ್ರದ್ಧೆಯಿಂದ ವ್ಯಾಸಂಗ ಮಾಡಿದ ನಂದಿನಿ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಯನ್ನು, ತನ್ನ ಜೀವನದ ಅಡಿಪಾಯವಾಗಿಟ್ಟುಕೊಂಡು ಐ.ಎ.ಎಸ್. ಪಾಸು ಮಾಡಿದಳು. ಒಬ್ಬ ದಕ್ಷ ಅಧಿಕಾರಿಣಿಯಾಗಿ ಜನಸೇವೆ ಮಾಡುತ್ತ ತನ್ನ ತಂದೆಗೆ ನೆಮ್ಮದಿಯ ಬದುಕನ್ನು ನೀಡಿದಳು. 'ಮನಸಿದ್ದರೆ ಮಾರ್ಗ' ಎಂಬ ಗಾದೆಯನ್ನು ಅಕ್ಷರಶಃ ನಿಜ ಮಾಡಿದ ಛಲಗಾರ್ತಿಯಾದಳು.

**-ನಾಗರತ್ನಾ ಕೆ., ಶಹಾಪುರ**

**2**

ನಂದಿನಿ ಹೆಚ್ಚಿನ ವಿದ್ಯಾಭ್ಯಾಸದಲ್ಲಿ ತೊಡಗಿ ಹಂತ ಹಂತವಾಗಿ ಬೆಳೆದಳು. ಉನ್ನತ ಅಧಿಕಾರಿಯಾಗಿ ದೇಶಕ್ಕಾಗಿ, ನಾಡಿಗಾಗಿ ದುಡಿದಳು. ಕಿತ್ತೂರು ರಾಣಿ ಚೆನ್ನಮ್ಮ, ಒನಕೆ ಓಬವ್ವ, ಮದರ್ ಥೆರೆಸಾ ಹಾಗೆ ನಂದಿನಿಯು ಸಹ ಜನ ಸೇವೆ ಮಾಡುತ್ತಾ ದೇಶದ ಪ್ರಗತಿಗೆ ತನ್ನ ಕೊಡುಗೆಯನ್ನು ಸಲ್ಲಿಸಿದಳು. ಇದರಿಂದ ನಂದಿನಿ ಎಲ್ಲಾ ಹೆಂಗೆಳೆಯರ ಹೃದಯದಲ್ಲಿ ಮನೆ ಮಾಡಿದಳು.

**-ಎನ್.ವಿ. ಶೇಖರ್, ಚನ್ನಪಟ್ಟಣ**

**3**

ನಂದಿನಿಯು ಸಹನೆಯನ್ನು ಹೊಂದಿದ್ದವಳಾಗಿದ್ದರಿಂದ ತನ್ನ ಗುರಿಯನ್ನು ಮನದಟ್ಟಾಗಿ ಇಟ್ಟುಕೊಂಡು ಜೀವನದಲ್ಲಿ ಏಕತೆಯ ಬಾಳನ್ನು ಸಾಗಿಸಬೇಕೆಂಬ ಆಸೆಯಿತ್ತು. ಆದ್ದರಿಂದ ಸತತ ಪ್ರಯತ್ನದಿಂದ ತನ್ನ ಓದನ್ನು ಮುಂದುವರೆಸುತ್ತ ಪರಿಸರದ ಹಾಗೂ ಸಾಮಾಜಿಕ ಬೆಳವಣಿಗೆಯನ್ನು ಎತ್ತಿ ಹಿಡಿಯಬೇಕೆಂಬುದು ಅವಳ ಆಸೆಯಾಗಿತ್ತು. ಶಾಲೆಯಲ್ಲಿ ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳಲ್ಲಿಯೂ ಇತರ ಗೆಳತಿಯರೊಂದಿಗೆ ಬೆರೆತು ಶಾಲೆಯಲ್ಲಿ ಹೇಳಿದ ವಿಷಯವನ್ನು ಚರ್ಚೆ ಮಾಡುತ್ತಿದ್ದಳು. ಅವಳ ಮನದಲ್ಲಿ ಒಂದು ಶ್ರೇಷ್ಠತೆಯ ಬಾಳನ್ನು ನಡೆಸಿದ ಮಹಾತ್ಮ ಹೇಳಿದ ನುಡಿಗಳು ಮನದಟ್ಟಾಗುತ್ತಿದ್ದವು. ಹೀಗೆ ತಾನು ಜೀವನವನ್ನು ಸಾಗಿಸಬೇಕೆಂದು ಗುರಿಯನ್ನು ಇಟ್ಟುಕೊಂಡಿದ್ದಳು. ನಂದಿನಿಯು ಸುಖ ದುಃಖಗಳನ್ನು ಎಲ್ಲರ ಜತೆ ಹಂಚಿಕೊಳ್ಳುತ್ತಾ ಬಾಳಿನಲ್ಲಿ ಬರುವ ಘಟನೆಗಳನ್ನು, ಗಳಿಗೆಗಳನ್ನು ಕಳೆಯುತ್ತಾ ಗುರು ಹಿರಿಯರಿಗೆ ಒಳ್ಳೆಯ ಹೆಸರನ್ನು ತಂದಳು. ಸಾಮಾಜಿಕ ಸುಧಾರಣೆಗಾಗಿ ಪ್ರಯತ್ನಿಸುತ್ತಿದ್ದಳು.

**-ಸಿ. ಮಲ್ಲಿಕಾ, ಗಂಗಾವತಿ**

**4**

ನಂದಿನಿ ಛಲದಿಂದ ತನ್ನ ಗುರಿಯನ್ನು ಮುಟ್ಟಲೇಬೇಕೆಂದು ಚೆನ್ನಾಗಿ ಓದಿ ರ್‍ಯಾಂಕ್ ಪಡೆದಳು. ಹಲವಾರು ಸ್ಪರ್ಧೆಗಳಲ್ಲೂ ಬಹುಮಾನ ಪಡೆದಳು. ತನಗೆ ಅರಿವಿಲ್ಲದಂತೆಯೇ ಅವಳ ಹೆಸರು ಪ್ರಸಿದ್ಧಿಯಾಯಿತು. ತಾನು ಮಹಾನ್ ವಿಜ್ಞಾನಿಯಾಗಿ ಸಮಾಜದಲ್ಲಿ ಗುರುತಿಸುವವಳಾಗಬೇಕೆನ್ನುವ ಆಸೆಯನ್ನು ಯಾರಿಗೂ ಹೇಳದೆಯೇ ಮಾಡಿ ತೋರಿಸಿದಳು. ಶಿವಪುರದ ಜನರು ಅವಳನ್ನು ಹೊಗಳಿ ಕೊಂಡಾಡಿದರು.

**- ಬಿ.ಎಸ್. ಪ್ರತಿಭ, ಬಿಳಿದೇಗುಲ**

**5**

ನಂದಿನಿಯು ಸಮಾಜದಲ್ಲಿ ಉನ್ನತ ವ್ಯಕ್ತಿಯಾಗಬೇಕೆಂಬ ಆಸೆಯಿಂದ ಮತ್ತು ತಂದೆ ತಾಯಿಗಳ ಪ್ರೋತ್ಸಾಹದಿಂದ ಬಹಳ ಚೆನ್ನಾಗಿ ಓದಿ ಇಡೀ ರಾಜ್ಯಕ್ಕೆ ರ್‍ಯಾಂಕ್ ವಿಜೇತೆಯಾದಳು. ಇದರ ಜತೆಗೆ ಕಾಲೇಜಿಗೂ, ತಂದೆ ತಾಯಿಗಳಿಗೂ, ವಿದ್ಯೆ ಕಲಿಸಿದ ಗುರುಗಳಿಗೂ ಒಳ್ಳೆಯ ಕೀರ್ತಿಯನ್ನು ತಂದು ಕೊಟ್ಟಳು.

ನಂದಿನಿಗೆ ಮದರ್ ಥೆರೆಸಾರಂತೆ ರೋಗಿಗಳ ಯೋಗಕ್ಷೇಮ ಮತ್ತು ಅವರ ಸೇವೆಯಲ್ಲಿ ತೊಡಗಬೇಕೆಂಬುದು ಅವಳ ಗುರಿಯಾಗಿತ್ತು. ಅದರಂತೆಯೇ ಅವಳು ರೋಗಿಗಳ ಸೇವೆಯೇ ಈಶನ ಸೇವೆಯೆಂದು ತಿಳಿದು ಮದರ್ ಥೆರೆಸಾರಂತೆ ರೋಗಿಗಳ ಸೇವೆಗೆ ತನ್ನ ಜೀವನವನ್ನೇ ಮುಡುಪಾಗಿಟ್ಟಳು. ಮದರ್ ಥೆರೆಸಾರ ಇಷ್ಟಾರ್ಥಕ್ಕೆ ನಂದಿನಿಯು ಪಾತ್ರಳಾದಳು.

**-ಸಂಗಮೇಶ. ನಂದವಾಡಗಿ,**
ಹುನಗುಂದ

**6**

ನಂದಿನಿ ಶಿವಪುರದಲ್ಲಿ ವಿದ್ಯಾಭ್ಯಾಸ ಮುಗಿಸಿ ಪ್ರಥಮ ದರ್ಜೆಯಲ್ಲಿ ಪಾಸಾದಳು. ಅವಳು ತನ್ನ ಊರಲ್ಲಿ ಕಲಿಯಲು ಹೆಚ್ಚಿನ ಅವಕಾಶಗಳು ಇರಲಿಲ್ಲ. ಅವಳು ಬೇರೆ ಊರಿಗೆ ವಿದ್ಯಾಭ್ಯಾಸಕ್ಕಾಗಿ ಹೋಗಬೇಕಾಯಿತು. ಆಗ ತಂದೆ ತಾಯಿಗಳ, ಗುರುಗಳ ಆಶೀರ್ವಾದ ಪಡೆದುಕೊಂಡು ನಂದಿನಿ ಹೋದಳು. ಮುಂದಿನ ತರಗತಿಯಲ್ಲಿಯೂ ಪ್ರಥಮ ದರ್ಜೆಯಲ್ಲಿ ಪಾಸಾದಳು. ಆಗ ಅವಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಓದು ಮುಂದುವರಿಸಿದಳು. ಮುಂದೆ ಇಂಜಿನಿಯರ್ ಆಗಿ ದೇಶದಲ್ಲಿ ಗಣ್ಯವಕ್ತಿಯಾದಳು.

**-ಪ್ರದೀಪ ರಾ. ಅಳಲಗೇರಿ, ಹಾವೇರಿ**

**7**

ನಂದಿನಿ ಮನಸ್ಸಿನಲ್ಲಿ ತನ್ನದೇ ಆದ ನಿರ್ದಿಷ್ಟ ಗುರಿಯನ್ನು ಹೊಂದಿದ್ದು, ಅದನ್ನು ತನ್ನ ತಂದೆ ತಾಯಿಯರ ಬಳಿಯಲ್ಲಾಗಲೀ ಶಾಲೆಯ ಸಹಪಾಠಿಗಳ ಹತ್ತಿರವಾಗಲೀ ಬಹಿರಂಗವಾಗಿ ವ್ಯಕ್ತಪಡಿಸುತ್ತಿರಲಿಲ್ಲ. ಒಟ್ಟಿನಲ್ಲಿ ಏನೇ ಆಗಲಿ, ತಾನು ಜೀವನದಲ್ಲಿ ಸಾಧಿಸಬೇಕಾದ ಸಾಧನೆಗಳ ಬಗ್ಗೆ ಬಾಲ್ಯದಿಂದಲೇ ಚಿಂತಿಸುತ್ತಾ, ತಾನು ಮುಟ್ಟುವ ನಿರ್ದಿಷ್ಟ ಗುರಿಗಳ ಕಡೆಗೆ ನಾಗಾಲೋಟದಿಂದ ಸಾಗಿ, ಮಹಾನ್ ವ್ಯಕ್ತಿಗಳ ಸ್ಥಾನಕ್ಕೆ ತಾನೂ ಅರ್ಹಳಾಗಬೇಕೆಂಬ ಏಕೈಕ ಮಹದಾಸೆಯಿಂದ ಓದುತ್ತಿದ್ದಳು. ಮುಂದೆ ದೊಡ್ಡವಳಾದ ಮೇಲೆ ಇವಳ ಸಾಧನೆಯನ್ನು ತಂದೆ ತಾಯಿ, ಗುರುಗಳು, ಸ್ನೇಹಿತರು ಶ್ಲಾಘಿಸಿದರು. ಆ ಗುರಿಯನ್ನು ಮುಟ್ಟುವಲ್ಲಿ ಯಶಸ್ವಿಯಾದಳು.

**- ಕೆ.ಎಸ್. ಪ್ರಸನ್ನ, ದಾವಣಗೆರೆ**

# ನೋಟಿನ ನೋಟಿಗಳು

•ಏಕನಾಥ್-ಬೆಂಗಳೂರ್•









BISILA BADUKU Kannada Monthly FEBRUARY 1999 RNI No. 67406 / 97 Regd. BGW / 394